SAY NO TO DRUGS

## ವನಿತಾ ವಾಣಿ

ಅಕ್ಟೋಬರ 92ರ ವನಿತಾ ತುಂಬಾ ನಿರಾಶಾದಾಯಕವಾಗಿ ಮೂಡಿ ಬಂದಿದೆ. ಕತೆಗಳು ಸಾಧಾರಣವಾಗಿವೆ. ಅಡಿಗೆ ಮನೆಯಲ್ಲಿ ನನ್ನ ಯಜಮಾನರು ಸುಮಾರಾಗಿದೆ. ಅಷ್ಟೇನೂ ಆಕರ್ಷಣೆ ಇಲ್ಲ ಎಂದೂ ನನ್ನ ಅನಿಸಿಕೆ. ಸಪ್ತಸ್ವರ ಹಾಗೂ ಸಾಧನಾ ಧಾರಾವಾಹಿ ಸಮಾಧಾನಕರವಾಗಿ ಮೂಡಿ ಬರುತ್ತಾ ಇವೆ. ಶ್ರೀಮತಿ ಹೇಮಾ ಶೇಖರ್ ಕಲೆಯ ಬಗ್ಗೆ ಲೇಖನ ಮೆಚ್ಚುವಂತಿದ್ದು. ಅವರ ಬಗ್ಗೆ ತಿಳಿದು ಸಂತೋಷವಾಯಿತು. ಹಾಗೂ ಕೆಲವು ಚಿತ್ರಗಳು ವನಿತಾಗೆ ಪ್ರಕಟವಾಗಿದ್ದು ಮನಮೋಹಕವಾಗಿದ್ದವು.

**ಪ್ರೇಮಾ ಎಂ. ರಾಯ್ಕರ**
**ಸೂಲಿಬೆಲೆ**

1992ರ ಅಕ್ಟೋಬರ್ ವನಿತಾದಲ್ಲಿ ಪ್ರಕಟವಾದ ಕಲೆಯಲ್ಲಿ ಜಗ ಕಾಣುವ ಹೇಮಾ ಶೇಖರ್ ಲೇಖನ ಚೆನ್ನಾಗಿದೆ. ಚಿತ್ರಗಳು ಸಹ ಆಕರ್ಷಣೀಯವಾಗಿ ಮೂಡಿ ಬಂದಿದೆ. ಕಲೆ ಸಿದ್ಧಿಸಲು ಇವರ ಅವಿರತ ಪ್ರಯತ್ನ ಶ್ರಮ ಎಲ್ಲಾ ವನಿತೆಯರಿಗೂ ಬಂದರೆ ಕಲಾಲೋಕ ಬೆಳಗಲು ಸಾಧ್ಯ.

**ರಾಜಮಣಿ**
**ರಾಮಂಚೂರು**

ಅಕ್ಟೋಬರ್ ವನಿತಾ ಅನೇಕ ಹೊಸ ವಿಶೇಷಗಳೊಡನೆ ಸೊಗಸಾಗಿ ಮೂಡಿ ಬಂದಿದೆ. "ನಾಟ್ಯ ವಿಶಾರದೆ" "ಶ್ರೀಮತಿ ರಾಧಾ ಶ್ರೀಧರ್"ರವರ ಪರಿಚಯ, ಹಾಗೂ ಅವರ ನಾಟ್ಯ ಪ್ರತಿಭೆ ಏನೆಂದು ಅನುಕೂಲವಿಲ್ಲದೇ ಇರುವ ಕಾಲದಲ್ಲೇ ಅಂದರೆ ಸುಮಾರು 40 ವರ್ಷಗಳ ಹಿಂದೆಯೇ ಅವರು ಕೆಚ್ಚೆದೆಯಿಂದ ಮುನ್ನುಗ್ಗಿ ಈ ರಂಗದಲ್ಲಿ ಬಹಳಷ್ಟು ಒಳ್ಳೆಯ ಸಾಧನೆಯನ್ನು ಮಾಡಿದ್ದಾರೆ. ನನ್ನ ನೆನಪಿರುವಂತೆ ಮಲ್ಲೇಶ್ವರದಲ್ಲಿ ಅವರ ಹಿಂದಿನ ಮನೆಯಲ್ಲೇ ಇದ್ದ ನಮಗೆ 4–5 ನೇ ವಯಸ್ಸಿನಿಂದಲೇ ನಾವು ಗೆಳತಿಯರೆಂದೇ ಹೇಳಬಹುದು. ಚಿಕ್ಕಂದಿನಲ್ಲೇ ನಾವೆಲ್ಲಾ ಅವರ ಮನೆಯಲ್ಲಿ ಸೇರಿ ಸೀರೆಗಳನ್ನು ಪರದೆಗಳಾಗಿ ಕಟ್ಟಿ "ಕೃಷ್ಣ" ಹಾಗೂ ರಾಮಾಯಣದ ನಾಟಕಗಳನ್ನು ಜೊತೆಯಾಗಿ ಮಾಡುತ್ತಿದ್ದೆವು. ಅವರು ಇನ್ನು ಈ ಕ್ಷೇತ್ರದಲ್ಲಿ ಒಳ್ಳೆಯ ಹೆಸರು, ಹಾಗೂ ಸಾಧನೆಗಳನ್ನು ಮಾಡಲಿ ಎಂದು ಹಾರೈಸುತ್ತೇನೆ.

**ಜಿ.ಕೆ. ಶ್ರೀಮತಿ**
**ಬೆಂಗಳೂರು 22**

ಸ್ವರೂಪ್ ಕೆಸ್ತೂರ್‌ರವರ ಆಕರ್ಷಣೀಯ ಮುಖಪುಟ ಹೊತ್ತ ಅಕ್ಟೋಬರ

### ದೀಪಾವಳಿ ಶುಭಾಶಯ
### ಕವನ

ಗೆಳತಿಯೊಬ್ಬಳು ಹೊಸದಾಗಿ ಮದುವೆಯಾದ ತನ್ನ ಆಪ್ತ ಗೆಳತಿಗೆ, ಮೊದಲ ದೀಪಾವಳಿ ಹಬ್ಬದ ಶುಭಾಶಯಗಳನ್ನು ಕಳಿಸುತ್ತಾ ಹೀಗೆ ಬರೆಯುತ್ತಾಳೆ.

ದೀಪಾವಳಿ ನಿಮಗೆ ಎಂದೆಂದೂ ಹರುಷ ತರಲಿ
ನಿಮ್ಮ ಜೀವನದಲ್ಲಿ ಎಂದೆಂದೂ ಸುಖ ಶಾಂತಿ
ಇರಲಿ

ದೀವಳಿಗೆಯ ಜ್ಯೋತಿ ಬೆಳಗಿಸಿ
ದಂಪತಿಗಳೇ ಅಂಧಕಾರವನು ಅಳಿಸಿ
ಹೇಗೆ ಮಾಡಿದಿರಿ ಮೊದಲ ದೀಪಾವಳಿ?
ಎಷ್ಟು ಹಚ್ಚಿದಿರಿ ಪಟಾಕಿ ಸರವಳಿ?
ಒಬ್ಬರಿಗೊಬ್ಬರು ಏನು ಕೊಟ್ಟಿರಿ ಬಳುವಳಿ?
ಮರೆ ಮಾಚದೆ ಹೇಳಿರಿ ನಮ್ಮ ಬಳಿ



**—ಲೀಲಾ ಚಂದ್ರಶೇಖರ್**
**ನಾಸಿಕ್, ಮಹಾರಾಷ್ಟ್ರ**

ತಿಂಗಳ ಸಂಚಿಕೆ ಕೆಲವು ಒಳ್ಳೆಯ ಕಥೆಗಳಿಂದ ಮನಸೆಳೆಯಿತು.

"ವನಿತಾ"ದಲ್ಲಿ ಅನೇಕ ಕಂತುಗಳಲ್ಲಿ ಪ್ರಕಟವಾದ ಧಾರಾವಾಹಿ "ಸಾಧನಾ" ಅತ್ಯಂತ ಭಾವಪೂರ್ಣವೂ, ಹೃದಯಂಗಮವೂ ಆಗಿದ್ದು, ಕಥಾನಾಯಕ ರಮೇಶ್‌ನ ಉದಾತ್ತ ಗುಣ ಅತ್ಯಂತ ಮೆಚ್ಚಿಕೆಯಾಯಿತು. ತನ್ನ ಆತ್ಮಸಂಯಮದಿಂದ ತ್ಯಾಗಶೀಲತೆಯಿಂದ, ನಿಸ್ವಾರ್ಥತೆಯಿಂದ, ಒಬ್ಬ ಆದರ್ಶ ಪುರುಷನಾಗಿ ಚಿರಕಾಲ ಓದುಗರ ಮನದಲ್ಲಿ ನಿಲ್ಲುತ್ತಾನೆ. ಇಂತಹ ಮಹಾನ್ ವ್ಯಕ್ತಿಯನ್ನು ತನ್ನ ಹೃದಯ ಸಿಂಹಾಸನದಲ್ಲಿ ಪ್ರತಿಷ್ಠಾಪಿಸಿದ ನಾಯಕಿ ಸಾಧನಾಳ ಬದುಕು ಅರ್ಥಪೂರ್ಣವಾದುದು. ಕಥೆಯ ಮುಕ್ತಾಯದಲ್ಲಿ ಮಾತ್ರ ಸಾಧನಾ, ರಮೇಶ್‌ಗಾಗಿ ಇಟ್ಟುಕೊಳ್ಳುವ ಆಶ್ವಾಸನೆ, ಕೊನೆಯ ಕ್ಷಣದಲ್ಲೂ ಸಹ ಅವನು ಖಂಡಿತಾ ಹುಷಾರಾಗಿ ಹಿಂತಿರುಗುವನೆಂಬ ಒಂದು ಭರವಸೆ ಅವಳ ಜೀವನದ ಆಶಾಜ್ಯೋತಿಯಾಗಿ ಕಂಡಿತು. ಈ ಅಂತಿಮ ದೃಶ್ಯವು ಮನಮಿಡಿಯುವಂತಿತ್ತು. ಶ್ರೀಮತಿ ಗಿರಿಜಮ್ಮನವರ ಶೈಲಿ ಅತ್ಯಂತ ಸುಂದರವಾಗಿದ್ದು ಓದುಗರನ್ನು ಸರಾಗವಾಗಿ ಓದಿಸಿಕೊಂಡು ಹೋಗುವುದರಲ್ಲಿ ಯಶಸ್ವಿಯಾಯಿತು.

**ಮಹಾಲಕ್ಷ್ಮಿ ಎಸ್. ರಾವ್**

ಪ್ರಫುಲ್ಲ ಅತುಲೇಂದ್ರನಾಥ್ ಅವರ 'ದೇವರಿಲ್ಲದ ಆಲಯ' ಕಥೆ ಭಾವುಕತೆಯಿಂದ ಕೂಡಿದೆ. ಒಬ್ಬ ಹೆಣ್ಣು ಎಷ್ಟೇ ಪ್ರತಿಭಾಶಾಲಿಯಾದರೂ ಅವಳಿಗೆ ವಿವಾಹವೇ ಮುಖ್ಯ ಎನ್ನುವ ರೀತಿ ಚಿತ್ರಿಸಲಾಗಿದೆ. ಹೆಣ್ಣಿಗೆ [ಗಂಡಿಗೂ ಸಹ] ವಿವಾಹ ಜೀವನ ಅವಶ್ಯವಾದರೂ ಅನಿವಾರ್ಯ ಕಾರಣಗಳಿಂದ ಅವಳು ಅವಿವಾಹಿತಳಾಗಿ ಉಳಿಯುವಂತಹ ಸಂದರ್ಭದಲ್ಲಿ ಆಕೆ ಅದನ್ನೇ ದೊಡ್ಡ ಕೊರತೆಯೆಂದು ಕೊರಗುತ್ತಾ ಕೂರದೆ, ವಿವಾಹವಾಗಿದ್ದರೆ ಸಂಸಾರಕ್ಕೆ ವಿನಿಯೋಗವಾಗುತ್ತಿದ್ದ ಸಮಯವನ್ನು ನಿಸ್ವಾರ್ಥ ಮನೋಭಾವದಿಂದ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಕೊಳ್ಳಬಾರದೇಕೆ? ಈ ದೆಸೆಯಲ್ಲಿ ಸಾವಿರಾರು ಮಹಿಳೆಯರು ತಮ್ಮ ಬಾಳನ್ನು ಸಾರ್ಥಕ ಮಾಡಿಕೊಂಡಿದ್ದಾರೆ. ಉದಾ : ನಮ್ಮ ಮುಂದೆ 'ಧೀಶಕ್ತಿ ಮಾತೆ'ಯಾಗಿ ಮದರ್ ಥೆರೆಸಾ ಅವರಿದ್ದಾರಲ್ಲವೇ? ಇಂತಹ ವೈಚಾರಿಕ ಅಂಶವನ್ನೊಳಗೊಂಡಂತಹ, ಹೆಣ್ಣಿನಲ್ಲಿ ಸ್ಥೈರ್ಯ ತುಂಬುವಂತಹ ಕಥೆಗಳನ್ನೇಕೆ ನಮ್ಮ ಕಥೆಗಾರ್ತಿಯರು ಹೆಚ್ಚಾಗಿ ಬರೆಯಬಾರದು? ದೇವರಿಲ್ಲದ ಆಲಯದಂತಹ ಕಥೆಗಳಿಂದ ಹೆದರಿದ ನಮ್ಮ ಯುವತಿಯರು ಮದುವೆ ಮುಂದೂಡಿದರಲ್ಲಿ ನಮ್ಮ ಸೌಂದರ್ಯ ಹಾಳಾಗಿ ಚಿರಕನ್ನಿಕೆಯರಾಗಿ ಉಳಿದುಬಿಡುತ್ತೇವೋ ಎಂದೇ 'ಎಷ್ಟಾದರೂ' ವರದಕ್ಷಿಣೆ ಕೊಟ್ಟು ವಿವಾಹವಾಗಲು ತಯಾರಿರುವುದು. ಉತ್ತಮ ಗುಣ, ನಡತೆ, ಪ್ರತಿಭೆ, ಸೇವಾ ಮನೋಭಾವದಿಂದ ಬಾಳಿದ ಹೆಣ್ಣು ಮಕ್ಕಳು 'ದೇವತೆಗಳಾಗಿ ಆಲಯ'ದಲ್ಲಿ ಶೋಭಿಸಬಹುದಲ್ಲವೇ?

ಕಲೆಯಲ್ಲಿಯೇ ಜಗ ಕಾಣುವ ಹೇಮಾಶೇಖರ್ ಅವರ ಪರಿಚಯ ಲೇಖನ ನೀಡಿದ ಸರಸ್ವತಿ ಮೋಹನ್ ಅವರಿಗೆ ಧನ್ಯವಾದಗಳು. ಜಗದ ಕಲೆಗಳೆಲ್ಲವೂ ಹೇಮಾ ಅವರಲ್ಲಿಯೇ ಅಡಕವಾಗಿವೆಯೇನೋ ಎಂಬಷ್ಟು ಅಚ್ಚರಿಯಾಯಿತು.


ವನಿತಾ

ಮಹಿಳೆಯರ ಮಾಸಪತ್ರಿಕೆ

ಸಂಪುಟ : 15 ಸಂಚಿಕೆ : 2

ನವೆಂಬರ್ – 1992

ಈ ಸಂಚಿಕೆಯ ಬೆಲೆ

8/-ರೂ

ವಾರ್ಷಿಕ ಚಂದಾ – 72/– ರೂ.

ವಿಳಾಸ :

ಡಾಲ್ಟನ್ ಪಬ್ಲಿಕೇಷನ್ಸ್

ಚಂದಮಾಮ ಬಿಲ್ಡಿಂಗ್ಸ್

ಮದರಾಸು – 600 026

ಬೆಂಗಳೂರು ಕಚೇರಿ ವಿಳಾಸ

"ವನಿತಾ"

ಕಮಾಂಡರ್ಸ್ ಪ್ಲೇಸ್ (ಮಹಡಿ)

ರಾಜಾರಾಮ ಮೋಹನರಾಯ್ ರಸ್ತೆ

ಬೆಂಗಳೂರು – 560 025.

ಫೋನ್ : 220912


# ವನಿತಾ

## ತೀರ್ಪುಗಾರರ ನುಡಿ

ಎಂದಿನಂತೆ ಈ ಬಾರಿಯೂ ದೀಪಾವಳಿ ಕಾದಂಬರಿ ಸ್ಪರ್ಧೆಗಾಗಿ ಮಹಿಳೆಯರಿಂದ ಕಾದಂಬರಿಗಳನ್ನು ಆಹ್ವಾನಿಸಲಾಗಿತ್ತು. ವೈವಿಧ್ಯಮಯ ವಿಷಯಗಳ ಕುರಿತು ಬರೆಯಲೆಂದು ವಿಷಯದ ಆಯ್ಕೆಯ ಸ್ವಾತಂತ್ರ್ಯವನ್ನೂ ನೀಡಲಾಗಿತ್ತು. ಅದೇಕೋ ಈ ಬಾರಿ ಮಹಿಳೆಯರಲ್ಲಿ ಉತ್ಸಾಹ ತಣ್ಣಗಾದಂತಿದೆ. ಹೊಸಬರಂತೂ 'ವನಿತಾ' ಓದಿ ಸಂತೋಷಪಡೋಣ ಎಂಬ ಹಿರಿತನದ ತೀರ್ಮಾನ ಮಾಡಿದಂತಿದೆ. ಬಂದ ಕೃತಿಗಳೂ ಅಷ್ಟೇ ಅದೇ ಪ್ರೇಮ, ಕುಟುಂಬ, ಗಂಡ–ಮಕ್ಕಳು ಹೀಗೆ ಏಕತಾನತೆಯನ್ನು ಸಾಧಿಸಿವೆ. ಆದರೆ ಅಂತಹುದರಲ್ಲೂ ಕೆಲವರು ವೈಶಿಷ್ಟ್ಯ ಮೆರೆದಿದ್ದಾರೆ. ಅವುಗಳಲ್ಲಿ ಧೃತಿಯವರ 'ನಾದಬಿಂದು' (ಮೊದಲ ಬಹುಮಾನ) ಪಡೆದಿದ್ದು ಈ ಸಂಚಿಕೆಯಿಂದ ಧಾರಾವಾಹಿಯಾಗಿ ಪ್ರಕಟವಾಗುತ್ತದೆ. ಸಿ.ಎನ್. ಮುಕ್ತಾ ಅವರ "ಅಪರಿಚಿತರು" ಎರಡನೆ ಬಹುಮಾನ ಪಡೆದಿದೆ. ಡಾ| ಲಲಿತಾ ಭಟ್ ಅವರ "ಕ್ಷಮಯಾಧರಿತ್ರಿ" ತೀರ್ಪುಗಾರರ ಮೆಚ್ಚಿಗೆಗೆ ಪಾತ್ರವಾಗಿದೆ.

ದೀಪಾವಳಿ ಸಂಚಿಕೆಗಾಗಿ ಕಥೆಗಳನ್ನು ಆಹ್ವಾನಿಸಲಾಗಿತ್ತು. ಕಥೆ ಬರೆಯುವಲ್ಲಿ ಮಹಿಳಾ ಲೇಖಕಿಯವರು ಉತ್ಸಾಹ ತೋರಿದ್ದು ಸಂತಸದ ವಿಷಯ. ಬಂದ ಕಥೆಗಳ ಸಂಖ್ಯೆಯೂ ತೃಪ್ತಿಕರವಾಗಿತ್ತು. ಅವುಗಳಲ್ಲಿ ಹದಿನೈದು ಕಥೆಗಳನ್ನು ಆಯ್ಕೆ ಮಾಡಲಾಗಿದ್ದು ಈ ಸಂಚಿಕೆಯಲ್ಲಿ ಹೆಚ್.ಕೆ. ಅನಸೂಯ ಸಂಪತ್ ಅವರ "ಎರಡು ಮುಖಗಳು", ಎ.ಪಿ. ಮಾಲತಿಯವರ "ರಕ್ಷಣೆ", ಜಯಶ್ರೀ ದಿವಾಕರ್ ಅವರ "ಮಳೆಗಾಲದ ಒಂದು ದಿನ", ಗಾಯತ್ರಿ ಮೂರ್ತಿ ಅವರ "ಸಾರ್ಥಕತೆ" ಮತ್ತು ಸಿ.ಎನ್. ಮುಕ್ತಾ ಅವರ "ಸಾಧನೆ" ಪ್ರಕಟವಾಗಿವೆ. ಮಿಕ್ಕ ಕಥೆಗಳನ್ನು ಮುಂದಿನ ಸಂಚಿಕೆಗಳಲ್ಲಿ ಕ್ರಮವಾಗಿ ಪ್ರಕಟಿಸಲಾಗುವುದು.

**–ಸಂ]**

ಇಂತಹ ಅಪೂರ್ವ ಕಲಾವಿದ ಉದಯೋನ್ಮುಖರಿಗೆ ಕಲಾಕೃತಿಗಳ ತಯಾರಿಕೆ ಬಗ್ಗೆ ಅಂಚೆಯ ಮೂಲಕ ಮಾರ್ಗದರ್ಶನ ಮಾಡಿದರೆ ಉಪಯುಕ್ತವಾಗುತ್ತವೆ.

**–ಹೆಚ್.ಎ. ಗೀತಾ ಕೋಗಲೂರು**

ಕಲೆಯಲ್ಲಿ ಜಗಕಾಣುವ ಹೇಮಾಶೇಖರ್ ಅವರ ಪರಿಚಯವನ್ನು ಸರಸ್ವತಿ ಮೋಹನರವರು ಬಹಳ ಚೆನ್ನಾಗಿ ಮಾಡಿಸಿದ್ದಾರೆ. ಈ ಲೇಖನವನ್ನು ಓದುತ್ತಿದ್ದಂತೆಯೇ ನಮ್ಮನ್ನು ಅವರ ಕಲೆಯ ಲೋಕಕ್ಕೆ ಕೊಂಡೊಯ್ಯುವಂತಿತ್ತು.

ಮನಸ್ಸೊಂದಿದ್ದರೆ ಮಾರ್ಗ ಎನ್ನುವಂತೆ, ಆಸಕ್ತಿಯಿದ್ದರೆ ಎಲೆಮರೆಯ ಕಾಯಿಯಂತಿರುವವರು ಸಹ ಮುಂದೆ ಬಂದು ಯಾವ ಕಲೆಯಾದರೂ ಕಲಿಯಬಹುದು. ನಮ್ಮ ತಂದೆ ತಾಯಿಯವರು ಕಲಾವಿದರು. ತಂದೆ ಮಣ್ಣಿನಲ್ಲಿ ವಿವಿಧ ರೀತಿಯ ಗಣಪತಿಗಳನ್ನು ಮಾಡಿ ಬಹಳ ಹೆಸರು ಗಳಿಸಿದ್ದಾರೆ. ಆದರೆ ನಾನು ಯಾವುದನ್ನೂ ಕಲಿಯಲು ಆಗ ಆಸಕ್ತಿಯಿರಲಿಲ್ಲ. ಈಗ ನನಗೆ ಹೇಮಾಶೇಖರ್‌ರವರ ಅದ್ಭುತ ಕಲಾ ಸಾಧನೆಗಳ ಬಗ್ಗೆ ಓದಿ ತಿಳಿದು ನನಗೂ ಈಗ ಚಿತ್ರ ಬರೆಯುವ ಬಗ್ಗೆ ಪೈಂಟಿಂಗ್ಸ್ ಮಾಡುವ ಬಗ್ಗೆ ಬಹಳ ಆಸಕ್ತಿಯುಂಟಾಗಿದೆ. ಹೇಮಾಶೇಖರ್ ಅವರನ್ನು ಮಹಿಳೆಯರು ಅನುಸರಿಸಿದರೆ ನಾವು ಜೀವನದಲ್ಲಿ ಏನನ್ನಾದರೂ ಸಾಧಿಸಬಹುದು.

ಮತ್ತು ಡಾ| ಎಚ್. ಗಿರಿಜಮ್ಮನವರ ಧಾರಾವಾಹಿ ವನಿತಾದಲ್ಲಿ ಬಹಳ ಚೆನ್ನಾಗಿ ಮೂಡಿ ಬಂದಿತು. ಒಂದು ಮೃದು ಮನಸ್ಸಿನ ಹೆಣ್ಣಿನ ಅಂತರಂಗದ ಅರಿವನ್ನು ಬಹಳ ಸುಂದರವಾಗಿ ಚಿತ್ರಿಸಿದ್ದಾರೆ. ಇಂತಹ ಹೃದಯಸ್ಪರ್ಶಿ ಧಾರಾವಾಹಿಗಳ ಹೆಚ್ಚು ಹೆಚ್ಚು ಮೂಡಿ ಬರಲಿ. ಡಾ| ಎಚ್. ಗಿರಿಜಮ್ಮನವರಿಗೆ ನನ್ನ ಅಭಿನಂದನೆಗಳು.

ಮತ್ತು ಸುನಂದಾ ನಾಯಕ್ ಅವರ ಕಥೆ 'ತಮರು ತಂಪಾಗಿರಲಿ' ಬಹಳ ಚೆನ್ನಾಗಿದೆ. ನಿಜ ಜೀವನದಲ್ಲೂ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಸಹಕರಿಸಿದರೆ ಮನೆ ನಂದಗೋಕುಲವಾಗುವುದರಲ್ಲಿ ಸಂದೇಹವೇ ಇಲ್ಲ.

**ಅನುಪಮ ಮಂಜುನಾಥ್, ಶಿವಾರಪಟ್ಟಣ**



# ಜನಪದರು ಕಂಡ ದೀಪಾವಳಿ ಸಂಭ್ರಮ

—ಶಾರದಾ ಆರ್. ಶಾಸ್ತ್ರಿ

ಮಳೆಗಾಲ ಕಳೆದು, ಚಳಿಗಾಲಕ್ಕೆ ಕಾಲಿರಿಸುವ ಋತು ಪರಿವರ್ತನೆಯ ಹೊಸ್ತಿಲಲ್ಲಿ ಬರುವ ಹಬ್ಬ ದೀಪಾವಳಿ. ಕಷ್ಟ ಕಾರ್ಪಣ್ಯಗಳ ಕತ್ತಲೆ ಕಳೆಯುವ ಸಂಕೇತವಾಗಿ ಅಂಧಕಾರವನ್ನು ತೊಲಗಿಸಲು ಎಲ್ಲೆಡೆಯೂ ಬೆಳಗುವ ದೀಪಗಳ ಸಾಲು. ನಾಲ್ಕು ದಿನಗಳ ಕಾಲ ವಿಶಿಷ್ಟ ಸಂಭ್ರಮದಿಂದ ದೇಶದ ಎಲ್ಲೆಡೆ ಆಚರಿಸುವ ಹಬ್ಬವನ್ನು ಜನಪದರು ಹೀಗೆ ಕಂಡಿದ್ದಾರೆ.

*ಹರಿಯ ಕತ್ತಲು ಕಳೆದು। ಸುಜ್ಯೋತಿ ಬೆಳಗುವ*
*ದೀವಳಿಗೆ ಹಬ್ಬ ಊರೊಳಗೆ। ಬಂದಿರಲು*
*ಹಕ್ಕಿಗಳು, ಮಕ್ಕಳಿಗೂ ಹಿರಿ ಹಿಗ್ಗು ।*

ಮಕ್ಕಳು, ಮುದುಕರು, ಹಕ್ಕಿ, ಪ್ರಾಣಿಗಳಿಗೂ ಕೂಡ ಸಂಭ್ರಮೋಲ್ಲಾಸವನ್ನೀಯುವ ದೀಪಾವಳಿ ಆಗಮಿಸುವಾಗಲೇ 'ಕಾರ್ತಿಕದ ಕಡುಚಳಿಯು ಹರಯ ಉಕ್ಕೇರುವುದಂತೆ' ಹೊಸ ಬೆಳಕು ಧಾನ್ಯದ ರಾಶಿಯು ಮನೆಯೊಳಗಡೆ ಬಂದು, 'ಭಾಗ್ಯದ ಲಕ್ಷ್ಮಿಯು ಬಾ ಎಂದು ಕರೆಯಲು। ಬಾಗಿಲಲ್ಲಿ ಸಾಲು ದೀಪವನೆ ಉರಿಸಿಟ್ಟು। ಹೂವಿಟ್ಟು ದೀವಳಿಗೆಗಳ ಇದಿರ್ಗೊಂಬೆ' ಎಂದು ಹಿರಿಯ ಮುತ್ತೈದೆಯರು ಸ್ವಾಗತಿಸುತ್ತಾರೆ.

*ಹಬ್ಬದ ಹದಿಮೂರು ದಿನದ। ಸಂಜೆಲಿ ಹಂಡೆ*
*ತೊಳೆದಿಟ್ಟು ಬಿಡಿಸಿ ಚಿತ್ತಾರ। ತಾಳಮೇಳದಿ*
*ಮುತ್ತೈದೆಯರು ನೀರ ತುಂಬುವರು। ।*

ತ್ರಯೋದಶಿಯಂದು ಸಂಜೆ ನೀರಮನೆಗೆ ಸೆಗಣಿ ಸಾರಿಸಿ, ರಂಗವಲ್ಲಿಯಿಟ್ಟು ಮೀಯುವ ಹಂಡೆಯನ್ನು ತೊಳೆದು ಬಿಳಿಯ ಚಿತ್ತಾರ ಬರೆದು ಸುವಾಸಿನಿಯರೆಲ್ಲರೂ ಮಡಿಸೀರೆಯುಟ್ಟು ಕೊಡಗಳನ್ನು ಸೊಂಟದಲ್ಲಿರಿಸಿಕೊಂಡು ಬಾವಿಯ ಕಡೆಗೆ ಹೋಗುತ್ತಾರೆ. 'ಮುತ್ತೈದೆ ಕೈ ಬಳೆಯ ಸುಸ್ವರದೊಂದಿಗೆ। ಮೇಳವಿಸಿದ ಕಿಲಿ ಕಿಲಿ ನಗೆಗೆ। ಮಕ್ಕಳ ತಾಳ ಜಾಗಟೆಯು ಮುದವಾಯ್ತು' ಸಂಭ್ರಮದ ನಗೆಯೊಂದಿಗೆ ನೀರು ತರುವಾಗ ಮಕ್ಕಳು ಊದುವ ಶಂಖ, ಬಾರಿಸುವ ತಾಳ ಜಾಗಟೆಗಳ ನಾದವೂ ಮೇಳವಿಸಿ ಮುದ ನೀಡಿತು.

*ನರಕನ ಹಬ್ಬದಿ ನಂದಾದೀಪವ। ಬೆಳಗಿ*
*ದೇವರ ಮುಂದೆ ಮಣೆಯಿಟ್ಟು। ಕುಳ್ಳಿರಿಸಿ*
*ಒಳ್ಳೆ ಎಣ್ಣೆಯನು ತಿಕ್ಕುವರು ।*

ನರಕ ಚತುರ್ದಶಿಯ ನಸುಕಿನಲ್ಲಿ ನಂದಾದೀಪ ಬೆಳಗಿಸಿ, ನಮಸ್ಕರಿಸಿ, ಎಲ್ಲರನ್ನೂ ಎಬ್ಬಿಸಿ, ದೇವರ ಮುಂದೆ ಕುಳ್ಳಿರಿಸಿ ಮೈಗೆ ಎಣ್ಣೆ ತಿಕ್ಕುವುದು ಸಂಪ್ರದಾಯ. ಆ ವರ್ಷ ಮದುವೆಯಾದ ಮದುಮಗ ಹಬ್ಬಕ್ಕೆ ಬಂದವನಿಗೆ ಅತ್ತೆ ಎಣ್ಣೆ ತಿಕ್ಕಿದರೆ ಆಗುತ್ತದೆಯೇ. ತನ್ನಾಕೆಯ ಹಸ್ತ ಸ್ಪರ್ಶ ಆ ನೆವನದಲ್ಲಾದರೂ ಸಿಗಲೆಂದು ಹಾರೈಸಿದರೆ, 'ಕಣ್ಣು ತಿಕ್ಕುತ ಬಂದು। ಮದುಮಗನ ಬೆನ್ನಿಗೆ ಎಣ್ಣೆ ತಿಕ್ಕೆಂದರೆ ಮನೆ ಮಗಳು। ಕೆಂಪೇರಿ ಕಣ್ಮುಚ್ಚಿ ಎಲ್ಲೆಲ್ಲಿಗೋ ಎಣ್ಣೆ ಎರೆಯುವಳು' ಲಜ್ಜಾನ್ವಿತಳಾದ ಆಕೆ ಏನೇನೋ ಮಾಡುವಳು.

*ನರಕನೆಂಬವನು ಹದಿನಾರು। ಸಾವಿರ*
*ನಾರಿಯರ ನರಕದಲಿ ನೂಕಿದ್ದ। ಅವನು*
*ಹೆತ್ತವ್ವೆಯಿಂದ ಸಾವು ಪಡೆದಿದ್ದ ।*

ನರಕಾಸುರನನ್ನು ಶ್ರೀಕೃಷ್ಣ ಪರಮಾತ್ಮ ಭೂದೇವಿಯೊಡಗೂಡಿ ಸಂಹರಿಸಿದ ದಿನದಂದು ನರಕ ಚತುರ್ದಶಿ. ಯುದ್ಧಾನಂತರ ಆಯಾಸ ಪರಿಹಾರಕ್ಕಾಗಿ ಅವನು ಮೈಗೆ ತೈಲ ಲೇಪಿಸಿಕೊಂಡು ಬಿಸಿ ನೀರು ಸ್ನಾನ ಮಾಡಿದುದು ಅಂದು ತೈಲಾಭ್ಯಂಗನಕ್ಕೆ ಸಾಂಪ್ರದಾಯಿಕ ಅರ್ಥ ನೀಡಿದೆ. 'ಹಂಡೆ ತುಂಬ ಹೊಗೆಯ ಕುದಿವ ನೀರನು ತೋಡಿ। ತಂಬಿಗೆಯಲಿ ಮೈಗೆ ಎರೆವರು। ಮೈಯು ಕೆಂಪು ಕೆಂಪಾದರೂ ಬಿಡರು' ಸ್ನಾನದಿಂದ ಉಲ್ಲಸಿತಗೊಂಡ ಮೈಗೆ ಹೊಸ ಉಡುಗೆ ತೊಡುಗೆಗಳ ಕೊಡುಗೆ.

*ಬಲಿಯೆಂಬ ದಾನಿಯನು। ಬಲಗಾಲಿನಲಿ*
*ಮೆಟ್ಟಿ*
*ಹರಿಯು ಪಾತಾಳಕ್ಕಿಳಿಸಿದ। ಹಬ್ಬದಲಿ*
*ಧರೆಯ ನೋಡಲು ನೀನು ಬಾರೆಂದ ।*

ಮಹಾದಾನಿಯೆನಿಸಿದ ಬಲಿಯನ್ನು ತುಳಿದು ಪಾತಾಳಕ್ಕಿಳಿಸಿದರೂ ದೀಪಾವಳಿಯಲ್ಲಿ ಆತ ಧರೆಯನ್ನು ವೀಕ್ಷಿಸಲು ಬರುವಂತೆ ಶ್ರೀ ಹರಿ ಅನುಗ್ರಹಿಸಿದ. ಬಲಿಯ ಸ್ವಾಗತಕ್ಕಾಗಿ ರೈತರು ಗದ್ದೆಯ ಬದುಗಳನ್ನು ಸಿಂಗರಿಸಿ, 'ಎಲ್ಲೆಲ್ಲೂ ಉರಿಯುವ ಹಣತೆ ದೀಪದ ಬೆಳಕು। ಕಡುಬು ಅವಲಕ್ಕಿ ಕಲಸಿಟ್ಟು। ದನಿಯೆತ್ತಿ ಬಲಿಯೇಂದ್ರಾ ಬಾ ಎಂದು ಕರೆವರು' ತುಲಸೀ ಕಟ್ಟೆಯ ಬಳಿಯೂ ಬಲಿಯೇಂದ್ರನನ್ನು ನಿಲ್ಲಿಸಿ ಪೂಜಿಸುತ್ತಾರೆ. ಬಲಿಯೇಂದ್ರಾ ಬಾಬಾ ಕೂಕೂ ಎಂದು ನೈವೇದ್ಯ ಸ್ವೀಕರಿಸಲು ಕರೆಯುತ್ತಾರೆ.

*ಹಬ್ಬದ ಸಂಭ್ರಮದಿ। ಹರಿಯು ತುಲಸಿಯ*
*ವರಿಸಿ*
*ಹರಸಿದ ಶುಭವಸರದಿ। ಲಕ್ಷ್ಮಿ*
*ನಾರಾಯಣರಿಗೆ ಕೈಯ ಮುಗಿವೆವು ।*

ಶ್ರೀ ಹರಿಯು ತುಲಸಿಯನ್ನು ವರಿಸಿದ ಶುಭದಿನ ದೀಪಾವಳಿ. ರೈತರು ಭಾಗ್ಯಲಕ್ಷ್ಮಿಯನ್ನು ಅರ್ಚಿಸಿದರೆ ವೈಶ್ಯರು ಧನಲಕ್ಷ್ಮಿಯನ್ನು ಅರ್ಚಿಸುತ್ತಾರೆ. 'ಭಾಗ್ಯದ ಲಕ್ಷ್ಮಿಯೆ ಬಲಗಾಲ ಒಳಗಿಟ್ಟು। ಬಾರಮ್ಮ ಬೇಗ ಹೊಸಿಲೊಳಗೆ । ಅನುದಿನವು। ನೆಲೆಸಿರು ನಮ್ಮ ಮನೆಯೊಳಗೆ' ಎಂದು ಬೇಡಿಕೊಳ್ಳುತ್ತಾರೆ. ಅಂದು ಅಂಗಡಿಗಳಲ್ಲೆಲ್ಲ ಪೂಜೆ ಇದೆ.

*ಗೆಜ್ಜೆಯುಡುಗೆಯ ತೊಡಿಸಿ। ಮೈ ತಿಕ್ಕಿ*
*ಮೀಯಿಸಿ*
*ಹಬ್ಬದಾರತಿಯನು ಬೆಳಗಿಸಿ। ಗೋವ್ಗಳಿಗೆ*
*ಕಡುಬು ಅವಲಕ್ಕಿ ತಿನಿಸೇವೂ ।*

ಗೋವುಗಳನ್ನು ಮೀಯಿಸಿ ಮಣಿಗಳ, ಹೂಗಳ ಹಾರ ಹಾಕಿ ಅಲಂಕರಿಸಿ ಹಣೆಗೆ ಕುಂಕುಮವಿರಿಸಿ ಆರತಿ ಬೆಳಗಿ ಪೂಜಿಸುವುದೂ ದೀಪಾವಳಿಯ ಅವಿಭಾಜ್ಯ ಅಂಗ. ಅವುಗಳಿಗೂ ಹಬ್ಬದ ತಿಂಡಿಗಳನ್ನು ತಿನ್ನಿಸುತ್ತಾರೆ. 'ರೈತರಂಗಣ್ಣನು ತೊಳೆದಿರಿಸಿ ನೊಗವನು। ಹೂ ಹಾರವ ಹಾಕಿ ಪೂಜಿಸುತ ಸಿರಿದೇವಿ। ನಲಿದು ಬಾರೆಂದು ಕರೆಯುವ'

*ಧರ್ಮಜಾತನು ತನ್ನ ಸಹಜಾತೆಯ ಮನೆಗೆ*
*ಹಬ್ಬ ಬಿದಿಗೆಯಲಿ ಆಗಮಿಸಿ। ಸಂಭ್ರಮಿಸಿ*
*ಲೋಕದಂಗನೆಯರ ಹರಸಿದ ।*

ಭ್ರಾತೃಬಿದಿಗೆಯಂದು ಯಮಧರ್ಮನು ತನ್ನ ತಂಗಿ ಯಮುನೆಯ ಗೃಹಕ್ಕೆ ಬಂದು ಅವಳ ಸತ್ಕಾರಗಳಿಂದ ಸಂಪ್ರೀತನಾಗಿ ಈ ಶುಭದಿನದಂದು ಸಹೋದರರನ್ನು ಸತ್ಕರಿಸುವ ಲೋಕದ ಅಂಗನೆಯರಿಗೆ ಅಕಾಲ ಮೃತ್ಯು ಭಯ ಬಾರದೆಂದು ವರವಿತ್ತ.

'ದೀವಳಿಗೆಯ ದಿನದ ಸಾಲುದೀಪದ ಪ್ರಭೆಗೆ। ನರಕದಲ್ಲಿರುವ ಆತ್ಮಗಳು। ಸ್ವರ್ಗಕ್ಕೆ ನಡೆದು ಹೋಗಲು ದಾರಿ ತೋರುವುದು' ಇದೂ ಯಮನ ಅನುಗ್ರಹವೇ.

*ಅಂಧಕಾರದ ರಾತ್ರಿ ಕಾಳಿಕಾಂಬೆಯು ಜ್ಯೋತಿ*
*ಕಷ್ಟ ಕಾರ್ಪಣ್ಯಗಳ ಕಳೆಯುವಳು ।*

ದೀಪಾವಳಿಯಲ್ಲಿ ಕಾಳಿಕಾರಾಧನೆಗೂ ಆದ್ಯತೆಯಿದೆ. ಗಾಢಾಂಧಕಾರದಲ್ಲಿ ಆಕೆ ದೀವಟಿಗೆ ಬೆಳಗುತ್ತಾ ಎಲ್ಲೆಡೆಯೂ ಸಂಚರಿಸಿ ದುಷ್ಟಶಕ್ತಿಗಳನ್ನು ದೂರಕ್ಕೆ ಓಡಿಸುವವಳಂತೆ.

'ಹಬ್ಬದ ಸಂಭ್ರಮಕೆ ಹರೆ ಬಂತು ಅಜ್ಜಗೆ। ಉದ್ದಿನ ಕಡುಬು ಹದಿನೆಂಟ। ಒಬ್ಬನೇ ತಿಂದು ಢರ್ರೆಂದು ತೇಗುವನು' ಹಬ್ಬದ ಸಂಭ್ರಮದಲ್ಲಿ ಅಜ್ಜನಿಗೂ ಯೌವನದ ಕಳೆ.

*ಮೈ ನೆರದ ಮಡದಿಯ। ನೋಡಲು*
*ಅಳಿಯಂದಿರು*
*ಬಂದು ಬಾಗಿಲೆಡೆಯಲ್ಲಿ ನಿಂತವಳ। ಮಲ್ಲಿಗೆ*
*ಜಡೆ ಕಂಡು ಆತುರದಿ ಎಳೆದರು ।*

ಇದು ಹಳೆಯ ಕಾಲದ ಕತೆ. ಬಾಲ್ಯ ವಿವಾಹದ ಕಾಲ. ಮದುವೆಯಾದರೂ ತವರು ಮನೆಯಲ್ಲಿ ಉಳಿದ ಮಡದಿ ಋತುಮತಿಯಾಗಿ ಮೈ ತುಂಬಿ ಬೆಳೆದು ನಿಂತಿದ್ದಾಳೆ. ಅವಳನ್ನು ಕಾಣುವ ಆತುರದಿಂದ ಬಂದ ಗಂಡ ಲಜ್ಜೆಯಿಂದ ಕೆಂಪೇರಿ ಬಾಗಿಲಿನ ಮರೆಯಲ್ಲಿ ನಿಂತವಳ ಮಲ್ಲಿಗೆ ಜಡೆಯನ್ನು ಹಿಡಿದೆಳೆವ ರಸಿಕತನದ ಕಲ್ಪನೆ ಹಬ್ಬದ ಸೊಬಗಿಗೆ ಕೋಡು ಮೂಡಿಸಿದೆ. 'ಅತ್ತೆ ತಂದಿತ್ತ ಬೆಲ್ಲ ಪಾನಕ ನೋಡು ಹೊಟ್ಟೆ ನೋವೆಂದು ಹೇಳಿದ ಅಳಿಯನು। ಅತ್ತೆ ಮಗಳ ಹೊಸ ತುಪ್ಪ ತಂದು ಹೊಟ್ಟೆ ಮೇಲೆಲ್ಲ ತಿಕ್ಕೆಂದ' ಹೊಟ್ಟೆಗೆ ತುಪ್ಪ ತಂದು ತಿಕ್ಕುವ ನೆವದಲ್ಲಾದರೂ ಮಡದಿಯ ಸಾಮೀಪ್ಯ ಸಿಕ್ಕಿದರೆ!

*ಮಗಳ ಕೋಣೆಯ ಪಕ್ಕ ಇರಲೊಂದು ಹಣತೆಯು*
*ಎನುತ ಅತ್ತೆಯು ಬೆಳಗಿದರೆ। ಅಳಿಯನು*
*ತುಟಿಯೆಂಜಲು ಮಾಡಿ ಚೆಪ್ಪಾದ ।*

ಎಲ್ಲೆಡೆಯೂ ದೀಪ ಉರಿಸಿಟ್ಟ ಅತ್ತೆಯು ಮಗಳ ಕೋಣೆಯು ಕತ್ತಲಾಗಿರುವುದನ್ನು ನೋಡಿ ಅಲ್ಲೂ ಒಂದು ಹಣತೆ ಇರಲೆಂದು ಉರಿಸಿಡಲು ಬಂದಾಗ ಕತ್ತಲಿನಲ್ಲೆ ಅಳಿಯನು ಮಗಳ ತುಟಿಗಳಿಂದ ಮುತ್ತು ಕಸಿಯುತ್ತಿರುವುದನ್ನು ಕಂಡಳು. ಅತ್ತೆಯು ಕಾಣಿಸದಂತೆ ಹೋಗಿ ಮನಸ್ಸಿನಲ್ಲೆ ಗತಕಾಲದ ದಿನಗಳನ್ನು ನೆನೆಸಿಕೊಂಡಳು.

ಆದರೆ ಈ ತುಟ್ಟಿಯ ದಿನಗಳಲ್ಲಿ ಪ್ರಾಚೀನರು ಕಂಡ ಸಂಭ್ರಮದ ಹಿಗ್ಗಿನ ದೀಪಾವಳಿ ಎಲ್ಲಿದೆ? ●

# ಹಿಂದೂ ಧರ್ಮದಲ್ಲಿ 'ಮಹಿಳಾ' ಹಬ್ಬಗಳು

ಹಿಂದೂ ಧರ್ಮದಲ್ಲಿ ಹಬ್ಬಗಳು ನಮ್ಮ ಜೀವನದಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಪ್ರತಿಯೊಂದು ಹಬ್ಬಗಳ ಬಗ್ಗೆ ಅರ್ಥಪೂರ್ಣವಾದ ಹಿನ್ನೆಲೆಯ ಕಥೆ, ಕ್ರಮ, ವಿವರಗಳು ಇದ್ದು ಅವುಗಳಿಗೆ ವೇದ ಪುರಾಣ, ಧರ್ಮಶಾಸ್ತ್ರಗಳು ಆಧಾರವಾಗಿರುತ್ತವೆ. ಈ ಹಬ್ಬಗಳ ಆಚರಣೆಗಳಲ್ಲಿ ಮಹಿಳೆಯರದೇ ಹೆಚ್ಚಿನ ಪಾಲಿರುತ್ತದೆಯೆಂದೂ ಅಡ್ಡಿಯಿಲ್ಲ. ಧಾರ್ಮಿಕವಾಗಿ ಎಲ್ಲ ಹಬ್ಬಗಳೂ ಮಹಿಳೆಯರಿಗೇ ಮೀಸಲಾದರೂ ಕೆಲವು ಹಬ್ಬಗಳಂತೂ ಕೇವಲ ಮಹಿಳೆಯರಿಗಾಗಿಯೇ ಸೃಷ್ಟಿಗೊಂಡಂತಿವೆ. ಉದಾಹರಣೆಗೆ ಚೈತ್ರ ಮಾಸ, ಶ್ರಾವಣಮಾಸ, ಕಾರ ಹುಣ್ಣಿಮೆಗಳನ್ನು ನೋಡಬಹುದು. ಕೆಲವು ವೈಯುಕ್ತಿಕ ಹಬ್ಬಗಳಾದರೆ ಹಲವು ಸಾಮೂಹಿಕ ಹಬ್ಬಗಳು ಆಚರಣೆಯಲ್ಲಿರುತ್ತವೆ. ವರ್ಷದಲ್ಲಿ ಬಹುಶಃ ಮುನ್ನೂರ ಅರವತ್ತೈದು ದಿವಸಗಳೂ ವ್ರತ, ನಿಯಮ, ಹಬ್ಬಗಳಿಂದಲೇ ಕೂಡಿರುತ್ತವೆಂದು ಹೇಳಬಹುದು. ಇವೆಲ್ಲವೂ ಮನುಷ್ಯನ ಲೌಕಿಕ ಪ್ರಗತಿ, ಮತ್ತು ಆಧ್ಯಾತ್ಮಿಕ ಉನ್ನತಿಗೆ ನೆರವಾಗುವ ವಿಶೇಷ ಸಾಧನಾ ಮಾರ್ಗಗಳಾಗಿವೆ. ಇವುಗಳ ಉದ್ದೇಶ ದುಷ್ಟಶಿಕ್ಷೆ, ಶಿಷ್ಟರಕ್ಷೆಯೇ ಆಗಿದೆ. ಎಲ್ಲಕ್ಕೂ ಹೆಚ್ಚಾಗಿ ಮಾನಸಿಕ ಶಾಂತಿ ದೊರೆಯುತ್ತದೆ ಎಂದು ಹೇಳಬಹುದು.

ಇಂದಿನ ದಿನಗಳಲ್ಲಿ ಎಲ್ಲ ಮಹಿಳೆಯರಿಗೂ ವರ್ಷವಿಡೀ ಹಬ್ಬಗಳನ್ನು ಆಚರಿಸುತ್ತ ಕೂಡುವಲ್ಲಿ ಸಮಯವಿರುವುದಿಲ್ಲವಾದರೂ ಇದ್ದುದರಲ್ಲಿಯೇ ಸಮಯ ಪಡೆದುಕೊಂಡು ಸಾಂಕೇತಿಕವಾಗಿ ಹಬ್ಬಗಳನ್ನು ಆಚರಿಸುವಲ್ಲಿ ಯಾವ ಗೃಹಿಣಿಯರೂ ಹಿಂದೆ ಬಿದ್ದಿಲ್ಲ. ಅವರ ಜೀವನದಲ್ಲಿ ಹಬ್ಬಗಳಿಗೆ ಮಹತ್ವವಿರುವಷ್ಟು ಬೇರಾವುದಕ್ಕೂ ಇರುವುದಿಲ್ಲವೆಂದೇ ಹೇಳಬಹುದಾಗಿದೆ.

ವಸಂತ ಋತುವಿನ ಆಗಮನದೊಂದಿಗೆ ಚೈತ್ರ ಮಾಸ ಪ್ರಾರಂಭವಾಯಿತೆಂದರೆ ಹಬ್ಬಗಳು ಪ್ರಾರಂಭವಾದಂತೆಯೇ. ಚೈತ್ರಮಾಸವು ಎಪ್ರಿಲ್–ಮೇದಲ್ಲಿ ಬರುವುದು. ಚೈತ್ರ ಶುದ್ಧ ಪಾಡ್ಯದಂದು 'ಯುಗಾದಿ' ಹಬ್ಬ. ಚಾಂದ್ರಮಾನ ಯುಗಾದಿ ಎಂದು ಪ್ರಸಿದ್ಧವಾಗಿರುವ ಈ ಹಬ್ಬದಿಂದ ಹಿಂದೂ ಧರ್ಮದಲ್ಲಿ ನೂತನ ವರ್ಷಧ ಪ್ರವೇಶವಾಗಿ ಹಿಂದೂ ಧರ್ಮದಲ್ಲಿ ಇಲ್ಲಿಂದಲೇ ಆರಂಭವಾಗುತ್ತದೆ. ಯುಗಾದಿ ಪ್ರತಿಪದೆ ಮೂರೂವರೆ ಶುಭದಿವಸಗಳಲ್ಲಿ ಒಂದು ಶುಭದಿನವಾಗಿದೆ. ಹಿಂದೂಗಳಿಗೆ ಅಂದು ಪ್ರಾರಂಭಿಸುವ ಕಾರ್ಯಗಳಿಗೆಲ್ಲ ಜಯ ಕಟ್ಟಿಟ್ಟದ್ದು ಎಂಬ ನಂಬಿಕೆಯಿದೆ. ಮಹಿಳೆಯರಿಗೆಲ್ಲ ಅಂದು ಸಂತಸದ ದಿನ. ನೀರಿನಲ್ಲಿ ಬೇವಿನಸೊಪ್ಪು ಹಾಕಿ ಎರೆದುಕೊಳ್ಳುವ ಸಂಭ್ರಮ. ಪೂಜೆ, ದೇವತಾರಾಧನೆ, ಪಂಚಪಕ್ವಾನ್ನಗಳ ತಯಾರಿಕೆ, ಹೊಸ ಪಂಚಾಂಗ ಶ್ರವಣ ಸಡಗರದಿಂದ ನಡೆಯುತ್ತದೆ. ಬಾಗಿಲಿಗೆ ಹಸಿರು ತೋರಣಗಳು ನಳನಳಿಸಿ ಹೊಸ ವರ್ಷದ ಸ್ವಾಗತಕ್ಕೆ ಸಿದ್ಧವಾಗಿರುತ್ತವೆ. 'ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ' ಜೊತೆಗೇ ಹೊಸ ಹರುಷವನ್ನೂ ತರುತ್ತದೆ. ಈ ಹಬ್ಬದಂದು ಹಿಂದೂಗಳು ಸಮನಾಗಿ ಸ್ವೀಕರಿಸುವ ಶಕ್ತಿಯನ್ನು ಪಡೆದುಕೊಳ್ಳಲು ದೇವರಲ್ಲಿ ಪ್ರಾರ್ಥಿಸುತ್ತಾರೆ. ಸಂಸಾರದ ಸುಖ–ದುಃಖಗಳಲ್ಲಿ ಸಮಭಾಗಿಯಾಗಲು ಮಹಿಳೆ ಬೇವು–ಬೆಲ್ಲದೊಂದಿಗೆ ಈ ಹಬ್ಬವನ್ನು ಸ್ವಾಗತಿಸುತ್ತಾಳೆ. ಚೈತ್ರಶುಕ್ಲ ನವಮಿಯಂದು ಶ್ರೀ ರಾಮನವಮಿ. ಅಂದು ಶ್ರೀರಾಮ ಜಯಂತಿ. ಶ್ರೀ ರಾಮನನ್ನು ತೊಟ್ಟಿಲಲ್ಲಿ ಹಾಕಿ ತೂಗಿ ಮಹಿಳೆಯರೆಲ್ಲ ಸಂಭ್ರಮಿಸುವ ಹಬ್ಬವಿದು. ಅಂದು ಗೃಹಿಣಿಯರೆಲ್ಲ ಸಾಮೂಹಿಕವಾಗಿ ಕಲೆತು ಚೈತ್ರಗೌರಿ ಹಬ್ಬವನ್ನು ಆಚರಿಸುತ್ತಾರೆ. ಅರಿಷಿಣ–ಕುಂಕುಮ, ಹೂವೀಳ್ಯದೊಂದಿಗೆ ಪ್ರಾರಂಭವಾದ ಈ ಹಬ್ಬದಂದು ಕಡಲೆ, ಹೆಸರು ಬೇಳೆಗಳ ಕೋಸಂಬರಿ, ಪಾನಕ, ಮಜ್ಜಿಗೆಗಳ ವಿನಿಮಯವಾಗುತ್ತದೆ. ಚೈತ್ರಶುಕ್ಲ ಹುಣ್ಣಿಮೆಯ ದಿನ ವನಪೌರ್ಣಿಮೆಯೆಂದೂ ಹೆಸರಾಗಿದೆ. ಅಂದು ವನದೇವತಾ ಪೂಜೆಯಲ್ಲದೇ ಶಿವಶರಣೆ ಮಹಾದೇವಿಯಕ್ಕನ ಜಯಂತಿ. ಮಹಿಳೆಯರೆಲ್ಲ ಅಕ್ಕನನ್ನು ತೊಟ್ಟಿಲಲ್ಲಿ ಹಾಕಿ ತೂಗಿ ಶಿವಶರಣೆಗೆ ತಮ್ಮ ಪೂಜೆಯನ್ನು ಸಲ್ಲಿಸುತ್ತಾರೆ. ಸಾರ್ವಜನಿಕವಾಗಿ ಅಕ್ಕನ ಬಗ್ಗೆ ಪ್ರವಚನ, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ. ಅಂದು ಹನುಮ ಜಯಂತಿ. ಮಾರುತಿದೇವಾಲಯಗಳಲ್ಲಿ ಹನುಮಂತ ದೇವರನ್ನು ತೊಟ್ಟಿಲಲ್ಲಿ ಹಾಕುವ ಸಂಭ್ರಮ. ಸಂಜೆ ಪಲ್ಲಕ್ಕಿ ಸೇವೆ ನಡೆಯುತ್ತದೆ. ಹಲವೆಡೆ "ಭಜರಂಗ ಬಲಿ ಸಪ್ತಾಹ" ಆಚರಣೆಯಲ್ಲಿದೆ. ಈ ಹುಣ್ಣಿಮೆ ಮುತ್ತೈದೆ ಹುಣ್ಣಿಮೆಯೆಂದೂ ಹೆಸರುವಾಸಿಯಾಗಿದೆ. ಅಂದು ಕೂಡ ಗೌರಿಹಬ್ಬದ ಉತ್ಸವ ನಡೆದು ಮಹಿಳೆಯರಿಗೆಲ್ಲ ಸಂಭ್ರಮದ ವಾತಾವರಣದ ದಿನವಾಗಿದೆ. ಮಹಿಳೆಯರೆಲ್ಲ ಸಾಮೂಹಿಕವಾಗಿ 'ದೊಡ್ಡ ಗೌರಿ' ಕೂಡಿಸುವ ಕಾರ್ಯಕ್ರಮ ಹಾಕಿಕೊಂಡು ಚೈತ್ರಮಾಸದಲ್ಲಿ ಒಂದು ದಿನ ಶ್ರೀ ಗೌರಿ ಪ್ರತಿಷ್ಠಾಪಿಸಿ ಹೂವೀಳ್ಯ, ಅರಿಷಿಣ ಕುಂಕುಮ, ಉಡಿತುಂಬುವ



ಕಾರ್ಯಕ್ರಮಗಳನ್ನು ನಡೆಸಿ ಆನಂದಿಸುತ್ತಾರೆ. ಇಲ್ಲಿಗೆ ಚೈತ್ರಮಾಸದ ಮುಕ್ತಾಯವಾಗುತ್ತದೆ. [ಚಿತ್ರ–1]

ವೈಶಾಖ ಮಾಸ ಪ್ರಾರಂಭವಾದರೆ ಅಕ್ಷಯ ತೃತೀಯಾ ಆಗಮನ. ಅಂದು ಚೈತ್ರಗೌರಿಗೆ ಮುಕ್ತಾಯದ ದಿನ. ಮಹಿಳೆಯರೆಲ್ಲ ಶ್ರೀ ಗೌರಿಗೆ ವಿಶೇಷ ಪೂಜೆ, ಅಲಂಕಾರ ಮಾಡಿ ಕೊನೆಯ ದಿನವನ್ನು ಬಹು ಸಂಭ್ರಮದ ದಿನವಾಗಿ ಆಚರಿಸುತ್ತಾರೆ. ವೈಶಾಖ ಶುಕ್ಲ ತೃತೀಯಾದಂದು ಬರುವ ಅಕ್ಷಯ ತೃತೀಯಾ ಮೂರೂವರೆ ಶುಭದಿನಗಳಲ್ಲಿ ಒಂದು ಶುಭ ದಿವಸವಾಗಿದೆ. ಅಂದು ಮದುವೆ, ನೂತನ ಗೃಹ ಪ್ರವೇಶ, ವಾಸ್ತುಶಾಂತಿ ಕಾರ್ಯಕ್ರಮಗಳಿಗೆ ಪ್ರಶಸ್ತ ದಿನವಾಗಿದೆ.

ಜೇಷ್ಠ ಮಾಸದಲ್ಲಿ ಬರುವ ಕಾರ ಹುಣ್ಣಿಮೆ ಮಹಿಳೆಯರಿಗೆ ಅತ್ಯಂತ ಮಹತ್ವದ ದಿನವಾಗಿದೆ. ಜೇಷ್ಠ ಶುಕ್ಲ ಪೌರ್ಣಿಮೆಯಂದು ವಟಸಾವಿತ್ರಿ ವ್ರತದ ಹಬ್ಬ. ಅಂದು ಸತ್ಯವಾನನ ಪ್ರಾಣಕ್ಕಾಗಿ ಸಾವಿತ್ರಿ ಯಮನಲ್ಲಿ ಪ್ರಾರ್ಥಿಸಿಕೊಂಡ ದಿನ. ಗೃಹಿಣಿಯರೆಲ್ಲ ಸತ್ಯವಾನ–ಸಾವಿತ್ರಿಯರ ಕಥೆ ಶ್ರವಣಮಾಡಿ, ವಟ ವೃಕ್ಷಕ್ಕೆ ಪೂಜೆ ಸಲ್ಲಿಸಿ ತಮ್ಮ ಸೌಭಾಗ್ಯಕ್ಕಾಗಿ ಶ್ರೀದೇವಿಯಲ್ಲಿ ಪ್ರಾರ್ಥಿಸಿ ಅರಿಷಿಣ ಕುಂಕುಮ, ಉಡಿ ತುಂಬುವ ಕಾರ್ಯಕ್ರಮ ಇಟ್ಟುಕೊಳ್ಳುತ್ತಾರೆ.

ಆಷಾಢ ಮಾಸದ ಆಗಮನವಾದರೆ ಚಾತುರ್ಮಾಸದ ಪ್ರಾರಂಭ. ಏಕಾದಶಿಗಳಲ್ಲಿಯೇ ಆಷಾಢ ಶುಕ್ಲ ಏಕಾದಶಿಗೆ ಮಹತ್ವವಿದೆ. ಆಷಾಢ ಏಕಾದಶಿಗೆ ಶಯನಿ ಏಕಾದಶಿ ಎಂದೂ ಹೆಸರು. ಹಿಂದೂಗಳು ಅದರಲ್ಲಿಯೂ ವಿಶೇಷವಾಗಿ ಮಹಿಳೆಯರು ಉಪವಾಸ ವ್ರತ ಆಚರಿಸಿ ಭಜನೆ, ಕೀರ್ತನೆಗಳಿಂದ ಶ್ರೀ ವಿಠೋಬ, ಶ್ರೀ ವಿಷ್ಣುವಿನ ನಾಮಸ್ಮರಣೆ ಮಾಡುತ್ತಾರೆ. ಬಹುಳ ಅಮಾವಾಸ್ಯೆಯಂದು ನಾಗರ ಅಮಾವಾಸ್ಯೆ. ಅಂದು ದಿವಸಿ ಅಮಾವಾಸ್ಯೆಯೆಂದೂ ಭೀಮನ ಅಮಾವಾಸ್ಯೆಯೆಂದೂ ಹೆಸರಾಗಿದೆ. ಮಹಿಳೆಯರು ಅಂದು ಮಣ್ಣಿನ ಗೌರಿಯನ್ನು ಮಾಡಿ ದಿವಸಿಗೌರಿ ಎಂದು ಪೂಜಿಸುತ್ತಾರೆ.

ಶ್ರಾವಣ ಮಾಸ ಪ್ರಾರಂಭವಾಯಿತೆಂದರೆ ಮಹಿಳೆಯರಿಗೆ ಆ ತಿಂಗಳಂತೂ ಪೂರ್ತಿ ಗಡಿಬಿಡಿಯ ವಾತಾವರಣ. ಹೊಸದಾಗಿ ಮದುವೆಯಾದ ಹೆಣ್ಣುಮಕ್ಕಳು ಶ್ರಾವಣಮಾಸದಲ್ಲಿ ತವರಿಗೆ ಬರುತ್ತಾರೆ. ಶ್ರಾವಣ ಶುಕ್ಲ ತೃತೀಯಾದಂದು ಸುವರ್ಣಗೌರಿ ವ್ರತ ಮಹಿಳೆಯರ ಹಬ್ಬಕ್ಕೆ ಕಳೆ ಬರುತ್ತದೆ. ಅಂದು ಸುವರ್ಣಗೌರಿ ಪೂಜೆ. ಶ್ರಾವಣ ಶುಕ್ಲ ಚವತಿಯಂದು ನಾಗರ ಚವತಿ. ತಂಬಿಟ್ಟಿನ (ನವಣಕ್ಕಿ) ಉಂಡಿ, ಕೊಬ್ಬರಿ, ಕಡಲೆಗಳ ನೈವೇದ್ಯದೊಂದಿಗೆ ಕಲ್ಲಿನ ನಾಗನಿಗೆ, ಬೆಲ್ಲದ ಹಾಲನ್ನು ಎರೆದು ಭಯ ಭಕ್ತಿಗಳಿಂದ ಪೂಜಿಸುತ್ತಾರೆ. [ಚಿತ್ರ–2] ನಾಗನಿಂದ ತಮಗೆ ಯಾವುದೇ ಆಪತ್ತು ಒದಗದಿರಲಿ ಎಂದು ಈ ವಿಶೇಷ ಪೂಜೆ. ಮನೆಗಳಲ್ಲಿ ಹಾವುಗಳು ಒಳಗೆ ಪ್ರವೇಶಿಸಿದಂತೆ ಚಿತ್ತಾರವಾಗಿ ರಂಗವಲ್ಲಿಗಳನ್ನು ಬಿಡಿಸುತ್ತಾರೆ. ಮರುದಿನ ನಾಗರ ಚವತಿ. ಅಂದು ಮಣ್ಣಿನ ನಾಗನನ್ನು ಮಾಡಿ ಹಾಲನ್ನೆರೆದು ಪೂಜಿಸುವ ಸಂಪ್ರದಾಯವಿದೆ. ಹಾವುಗಳು ಹೊರಗೆ ಹೋಗುವಂತೆ ರಂಗವಲ್ಲಿ ಬಿಡಿಸಿರುವುದು ಅಂದಿನ ವಿಶೇಷ. ಅಂದು ರಾತ್ರಿ ನಾಗನ ಹೆಡೆ ಹೊಡೆಯುತ್ತಾರೆ. ಸಂಪ್ರೀತನಾದ ನಾಗನಿಂದ ವಿಘ್ನ ಬರದಿರಲಿ ಎನ್ನುವುದು ಅದರ ಉದ್ದೇಶ. ನಾಗನಿಗೆ ಕುಚ್ಚಿದ ಕಡುಬಿನ ನೈವೇದ್ಯವಾಗಬೇಕು. ಶ್ರಾವಣ ಮಾಸದಲ್ಲಿ ಶುಕ್ರವಾರಗಳು ತಮ್ಮದೇ



2

ಆದ ಮಹತ್ವ ಪಡೆದುಕೊಂಡಿವೆ. ಎರಡನೆಯ ಶುಕ್ರವಾರದಂದು ವರಮಹಾಲಕ್ಷ್ಮಿ ವ್ರತ. ಮಹಿಳೆಯರು ಶ್ರಾವಣ ಶುಕ್ರವಾರಗಳಲ್ಲಿ ಮಣ್ಣು, ತಾಮ್ರ, ಬೆಳ್ಳಿಯ ಗಡಿಗೆಗಳ ಶ್ರೀ ಗೌರಿಯನ್ನು ಕೂಡಿಸಿ, ಪೂಜಿಸಿ ಹೂರಣ ನೈವೇದ್ಯವನ್ನರ್ಪಿಸುತ್ತಾರೆ. ಸಂಪತ್ತು ಶುಕ್ರವಾರ ಗೌರಿಯ ಕಥೆಯನ್ನು ಓದುವ ಪರಿಪಾಠವಿದೆ. ಶ್ರಾವಣ ಶುಕ್ರವಾರ, ಶನಿವಾರಗಳೆಲ್ಲ ಗೌರಿಹಬ್ಬಕ್ಕೆ ಮೀಸಲು. ಶ್ರಾವಣ ಸೋಮವಾರಗಳಲ್ಲಿ ಮಹಿಳೆ ಉಪವಾಸ ವ್ರತ ಆಚರಿಸಿ ಶಿವಲಿಂಗವನ್ನು ಪೂಜಿಸಿ ಭಜಿಸುತ್ತಾಳೆ. ಈ ಸೋಮವಾರಗಳಿಗೆ ವಿಶೇಷ ಮಹತ್ವವಿದೆ. ಶ್ರಾವಣ ಮಾಸದ ಮಂಗಳವಾರಗಳು ಮಂಗಳಗೌರಿಗೆ ಮೀಸಲಾಗಿವೆ. ಹೊಸದಾಗಿ ಮದುವೆಯಾದ ಹೆಣ್ಣುಮಕ್ಕಳು ಶ್ರಾವಣ ಮಾಸದಲ್ಲಿ ಬರುವ ಪ್ರತಿ ಮಂಗಳವಾರದಂದು ಶ್ರೀ ಮಂಗಳಾಗೌರಿಯ ಪೂಜೆ ಮಾಡಿ ತಮಗೆ ಸೌಭಾಗ್ಯ ಸಂಪತ್ತು ಲಭಿಸಲೆಂದು ಶ್ರೀ ಗೌರಿಯನ್ನು ಪ್ರಾರ್ಥಿಸುತ್ತಾರೆ. ಸಾಮೂಹಿಕವಾಗಿಯೂ ಮಂಗಳಗೌರಿ ಪೂಜೆಗಳು [ಚಿತ್ರ–1] ನೆರವೇರುತ್ತವೆ. ಹೀಗೆ ಐದು ವರ್ಷ ಮಂಗಳಗೌರಿ ಪೂಜೆ ಮಾಡುವ ಸಂಪ್ರದಾಯವಿದೆ. ಬುಧವಾರ, ಗುರುವಾರಗಳು ಬುಧ–ಬೃಹಸ್ಪತಿ ದೇವತೆಗಳ ಪೂಜೆಗೆ ಪ್ರಸಿದ್ಧವಾಗಿವೆ. ಶ್ರಾವಣ ಬಹುಳ ಅಷ್ಟಮಿಯಂದು ಶ್ರೀಕೃಷ್ಣ ಜನ್ಮಾಷ್ಟಮಿ. ಅಂದು ಶ್ರೀಕೃಷ್ಣ ಜಯಂತಿ. ಸುಮಂಗಲೆಯರು ಉಪವಾಸ ವ್ರತ ಆಚರಿಸಿ ಶ್ರೀಕೃಷ್ಣನನ್ನು ತೊಟ್ಟಿಲಲ್ಲಿ ಹಾಕುವ ದಿನ. ಅಂದು ಮಣ್ಣಿನಲ್ಲಿ ಶ್ರೀಕೃಷ್ಣನನ್ನು ಮಾಡಿ ಪೂಜಿಸುವ ದಿನವಾಗಿದೆ. ಗೋಕುಲಾಷ್ಟಮಿಯೆಂದೂ ಇದಕ್ಕೆ ಹೆಸರು. ಹೀಗೆ ಶ್ರಾವಣ ಮಾಸದಲ್ಲಿ ಪ್ರತಿಯೊಂದು ದಿನವೂ ತನ್ನದೇ ಆದ ಮಹತ್ವ ಪಡೆದುಕೊಂಡಿದೆ. ಶ್ರೀ ಸಂಪತ್ತು ಗೌರಿಯ ಪೂಜೆ ಮಾಡಿ ಸುಮಂಗಲೆಯರು ತಮಗೆ ಸೌಭಾಗ್ಯ ಲಭಿಸಲಿ ಎಂದು ಹಾರೈಸುವುದೇ ಶ್ರಾವಣ ಗೌರಿಯ ಹಬ್ಬದ ಉದ್ದೇಶ. ಪಂಚಮಿ ಮರುದಿನ ಶಿರಿಯಾಳ ಶೆಟ್ಟಿ ವ್ರತ ಅಥವಾ ಮಕ್ಕಳ ಹಬ್ಬ.

ಭಾದ್ರಪದ ಮಾಸ ಆಗಮಿಸಿದರೆ ಗೌರಿ–ಗಣೇಶರ ಆಗಮನ. ಭಾದ್ರಪದ ಶುಕ್ಲ ತದಿಗೆಯಂದು ಗೌರಿಹಬ್ಬ. ಶ್ರೀ ಗೌರಿಯನ್ನು ಅಷ್ಟಮಿ ಗೌರಿಯೆಂದೂ ಕರೆಯುವ ವಾಡಿಕೆಯಿದೆ. ಅಷ್ಟಮಿಯಂದು ಹೆಣ್ಣುಮಕ್ಕಳು ಅಷ್ಟಮಿದಾರ ಹಾಕಿಕೊಳ್ಳುವ ಸಂಪ್ರದಾಯವಿದೆ. ಶುಕ್ಲ ಚವತಿಯಂದು ಗಣೇಶ ಚತುರ್ಥಿ. ಮನೆ ಮನೆಗಳಲ್ಲಿ ಮಣ್ಣಿನ ಗಣೇಶನನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಗಣೇಶನ ಹಬ್ಬ ಸಾರ್ವಜನಿಕ ಹಾಗೂ ರಾಷ್ಟ್ರೀಯ ಹಬ್ಬವಾಗಿದೆ. ಮೋದಕ ಪ್ರಿಯ ಶ್ರೀ ಗಣೇಶನಿಗೆ ಕಡಬು, ಮೋದಕಗಳ ನೈವೇದ್ಯವಾಗಬೇಕು. ಸಾಮಾನ್ಯವಾಗಿ ಐದು ದಿನ, ಹನ್ನೊಂದು ದಿನ ಅಂದರೆ ಅನಂತ ಚತುರ್ದಶಿಯ ದಿನ ಹೀಗೆ ಅವರವರ ಪದ್ಧತಿಗನುಸಾರವಾಗಿ ಗಣೇಶನನ್ನು ಪ್ರತಿಷ್ಠಾಪಿಸಿ, ಪೂಜಿಸಿ ನೀರಿನಲ್ಲಿ ವಿಸರ್ಜನೆ ಮಾಡುತ್ತಾರೆ.

ಆಶ್ವಯುಜ ಮಾಸ ಬಂದರೆ ನವರಾತ್ರಿ ಉತ್ಸವ ಆರಂಭ. ಶುಕ್ಲ ಪಾಡ್ಯದಿಂದ ವಿಜಯದಶಮಿಯವರೆಗೆ ಮುತ್ತೈದೆಯರಿಗೆಲ್ಲ ಶ್ರೀದೇವಿಯ ಪೂಜೆಯ ಗಡಿಬಿಡಿ. ಎಲ್ಲ ಹಬ್ಬಗಳಲ್ಲಿ 'ವಿಜಯದಶಮಿ' ಹತ್ತುದಿನಗಳ ದೀರ್ಘಾವಧಿಯ ಹಬ್ಬವಾಗಿದೆ. ಇದು ಸಾರ್ವಜನಿಕ ಹಬ್ಬವೂ ಹೌದು. ಆಶ್ವಯುಜ ಶುಕ್ಲ ಪ್ರತಿಪದೆಯಂದು ಶ್ರೀ ದುರ್ಗಾದೇವಿಯನ್ನು ಪ್ರತಿಷ್ಠಾಪಿಸಿ, ಘಟಸ್ಥಾಪನೆ ಮಾಡಿ ಹತ್ತುದಿನಗಳ ಪರ್ಯಂತವೂ ದೇವಿಯ ಜಪ, ತಪ, ಪಾರಾಯಣ, ವ್ರತಗಳನ್ನು ಮಾಡಿ ಪೂಜಿಸಿ ಪ್ರಾರ್ಥಿಸುತ್ತಾರೆ. ಶ್ರೀದೇವಿಯ ಮುಂದೆ ನಂದಾದೀಪ ಹಾಕಿರುತ್ತಾರೆ. ದುಷ್ಟ ಶಕ್ತಿಯ ನಿವಾರಣೆಯಾಗಿ ಬೆಳಕು ಬರಲಿ ಎಂಬುದೇ ನಂದಾದೀಪದ ಉದ್ದೇಶ. ಐದನೆಯ ದಿನ 'ಲಲಿತಾ ಪಂಚಮಿ'. ಅಂದು ಶ್ರೀನಿವಾಸ–ಪದ್ಮಾವತಿಯರ ವಿವಾಹ ಮಾಡಿ [ಚಿತ್ರ–3] 'ಶ್ರೀನಿವಾಸ ಕಲ್ಯಾಣ' ಆಚರಿಸುತ್ತಾರೆ. ಏಳನೆಯ ದಿನ ದುರ್ಗಾ ಸಪ್ತಮಿ, ಎಂಟನೆಯ ದಿನ ದುರ್ಗಾಷ್ಟಮಿ. ದೇವಿಯನ್ನು ದುರ್ಗೆ, ಕಾಳಿ ಎಂದು ಪೂಜಿಸಿ ಭಜಿಸುತ್ತಾರೆ. ಮಹಾನವಮಿಯಂದು ಆಯುಧಪೂಜಾ ಅಥವಾ ಖಂಡೆ (ಖಡ್ಗ) ಪೂಜಾ ಎಂದು ಹೆಸರು. ನಿತ್ಯೋಪಯೋಗಿ ಯಂತ್ರ ಸಲಕರಣೆ, ಆಯುಧಗಳನ್ನು ಪೂಜಿಸುವ ಪರಿಪಾಠವಿದೆ. ದೇವಿ ಜಗನ್ಮಾತೆಯು ದುರುಳರಾದ ರಾಕ್ಷಸರನ್ನು ತನ್ನ ದಿವ್ಯವಾದ ಆಯುಧ



3

ಗಳಿಂದ ಸಂಹಾರ ಮಾಡಿದುದರ ಸ್ಮರಣಾರ್ಥವಾಗಿ ಅಂದು ಆಯುಧಗಳಿಗೆ ವಿಶೇಷ ಪ್ರಾಶಸ್ತ್ಯವಿದೆ. ವಿದ್ಯಾದೇವಿ ಸರಸ್ವತಿ, ಶಾರದೆಯನ್ನು ಸ್ತುತಿಸಿ ಪುಸ್ತಕ ಪೂಜೆಯನ್ನು ಮಾಡುತ್ತಾರೆ. ಇಚ್ಛಾ, ಜ್ಞಾನ, ಕ್ರಿಯಾ, ಶಕ್ತಿ ಸ್ವರೂಪಿಣಿಯಾಗಿರುವ ದೇವಿಯನ್ನು ದುರ್ಗಾ, ಚಾಮುಂಡಿ, ಲಲಿತಾ, ಭುವನೇಶ್ವರಿ, ಭಗವತಿ, ಶಾರದೆ, ಸರಸ್ವತಿ ಎಂದು ನಾನಾ ಹೆಸರುಗಳಿಂದ ಗೌರವಿಸಿ ಅಖಂಡವಾಗಿ ದೇವಿ ನಾಮಸ್ಮರಣೆ ಮಾಡಿ ಹತ್ತನೆಯ ದಿನ ವಿಜಯದಶಮಿ ಅಥವಾ ದಸರಾ ಆಚರಿಸುತ್ತಾರೆ. ಅಂದು ಬನ್ನಿ ಮುಡಿಯುವ ಸಂಭ್ರಮದಲ್ಲಿ ಪಾಲ್ಗೊಳ್ಳುವಲ್ಲಿ ಮಹಿಳೆಯರಿಗೆ ಅತ್ಯುತ್ಸಾಹ. ಬನ್ನಿ ವೃಕ್ಷಕ್ಕೆ ಪೂಜೆ ಸಲ್ಲಿಸಿ, ಅದರ ಪತ್ರಿಗಳನ್ನು ಪ್ರಸಾದವಾಗಿ ಸ್ವೀಕರಿಸಿದರೆ ಪಾಪ ಪರಿಹಾರ, ಕಾರ್ಯಸಿದ್ಧಿ, ಕಲ್ಯಾಣ ಪ್ರಾಪ್ತಿಯಾಗುವವೆಂದು ಪ್ರತೀತಿಯಿದೆ. ಅಂದು ಬನ್ನಿ ಪತ್ರಿಗಳು ಬಂಗಾರಕ್ಕೆ ಸಮ ಎಂಬ ಪುರಾಣೋಕ್ತ ಹೇಳಿಕೆಯೂ ಇದೆ. 'ಬನ್ನಿ ತೆಗೆದುಕೊಂಡು ಬಂಗಾರದ ಹಾಗೆ ಬಾಳೋಣ' ಎಂದು ಮಹಿಳೆಯರೆಲ್ಲ ಬನ್ನಿ ವಿನಿಮಯ ಮಾಡಿಕೊಂಡು ಸಂತಸ ಪಡುತ್ತಾರೆ. ದಸರಾ ಅಥವಾ ದಶ–ಅಹರ (ಹತ್ತು ಹಗಲು) ಹಬ್ಬವು ಮೂರೂವರೆ ಶುಭ ದಿವಸಗಳಲ್ಲಿ ಒಂದು ಶುಭದಿನವಾದ್ದರಿಂದ ಅಂದು ನೂತನ ಗೃಹಪ್ರವೇಶ, ಭೂಮಿಪೂಜೆ, ಉದ್ಯಮ ಪ್ರಾರಂಭ, ವಿದ್ಯಾರಂಭ ಮೊದಲಾದ ಶುಭಕಾರ್ಯಗಳನ್ನು ಪ್ರಾರಂಭಿಸುವ ಸಂಪ್ರದಾಯವಿದೆ. ಶುಕ್ಲ ಹುಣ್ಣಿಮೆಯಂದು ಕೋಜಾಗರಿ ವ್ರತ. ಅಂದು ಶ್ರೀ ಲಕ್ಷ್ಮಿಯನ್ನು ಪೂಜಿಸುತ್ತಾರೆ. ಇಲ್ಲಿಗೆ ನವರಾತ್ರಿ ಉತ್ಸವ ಮುಕ್ತಾಯಗೊಳ್ಳುತ್ತದೆ.

ಕಾರ್ತಿಕ ಮಾಸ ಬಂತೆಂದರೆ ಮಹಿಳೆಯರಿಗೆ ಇನ್ನೂ ಹೆಚ್ಚಿನ ಸಂಭ್ರಮ. ಇದು ಬೆಳಕಿನ ಮಾಸ. ಆಶ್ವಯುಜ ಬಹುಳ ದ್ವಾದಶಿಯಿಂದ ಆರಂಭವಾಗುವ ದೀಪಾವಳಿ ಹಬ್ಬ ಐದು ದಿನಗಳ ಪರ್ಯಂತವೂ ಸಾಗಿ ಕಾರ್ತಿಕ ಶುದ್ಧ ಬಲಿಪಾಡ್ಯದವರೆಗೆ ಎಡೆಬಿಡದೆ ಆಚರಿಸಲ್ಪಡುತ್ತದೆ. ಬಹುಳ ಚತುರ್ದಶಿಯಂದು ನರಕ ಚತುರ್ದಶಿ. ನಸುಕಿನಲ್ಲೆದ್ದು ತೈಲಾಭ್ಯಂಜನ ಮಾಡಿ ಸೂರ್ಯೋದಯದ ಮುನ್ನವೇ ಗಂಡಸರಿಗೆಲ್ಲ ಆರತಿ ಬೆಳಗುವಲ್ಲಿ ಮಹಿಳೆಯರ ಗಡಿಬಿಡಿ ಹೇಳತೀರದು. ಶ್ರೀಕೃಷ್ಣನು ದುಷ್ಟ ಶಕ್ತಿ ನರಕಾಸುರನ ವಧೆ ಮಾಡಿ ತಂಗಿ ಸುಭದ್ರೆಯಿಂದ ಆರತಿ ಮಾಡಿಸಿಕೊಂಡ ಪುಣ್ಯದಿನವಿದು. ಅಂತೆಯೇ ಅಕ್ಕತಂಗಿಯರೆಲ್ಲ ಅಣ್ಣ ತಮ್ಮಂದಿರಿಗೆ ಆರತಿ ಮಾಡಿ ಶುಭಕೋರುತ್ತಾರೆ. ಬಹುಳ ಅಮವಾಸ್ಯೆಯಂದು ಲಕ್ಷ್ಮೀಪೂಜೆ. ಭೂದೇವಿ ಅಂದು ಮುದ್ದುಮಗ ನರಕಾಸುರನ ವಧೆಯಾದರೂ ದುಃಖಿಸದೇ ಭೂಲೋಕದಲ್ಲಿ ಸಂಚಾರ ಕೈಗೊಳ್ಳುತ್ತಾಳಂತೆ. ಅಂತೆಯೇ ಅಂದು ಲಕ್ಷ್ಮೀದೇವಿಗೆ ವಿಶೇಷ ಪೂಜೆ. ಬಲಿಪ್ರತಿಪದೆಯಂದು ಬಲಿಪೂಜೆ. ಶ್ರೀವಿಷ್ಣುವು ವಾಮನಾವತಾರಿಯಾಗಿ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದ ದಿನ. ಬಲಿ ಚಕ್ರವರ್ತಿಯ ಸ್ಮರಣಾರ್ಥವಾಗಿ ಅಂದು ಬಲಿಪ್ರತಿಪದೆ ಆಚರಿಸಿ ಬೆಳಕಿನ ಆರಾಧನೆ ಮಾಡುವಲ್ಲಿ ಮಹಿಳೆಯರಿಗೆ ವಿಶೇಷ ಆಸಕ್ತಿ. ಮನೆಯ ಮುಂದೆ ಸಾಲು ಸಾಲು ದೀಪಗಳ ಹಣತೆಗಳು ಬೆಳಗುತ್ತಿರುತ್ತವೆ. ಬಣ್ಣ ಬಣ್ಣದ ಆಕಾಶಬುಟ್ಟಿಗಳು ಹಾರಾಡಿ ಕಣ್ಣು ಕೋರೈಸುತ್ತವೆ. ಪಗಡೆಯಾಟ ಮಹಿಳೆಯರಿಗೊಂದು ಹಬ್ಬವೇ ಸರಿ. ದೇವಾಲಯಗಳಲ್ಲಿ ಕಾರ್ತಿಕ ತಟಗೆಯಂದು ಅಕ್ಕನ ತದಿಗೆ. ಇದು ಹೆಣ್ಣು ಮಕ್ಕಳ ಹಬ್ಬ. ಅಣ್ಣಂದಿರು ತಮ್ಮ ಅಕ್ಕ ತಂಗಿಯರಿಗೆ ಉಡುಗೊರೆ ಕೊಡುವ ದಿನ. ಹೊಸದಾಗಿ ಮದುವೆಯಾದ ಸುಮಂಗಲೆಯರು ಮೊದಲ ದೀಪಾವಳಿ ಹಬ್ಬಕ್ಕೆ ದಂಪತಿ ಸಮೇತ ತವರುಮನೆಗೆ ಬಂದು ಆದರಾತಿಥ್ಯ, ಕಾಣಿಕೆ ಪಡೆಯಲೇಬೇಕು. ತವರುಮನೆ ಆತಿಥ್ಯ ಪಡೆದುಕೊಳ್ಳುವಲ್ಲಿ ಸುಮಂಗಲೆಯರಿಗೆ ದೀಪಾವಳಿಯಲ್ಲಿ ವಿಶೇಷ ಪ್ರಾಶಸ್ತ್ಯವಿದೆ. ಕಡೀ ಪಂಚಮಿಯಂದು ಮುಕ್ತಾಯಗೊಳ್ಳುವ ಈ ಹಬ್ಬ ಪಾಂಡವರ ಹಬ್ಬವೆಂದೂ ಪ್ರಸಿದ್ಧವಾಗಿದೆ. ದೀಪಾವಳಿಯ ಬಲಿಪ್ರತಿಪದೆಯು ಮೂರುವರೆಯ ಶುಭದಿವಸಗಳಲ್ಲಿ ಅರ್ಧಶುಭದಿನವಾಗಿದೆ. ಅಂದು

ಕೂಡ ಮಹಿಳೆಯರು ಶುಭಕಾರ್ಯಗಳನ್ನು ಕೈಗೊಳ್ಳುತ್ತಾರೆ. ತೈಲಾಭ್ಯಂಜನ, ಬೆಳಕಿನ ಆರಾಧನೆ, ದೇವತಾರಾಧನೆ, ವಿವಿಧ ವಿನೋದಾವಳಿಗಳ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಸಂಭ್ರಮದಲ್ಲಿ ತಲ್ಲೀನರಾದ ಮಹಿಳೆಯರಿಗೆ ದೀಪಳಿಗೆ ಹಬ್ಬದ ಮುಕ್ತಾಯವಾದಾಗ ಸ್ವಲ್ಪ ಬಿಡುವು ಸಿಕ್ಕಂತಾಗುತ್ತದೆ. ಕಾರ್ತಿಕ ಶುಕ್ಲ ದ್ವಾದಶಿಯಂದು ಉತ್ಥಾನ ದ್ವಾದಶಿ. ಅಂದು ಶ್ರೀ ತುಲಸೀ ವಿವಾಹ; ಕಿರು ದೀವಳಿಗೆ. ಶ್ರೀಕೃಷ್ಣ–ತುಳಸಿಯರ ವಿವಾಹ ಸಂಭ್ರಮದಲ್ಲಿ ಮತ್ತೆ ಮಹಿಳೆಗೆ ಹೊಸ ಉತ್ಸಾಹ ಮೂಡುತ್ತದೆ. ವೃಂದಾವನ ಶ್ರೀ ತುಳಸಿಯನ್ನು ಪೂಜಿಸಿ ಶ್ರೀಕೃಷ್ಣನಿಗೆ ಧಾರೆ ಎರೆದು ಕೊಡುವ ಸಂಭ್ರಮ. ಶ್ರೀ ತುಳಸಿ ಪೂಜೆಯಿಂದ ಮೋಕ್ಷಪ್ರಾಪ್ತಿ ಎಂದು ಸನಾತನ ಅಭಿಪ್ರಾಯವಿದೆ. ಶ್ರೀ ಹರಿಗೆ ತುಳಸಿಯಿಲ್ಲದ ಪೂಜೆ ನಿಷಿದ್ಧ.

ಮಾರ್ಗಶಿರ ಮಾಸ ಬಂದರೆ ಮಹಿಳೆಯರಿಗೆ ಹಬ್ಬಗಳ ಗಡಿಬಿಡಿಯಿಲ್ಲ. ಶುಕ್ಲ ಏಕಾದಶಿಯಂದು ಗೀತಾ ಜಯಂತಿ. ಶ್ರೀಕೃಷ್ಣ ಅರ್ಜುನನಿಗೆ ಯುದ್ಧ ಭೂಮಿಯಲ್ಲಿ ಭಗವದ್ಗೀತೆಯನ್ನು ಬೋಧಿಸಿದ ದಿನ. ಈ ಪುಣ್ಯದಿನದಂದು ಮಹಿಳೆಯರು ಉಪವಾಸ ವ್ರತ ಆಚರಿಸಿ ನಿಷ್ಠೆಯಿಂದ ಶ್ರೀಕೃಷ್ಣನನ್ನು ಹಾಗೂ ಭಗವದ್ಗೀತೆಯನ್ನು ಪೂಜಿಸುತ್ತಾರೆ. ಮಾರ್ಗಶೀರ್ಷ ಹುಣ್ಣಿಮೆಯಂದು ಶ್ರೀ ದತ್ತಾತ್ರೇಯ ಜಯಂತಿ. ಮಹಿಳೆಯರಿಗೆಲ್ಲಾ ಅಂದು ಅನಸೂಯಾಸುತ, ತ್ರಿಮೂರ್ತಿರೂಪನಾದ ದತ್ತಾತ್ರೇಯನನ್ನು ತೊಟ್ಟಿಲಲ್ಲಿ ಹಾಕುವ ಸಂಭ್ರಮ. ದತ್ತಾತ್ರೇಯ ಮಂದಿರಗಳಲ್ಲಿ ದತ್ತ ಜಯಂತಿ ಸಾಮೂಹಿಕವಾಗಿ ಆಚರಿಸಲ್ಪಡುತ್ತದೆ.

ಪುಷ್ಯ ಮಾಸದಲ್ಲಿ ಶುಭಕಾರ್ಯಗಳಿಗೆ ಪ್ರಾಶಸ್ತ್ಯವಿಲ್ಲ. ಅದು ಶೂನ್ಯ ಮಾಸ ಮತ್ತು ಬಿಡುವಿನ ಮಾಸವಾಗಿದೆ. ಆ ಮಾಸದ ಮೂವತ್ತನೆಯ ದಿನ ಮಕರ ಸಂಕ್ರಮಣ. ಅಂದು ಉತ್ತರಾಯಣ ಪುಣ್ಯಕಾಲ ಪ್ರಾರಂಭವಾಗುವ ದಿನವಾದ್ದರಿಂದ ಹಿಂದೂಗಳಿಗೆ ಸುಭ್ರಮದ ದಿನವಾಗಿದೆ. ಸೂರ್ಯನು ದಕ್ಷಿಣಾಯಣದಿಂದ ಉತ್ತರಾಯಣದ ಕಡೆಗೆ ಸಾಗುವದರಿಂದ ಪುಣ್ಯಕಾಲ ಬಂತೆಂದೂ ಎಣಿಸುತ್ತಾರೆ. ಸೂರ್ಯನು ಮಕರ ರಾಶಿಯಲ್ಲಿ ಪ್ರವೇಶಿಸುವುದರಿಂದ ಮಕರ ಸುಕ್ರಾಂತಿ ಎಂದೂ ಹೆಸರಾಗಿದೆ. ಮಹಿಳೆಯರು, ಮಕ್ಕಳು ಹೊಸಬಟ್ಟೆ ಧರಿಸಿ 'ಎಳ್ಳು–ಬೆಲ್ಲ' ಹಂಚಿ, 'ಎಳ್ಳು–ಬೆಲ್ಲ ತೆಗೆದುಕೊಂಡು ಒಳ್ಳೆಯವರಾಗಿ ಬಾಳೋಣ' ಎಂದು ಹಾರೈಸುತ್ತಾರೆ. ಹಿರಿಯರಿಂದ ಆಶೀರ್ವಾದ ಪಡೆದುಕೊಳ್ಳುವ ಸುಭ್ರಮ. ಒಬ್ಬರಿಗೊಬ್ಬರು ಸ್ನೇಹಮಯರಾಗಿರುವುದೇ ಈ ಹಬ್ಬದ ಉದ್ದೇಶ. ಹೆಣ್ಣುಮಕ್ಕಳು ಎಳ್ಳು, ಕಬ್ಬು, ಸಕ್ಕರೆ ಅಚ್ಚು ಬೀರುತ್ತಾರೆ, ಅಂದು ಎಳ್ಳಿನ ಸ್ನಾನಕ್ಕೆ ಮಹತ್ವವಿದೆ. ಯಾತ್ರಾರ್ಥಿಗಳು ಸ್ನಾನ ಮಾಡಿ ಬರುತ್ತಾರೆ.

ಮಾಘ ಮಾಸ ಬಂದಿತೆಂದರೆ ಮಹಿಳೆಯರಿಗೆ ಸೂರ್ಯೋದಯದ ಮುನ್ನ ಮಾಘ ಸ್ನಾನದ ಗಡಿಬಿಡಿ. ಮಾಘ ಶುಕ್ಲ ಸಪ್ತಮಿಯಂದು 'ರಥ ಸಪ್ತಮಿ'. ಅಂದು ಸೂರ್ಯನನ್ನು ಆರಾಧಿಸುವ ದಿನ. ಅಂದು ಸೂರ್ಯ ಜಯಂತಿ. ಸೂರ್ಯೋದಯದ ಮುನ್ನ ಸ್ನಾನ ಮಾಡಿದರೆ ಸರ್ವಪಾಪ ಪರಿಹಾರವಾಗುತ್ತವೆಂದು ಪ್ರತೀತಿ. ಮಾಘಕೃಷ್ಣ ತ್ರಯೋದಶಿಯಂದು ಮಹಾ ಶಿವರಾತ್ರಿ ಹಬ್ಬ. ಶಿವನ ಜನ್ಮ ದಿನ. ಮಹಿಳೆಯರೆಲ್ಲ ಅಂದು ಉಪವಾಸ ವ್ರತ ಆಚರಿಸಿ ನೀಲಕಂಠ ಶಿವನನ್ನು, ತಾಂಡವರುದ್ರನನ್ನು ಪೂಜಿಸಿ, ಈಶ್ವರ ದೇವಾಲಯ, ವಿಶ್ವನಾಥ ಮಂದಿರ, ಶಿವ–ದೇವಾಲಯಗಳಿಗೆ ಹೋಗಿ ಶಿವನ ದರ್ಶನವನ್ನು ಪಡೆದು ಧನ್ಯರಾಗುತ್ತಾರೆ. ರಾತ್ರಿ ಜಾಗರಣೆ ಮಾಡಿ ಭಜನೆ, ಶಿವಸ್ತುತಿ, ಶಿವಧ್ಯಾನಗಳಲ್ಲಿ ನಿರತರಾಗುತ್ತಾರೆ. ಮರುದಿನ ಶಿವರಾತ್ರಿ ಪಾರಣೆ ಮಾಡಿ ಆಹಾರ ಸ್ವೀಕರಿಸುತ್ತಾರೆ.

ಫಾಲ್ಗುಣ ಮಾಸದಲ್ಲಿ ಫಾಲ್ಗುಣ ಶುಕ್ಲ ಹುಣ್ಣಿಮೆಯಂದು ಹೋಳಿಹುಣ್ಣಿಮೆ. ಕಾಮದಹನ. ಇದು ಗಂಡಸರ ಹಬ್ಬ. ಶಿವನು ಕಾಮನನ್ನು ಸುಟ್ಟ ದಿನ; ಓಕುಳಿ ಹುಣ್ಣಿಮೆಯಂದು ಮಹಿಳೆಯರು ಕಾಮ ರತಿಯರನ್ನು ಪೂಜಿಸಿ ಕಾಮದಹನದ ಬೂದಿಯನ್ನು ಶಿರದಲ್ಲಿ ಧರಿಸಿ ತಮ್ಮ ಸೌಭಾಗ್ಯಕ್ಕಾಗಿ ಶಿವನಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ. ಅಂದು ಹೋಳಿಕಾದೇವಿಯನ್ನು ಆರಾಧಿಸುತ್ತಾರೆ. ಫಾಲ್ಗುಣ ಕೃಷ್ಣ ಅಮಾವಾಸ್ಯೆಯಂದು ಯುಗಾದಿ ಅಮಾವಾಸ್ಯೆ. ಇದು ವರ್ಷಾಂತ್ಯದ ದಿನವಾಗಿದೆ.

ಹಿಂದೂ ಮಹಿಳೆಯರು ಹೀಗೆ ಶ್ರೀದೇವ–ದೇವಿಯರನ್ನು ನಾನಾ ಹೆಸರುಗಳಿಂದ ವರ್ಷ ಪೂರ್ತಿ ನಿಷ್ಠೆಯಿಂದ ಪೂಜಿಸಿ, ಪುನೀತರಾಗುವಲ್ಲಿ ಧನ್ಯತೆ ಪಡೆಯುತ್ತಾರೆ. ಹಬ್ಬಗಳಲ್ಲಿ ಮಹಿಳೆಯರಿಗಿರುವ ಆಸಕ್ತಿ, ನಿಷ್ಠೆ, ನಿರಾಹಾರ ವ್ರತಪಾಲನೆ, ಭಕ್ತಿ, ಶ್ರದ್ಧೆ, ಕರ್ತೃತ್ವ ಶಕ್ತಿ, ಸಂಭ್ರಮ ಅಪಾರವಾದದ್ದು ಮತ್ತು ಮೆಚ್ಚತಕ್ಕ ವಿಷಯವಾಗಿದೆ.

—ರೇಣುಕಾ ದೇಶಪಾಂಡೆ,
ಶಿರಹಟ್ಟಿ

ಚಿತ್ರಗಳು : ಅರವಿಂದ ದೇಶಪಾಂಡೆ

# ಚೈತನ್ಯರೂಪಿ ಲಕ್ಷ್ಮಿ

—ಬಿ.ಆರ್ ನಾಗರತ್ನ

ಸೃಷ್ಟಿ, ಸ್ಥಿತಿ, ಲಯಗಳಿಗೆ ಬ್ರಹ್ಮ ವಿಷ್ಣು ಮಹೇಶ್ವರರು ಕಾರ್ಯ ಕಾರಣಕರ್ತರು. ಸೃಷ್ಟಿಗೆ ಬ್ರಹ್ಮ ಪಾಲನೆಗೆ ವಿಷ್ಣು, ಸದ್ಗತಿಗೆ ಪರಮೇಶ್ವರ. ಶೈವಪುರಾಣಗಳಲ್ಲಿ ಶಿವನಿಗೂ, ವೈಷ್ಣವಪುರಾಣಗಳಲ್ಲಿ ವಿಷ್ಣುವಿಗೂ ಶ್ರೇಷ್ಠತೆ ಯಿದೆ. ಬ್ರಹ್ಮನು ವಿಷ್ಣುವಿನ ನಾಭಿ ಕಮಲದಿಂದ ಹುಟ್ಟಿದವನು. ವಿಷ್ಣುವಿನ ವಿರಾಟ್ ಸ್ವರೂಪದಲ್ಲಿ ಶಿವನೂ ಸೇರಿದ್ದಾನೆ. ಬ್ರಹ್ಮ ಮತ್ತು ಶಿವನಿಗೆ ಅವ ತಾರವಿಲ್ಲ. ಇದರಲ್ಲಿ ಬ್ರಹ್ಮನಿಗೆ ಪೂಜೆಯೂ ಅಪರೂಪ. ವಿಷ್ಣುವು ಹತ್ತು ಅವತಾರಗಳನ್ನೆತ್ತಿ ದುಷ್ಟರನ್ನು ಶಿಕ್ಷಿಸಿ, ಸಂಹರಿಸಿ ಸೃಷ್ಟಿಯ ವಿನಾಶವನ್ನು ತಪ್ಪಿಸಿದ ನೆಂದು ಪುರಾಣಗಳಲ್ಲಿದೆ. ಇದು ಮನುಕುಲದ ಕಥೆ.

ವೇದ ಪುರಾಣಗಳ ದೇವತೆ :

ಕ್ಷೀರಸಾಗರವನ್ನು ಕಡೆದಾಗ ಲಕ್ಷ್ಮಿಯು ಹುಟ್ಟಿ ಬಂದಳು. ಅವಳ ಮನಮೋಹಕ ರೂಪಿಗೆ ಅಲ್ಲಿದ್ದವ ರೆಲ್ಲರೂ ಮೋಹಿತರಾದರು. ಲಕ್ಷ್ಮಿಯು ತನ್ನ ಪತಿಯನ್ನು ಆಯ್ಕೆ ಮಾಡಿಕೊಂಡ ರೀತಿಯನ್ನು ಭಾಗವತದಲ್ಲಿ ಬಹಳ ಸ್ವಾರಸ್ಯಕರವಾಗಿ ನಿರೂಪಿಸಿದೆ. ಕೈಯಲ್ಲಿ ಹೂ ಮಾಲೆಯನ್ನು ಹಿಡಿದ ಲಕ್ಷ್ಮಿ ಅಲ್ಲಿ ನೆರೆದವರೆಲ್ಲರನ್ನು ವೀಕ್ಷಿಸಿದಳು. ಭೂತಗಣಗಳಿಂದ ಸೇವಿತನಾದ ಶಿವನು ಅದ್ಭುತ ಶಕ್ತಿಸಂಪನ್ನ, ದೂರ್ವಾಸರು ಮಹಾ ಕೋಪಿಷ್ಠರು. ದೇವತೆಗಳ ಗುರು ಬೃಹಸ್ಪತಿ, ರಾಕ್ಷಸರ ಗುರು ಶುಕ್ರಾಚಾರ್ಯರು ಸ್ವಾರ್ಥಿಗಳು. ಬ್ರಹ್ಮನು ತಾನು ಸೃಷ್ಟಿಸಿದ ಮಗಳ ಸಮಾನಳಾದ ಸರಸ್ವತಿಯನ್ನೇ ಮದುವೆಯಾದ. ಇಂದ್ರಾದಿಗಳು ಪರಾವಲಂಬಿಗಳು. ಯಮನಿಗೆ ದಯೆಯಿಲ್ಲ. ಋಷಿಗಳು ಇಂದ್ರಿಯ ಸುಖದಿಂದ ಪೂರ್ಣವಾಗಿ ಮುಕ್ತರಲ್ಲ. ಕೆಲವರು ಕುರೂಪಿಗಳು. ಸರ್ವಾಂಗ ಸುಂದರನಾದ ಮಂಗಳ ಕರನಾದ ವಿಷ್ಣುವಿಗೇ ಹೂಮಾಲೆ ಹಾಕಿದಳು.

ವೇದಗಳಲ್ಲಿ ಲಕ್ಷ್ಮಿಗೆ ವಿವಿಧ ನಾಮಗಳಿವೆ. ಋಗ್ವೇದದಲ್ಲಿ ಇವಳು ಹಾಲನ್ನು ನೀಡುವ ದೇವಿ. ಉಷೆಯೂ ಹೌದು. ಇವಳನ್ನು ಚಂದ್ರ, ಶುಭ, ಆರ್ದ್ರಾ, ಒಡತಿ ಎಂದು ಕರೆದಿದೆ. ಅಥರ್ವಣ ವೇದದಲ್ಲಿ ಇವಳಿಗೆ ಭದ್ರ, ಪುಣ್ಯ, ಶಿವಾ ಎಂಬ ಹೆಸರಿದೆ. ಪದ್ಮ ಪುರಾಣದಂತೆ ವಿಷ್ಣುವಿನ ಎಂಟು ಗುಣಗಳಾದ ಶ್ರೀ, ಭೂ, ಸರಸ್ವತಿ, ಪ್ರೀತಿ, ಕೀರ್ತಿ, ಶಾಂತಿ, ಪುಷ್ಟಿ, ತುಷ್ಟಿಗಳು ಲಕ್ಷ್ಮಿಯಲ್ಲಿ ಏಕೀಭವಿಸಿವೆ. ಇವಳಿಗೆ ಚಂಡಿ, ಚಾಮುಂಡಿ ಎಂಬ ರೂಪಗಳಿವೆ.

ವಿಷ್ಣುವಿನೊಂದಿಗೆ ಲಕ್ಷ್ಮಿಯೂ ಅವತರಿಸಿದ್ದಾಳೆ. ನರಸಿಂಹಾವತಾರದಲ್ಲಿ ಇವಳು ವಿಷ್ಣುವಿನ ಕೋಪವನ್ನು ಶಮನ ಮಾಡಿದಳು. ರಾಮಾವತಾರದಲ್ಲಿ ಸೀತೆಯಾಗಿ ರಾವಣ ಕುಂಭಕರ್ಣರನ್ನು ಶಾಪದಿಂದ ವಿಮುಕ್ತಿಗೊಳಿಸಿ ದಳು. ಕೃಷ್ಣಾವತಾರದಲ್ಲಿ ಶಿಶುಪಾಲ ದಂತವಕ್ತ್ರರ ವಧೆಗೆ ಹಿನ್ನೆಲೆಯಾಗಿದ್ದಳು.

ಮಾತೃ ಸ್ವರೂಪಿಣಿ :

ಸೃಷ್ಟಿಗೆ ಸ್ತ್ರೀ ಪುರುಷರು ಕಾರಣರು. ಅರ್ಚನೆಗೆ, ಧ್ಯಾನಕ್ಕೆ, ಸಾಧನೆಗೆ ಸ್ತ್ರೀ ಪುರುಷರೆಂಬ ಭೇದವಿಲ್ಲ. ಸ್ತ್ರೀಯು ಮಾತೆ, ಪತ್ನಿ ಮತ್ತು ದಾಸಿಯಾಗಿ ವಿವಿಧ ರೂಪಗಳಿಂದ ಪುರುಷನೊಡನೆ ಬೆಳೆಯುತ್ತಲೇ ಮನು ಕುಲವನ್ನು ಉಳಿಸಿಕೊಂಡಿದ್ದಾಳೆ. ಸ್ತ್ರೀಯನ್ನು ಮಾತೃ ಸ್ವರೂಪದಿಂದ ಪೂಜಿಸಲಾಗುತ್ತಿದೆ. ಲಕ್ಷ್ಮಿ ಸರಸ್ವತಿ ಮತ್ತು ಪಾರ್ವತಿಯರು ಮಹಾಮಾತೆಯರು. ಶಕ್ತಿ ಸ್ವರೂಪದಿಂದ ಇವರು ಬೇರೆ ಬೇರೆಯಾಗಿ ಕಂಡರೂ ಇವರಲ್ಲಿ ಪರಿಭೇದವಿಲ್ಲ. ಲಕ್ಷ್ಮಿಯು ಸಿರಿ ಸಂಪತ್ತಿನ ದೇವತೆಯಾದರೆ ಶಾರದೆಯು ವಿದ್ಯಾಧಿದೇವತೆ. ವಿದ್ಯೆಯಿಂದಲೇ ಜ್ಞಾನ ಪ್ರಾಪ್ತಿ. ಈ ಜ್ಞಾನವು ಆಧ್ಯಾತ್ಮಿಕವಾಗಿ ಮೋಕ್ಷ ಸಾಧನೆಯ ಮಾರ್ಗವಾದರೆ, ಪಾರಮಾರ್ಥಿಕವಾಗಿ ಸಂಪತ್ತನ್ನು ಗಳಿಸುವ ಸಾಧನ ವಾಗಿದೆ. ವ್ಯಾವಹಾರಿಕವಾಗಿ ಮಾನವನಿಗೆ ಲಕ್ಷ್ಮಿಯ ಕಡೆಗೆ ಒಲವು ಹೆಚ್ಚು. ಸಿರಿವಂತರಿಗೆ ಸಮಾಜದಲ್ಲಿರು ವಷ್ಟು ಗೌರವ ಸಾಮಾನ್ಯರಿಗಿಲ್ಲ.

ಭಾರತದಲ್ಲಿ ಮಾತೃಪೂಜೆ ಆರ್ಯ ದ್ರಾವಿಡರ ಕಾಲದಷ್ಟೇ ಪ್ರಾಚೀನವಾದುದು. ಸಿಂಧೂ ಕಂದರದ ಹರಪ್ಪ ಮಹೆಂಜೊದಾರೊ ಸಂಸ್ಕೃತಿಯಲ್ಲಿ ಮೊಟ್ಟ ಮೊದಲು ಸ್ತ್ರೀದೇವತೆಯನ್ನು ಪೂಜಿಸುತ್ತಿದ್ದರೆಂದು ವಿದ್ವಾಂಸರ ಅಭಿಪ್ರಾಯವಿದೆ. ಹಿಂದೂಧರ್ಮದಲ್ಲಿ ಸ್ತ್ರೀಗೆ ಪ್ರಥಮ ಸ್ಥಾನ ಎಂದು ಉಪನಿಷತ್ತಿನಲ್ಲಿಯೂ ಹೇಳಿದೆ. ಲಕ್ಷ್ಮಿಯ ಮೊದಲ ಹೆಸರಿನಿಂದ ವಿಷ್ಣುವು ಲಕ್ಷ್ಮೀನಾರಾಯಣನಾಗಿದ್ದಾನೆ.

ಶಿಲ್ಪಗಳಲ್ಲಿ ಲಕ್ಷ್ಮಿ :

ಭಾರತೀಯ ಶಿಲ್ಪದಲ್ಲಿ ಲಕ್ಷ್ಮಿಯು ಕಮಲದ ಪೀಠದ ಮೇಲೆ ರಾರಾಜಿಸಿದ್ದಾಳೆ. ಇವಳಿಗೆ ಎರಡು ಕರಗಳು. ಒಂದರಲ್ಲಿ ಶಂಖ ಇನ್ನೊಂದರಲ್ಲಿ ಅಮೃತ ಕುಂಭವಿದೆ. ಗುಪ್ತರ ಕಾಲದಲ್ಲಿ ನಿರ್ಮಾಣವಾದ ಗಜಲಕ್ಷ್ಮಿಯ ಮೂರ್ತಿಗೆ ನಾಲ್ಕು ಕರಗಳಿವೆ. ಉಭಯ ಪಾರ್ಶ್ವಗಳಲ್ಲಿ ಆನೆಗಳ ಸೊಂಡಿಲಿನ ಕುಂಭದ ನೀರಿನಿಂದ ಅಭಿಷೇಕ ಮಾಡುತ್ತಿರುವಂತೆ ಕೆತ್ತಲಾಗಿದೆ. ಇವರ ಕಾಲದ ಅಷ್ಟಲಕ್ಷ್ಮಿಯರ ಶಿಲ್ಪವು ಅಷ್ಟೇ ಮನ ಮೋಹಕವಾಗಿದೆ. ಉತ್ತರ ಭಾರತದ ವೈಷ್ಣವೋ ದೇವಿಯು ಸುಪ್ರಸಿದ್ಧ ದೇವತೆ. ತಿರುವಾಂಕೂರಿನ ಅನಂತಶಯನ ದೇವಾಲಯದ ಶೇಷಶಾಯಿ ನಾರಾಯಣನ ಮೂರ್ತಿಯೊಂದಿಗೆ ಲಕ್ಷ್ಮಿಯನ್ನು ಕೆತ್ತಿದೆ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯಲ್ಲೂ ಇದೇ ತರಹದ ಶಿಲ್ಪವಿದೆ. ಮಹಾರಾಷ್ಟ್ರದ ಕೊಲ್ಲಾಪುರದ ಮಹಾಲಕ್ಷ್ಮಿಯು ಪ್ರಾಚೀನಕಾಲದಿಂದಲೂ ಆರಾಧ್ಯ ದೇವಿಯಾಗಿದ್ದಾಳೆ. ಕರ್ನಾಟಕದ ಹೊಯ್ಸಳ ಶಿಲ್ಪದ ಲಕ್ಷ್ಮಿಯು ಸರ್ವಾಂಗ ಸುರಿದರ. ಲಕ್ಷ್ಮಿಯ ದೇವಾ ಲಯಗಳು ಕಡಿಮೆ ಎನ್ನಬಹುದು. ಆದರೆ ದೇವಾ ಲಯಗಳಲ್ಲಿ ಸಾಮಾನ್ಯವಾಗಿ ಇವಳ ಮೂರ್ತಿಗಳಿವೆ.

ಮಂಗಳ ಸ್ವರೂಪಿಣಿ :

ಹಿಂದೂ ಧರ್ಮದಲ್ಲಿ ಲಕ್ಷ್ಮಿಯು ಮಾಂಗಲ್ಯ ದೇವತೆ. ಸೌಮಾಂಗಲ್ಯವು ಭಾರತೀಯ ಸ್ತ್ರೀಯರ ಅತ್ಯಮೂಲ್ಯ ಸಂಪತ್ತು. ಪಾತಿವ್ರತ್ಯದ ಸಂಕೇತ. ಜೈನ ಬೌದ್ಧ ವೀರಶೈವಾದಿ ಧರ್ಮಗಳಲ್ಲಿಯೂ ಸುಮಂಗಲೆಯರಿಗೆ ಶ್ರೇಷ್ಠತೆಯಿದೆ. ಲಕ್ಷ್ಮಿಯು ಸಂತಾನಕ್ಕೂ ಅಧಿದೇವತೆ. ಸ್ತ್ರೀಯರ ಸಕಲ ಇಷ್ಟಾರ್ಥ ಸಿದ್ಧಿಗಾಗಿ ಅಷ್ಟಲಕ್ಷ್ಮಿಯರ ಅರ್ಚನೆಯು ಪರಂಪರಾ ಗತವಾಗಿ ನಡೆದುಕೊಂಡು ಬಂದಿದೆ. ಶುಕ್ರವಾರವು ಇವಳ ಅರ್ಚನೆಗೆ ಶ್ರೇಷ್ಠವಾದ ದಿನ. ಸಮೃದ್ಧವಾಗಿ ಬೆಳೆದ ಧಾನ್ಯವನ್ನೂ ಲಕ್ಷ್ಮಿಯ ರೂಪದಲ್ಲಿ ಪೂಜಿ ಸುವುದು ರೂಢಿಯಲ್ಲಿದೆ. ಸೌಭಾಗ್ಯದಾಯಿನಿಯಾದ ಲಕ್ಷ್ಮಿಯನ್ನು ಸ್ತ್ರೀಯರು ಸುವರ್ಣರೂಪದ ಮಾಂಗಲ್ಯ ದಲ್ಲಿ ಧರಿಸಿಕೊಂಡಿದ್ದಾರೆ. ಇವಳು ಹರಿದ್ರಾ, ಕುಂಕುಮ ಶೋಭಿತ. ಸರ್ವಾಭರಣ ಸಂಪನ್ನೆ.

ರಾಷ್ಟ್ರ ನಿರ್ಮಾಣಕ್ಕಾಗಿ ಲಕ್ಷ್ಮಿಯನ್ನು ಒಲಿಸಿ ಕೊಂಡವರುಂಟು, ಸಂಪತ್ತನ್ನು ಪಡೆದವರಿದ್ದಾರೆ. ವಿಜಯನಗರ ಸ್ಥಾಪನೆಗೆ ಕಾರಣಕರ್ತರಾದ ವಿದ್ಯಾರಣ್ಯರು ಲಕ್ಷ್ಮಿಯನ್ನು ಧ್ಯಾನಿಸಿ ಹೊನ್ನಿನ ಮಳೆ ಕರೆದರಂತೆ. ಶಂಕರಾಚಾರ್ಯರು "ಕನಕಧಾರಾ" ಸ್ತೋತ್ರದಿಂದ ಒಬ್ಬ ಬಡಹೆಂಗಸಿಗೆ ನಾಣ್ಯಗಳ ನಿಧಿಯನ್ನು ಅರ್ಪಿಸಿ ದರಂತೆ.

ಲಕ್ಷ್ಮಿಯು ಚಂಚಲೆ ಎಂಬ ಅಪವಾದವಿದೆ. ಅವಳು ಒಂದೇ ಕಡೆ ನೆಲೆಸುವುದಿಲ್ಲ. ಸಂಪತ್ತು ಒಂದೆಡೆಯಲ್ಲಿ ಕೇಂದ್ರೀಕೃತವಾದರೆ ರಾಷ್ಟ್ರಕ್ಕೂ ಮತ್ತು ಸಮಾಜಕ್ಕೂ ಹಂಚಿಕೆಯಾಗದೆ ಬಹು ದೊಡ್ಡ ನಷ್ಟವಾಗಬಹುದು.

ಇದೇ ಅರ್ಥದಿಂದ ಲಕ್ಷ್ಮಿಯನ್ನು ಹೀಗೆ ಕರೆ ದಿರಬಹುದು. ಹೊನ್ನಿನ ಆಸೆ ಯಾರಿಗೂ ತಪ್ಪಿಲ್ಲ. ಇದನ್ನು ತಿಳಿದವರು ತಮ್ಮ ಸಂಪತ್ತನ್ನು ಸಮಾಜಕ್ಕೆ ಹಂಚಿ ವೈರಾಗ್ಯ ಹೊಂದಿದರು. ಆದರೆ ಮೈದಾಸನಂಥ ವರು ದುರಾಸೆಯಿಂದ ತಮ್ಮ ಜೀವಕ್ಕೆ ಅಪಾಯವನ್ನು ತಂದುಕೊಂಡರು.

ಕವಿಗಳ ಕಾವ್ಯದಲ್ಲಿಯೂ ಲಕ್ಷ್ಮಿಯು ರಾರಾಜಿ ಸಿದ್ದಾಳೆ. ಕುಮಾರ ವ್ಯಾಸನ ಒಂದು ಪದ್ಯದಲ್ಲಿ—

"ಶರಧಿಸುತೆ ಸನಕಾದಿ ವಂದಿತೆ<br>
ಸುರನರೋರುಗ ಮಾತೆ ಸುಜನರ<br>
ಪೊರೆವದಾತೆ ಸುರಾಗ್ರಗಣ್ಯ ಸುಮೌನಿ<br>
ವರಸ್ತುತ್ಯ<br>
ಪರಮ ಕರುಣಾಸಿಂಧು ಪಾವನ<br>
ಚರಿತೆ ಪದ್ಮಜ ಮುಖ್ಯ ಸಕಲಾ<br>
ಮರಸುಪೂಜಿತೆ ಲಕ್ಷ್ಮಿ ಕೊಡುಗೆಮಗಧಿಕ<br>
ಸಂಪದವ"

ಎಂದು ಬೇಡಿಕೊಂಡಿದ್ದಾನೆ. ಸ್ತೋತ್ರ, ಅಷ್ಟೋತ್ತರ, ಸಹಸ್ರನಾಮಾದಿಗಳಲ್ಲಿ ಇವಳು ದಾರಿದ್ರ್ಯ ಧ್ವಂಸಿ, ಸರ್ವೋಪದ್ರವ ನಿವಾರಣಿ, ನವದುರ್ಗೆ, ಮಹಾಕಾಳಿ, ಬ್ರಹ್ಮ ವಿಷ್ಣು ಶಿವಾತ್ಮಿಕೆ ರೂಪಿನಲ್ಲಿ ಮನಮೋಹಿನಿ.

ವರ್ಷ ಋತುವಿನ ಮಳೆಯ ಅಬ್ಬರವು ಕಳೆದು ಶರದೃತುವು ಆಗಮಿಸಿದೆ. ಸ್ವಚ್ಛವಾದ ನೀಲಿ ಆಗಸ. ಪಚ್ಚೆಯಂತೆ ನಳನಳಿಸುವ ಪೈರು. ಲಕ್ಷ್ಮಿಯು ಸಂತಸ ವನ್ನೂ ಹೊತ್ತು ಮನೆ ಮನೆಗೆ ಕಾಲಿಟ್ಟಿದ್ದಾಳೆ. ಮೂರು ದಿನಗಳ ಈ ಮಹಾ ಸಂಭ್ರಮದಲ್ಲಿ ಲಕ್ಷ್ಮಿಯ ಅರ್ಚನೆಯೂ ನಡೆಯುತ್ತದೆ. ಅಂದು ಮನೆಯಲ್ಲಿರುವ ನಾಣ್ಯ ಮತ್ತು ಆಭರಣಗಳನ್ನಿಟ್ಟು ಪೂಜಿಸುತ್ತಾರೆ. ಧರ್ಮಭೇದವಿಲ್ಲದೆ ನಲಿದಾಡುತ್ತಾರೆ.

# "ತಾಯೆ ಬಾರ ಮೊಗವ ತೋರ"

- ಭಾರ್ಗವಿಶ್ರೀ

ಇಂದು ಕನ್ನಡನಾಡು ಸ್ವತಂತ್ರಭಾರತದ ಒಂದು ಸ್ವರಾಜ್ಯವೆನಿಸಿರುವುದು ಸರ್ವವಿಧಿತ. ಆದರೂ ನಮ್ಮ ನಾಡು ಎಷ್ಟರಮಟ್ಟಿಗೆ ಸ್ವಪರಿಪೂರ್ಣವಾಗಿದೆ ಎಂಬುದರ ಕಡೆಗೆ ಕಣ್ಣು ಹಾಯಿಸಿದರೆ ಅಂಥ ಸಮಾಧಾನವೇನೂ ದೊರಕಲಾರದು. ಏಕೆಂದರೆ ಭಾಷಾವಾರು ರಾಜ್ಯ ವಿಂಗಡನೆಯಾಗಿ ಎಷ್ಟೋ ವರ್ಷಗಳು ಕಳೆದು ಹೋದರೂ ಕನ್ನಡಿಗರಲ್ಲಿ ತಮ್ಮ ನಾಡು ನುಡಿಯ ಬಗ್ಗೆ ತನ್ನತನವೆಂಬುದು ಇನ್ನೂ ಪೂರ್ಣ ಪ್ರಮಾಣದಲ್ಲಿ ಅರಳಿಯೇ ಇಲ್ಲ. ವಿಪರ್ಯಾಸದ ಸಂಗತಿ ಎಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡಿಗರು ಪರಭಾಷೆ, ಪರಕೀಯತೆಯ ಪ್ರಭಾವಕ್ಕೆ ಒಳಗಾಗಿ ಹೇಗೆ ಹಾಳಾಗಿದ್ದರೋ ಇಂದೂ ಕೂಡ ಒಂದಲ್ಲ ಒಂದು ರೀತಿಯ ಪ್ರಭಾವಕ್ಕೆ ಒಳಗಾಗಿ ತಮ್ಮ ನಡೆ–ನುಡಿಗಳೆಲ್ಲವನ್ನೂ ಕಳೆದುಕೊಳ್ಳುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ನಾಡನ್ನು ಒಂದಾಗಿ ಕಟ್ಟಲು ಅಂದಿನ (ಎಂದೆಂದಿನ) ನಾಡ ಪ್ರೇಮಿಗಳು ಎಂಥ ಅವಿರತ ಸೇವೆ ಸಲ್ಲಿಸಿದರೋ ಅಂಥದೇ ಸೇವೆ ಇಂದಿಗೂ ಅಗತ್ಯವಿದೆಯೆಂದರೆ ತಪ್ಪಾಗಲಾರದು. ಇಂಥ ಕಾರ್ಯ ಮಾಡಿದವರಲ್ಲಿ ಕವಿಗಳ ಪಾತ್ರ ಬಹಳ ವಿಶಿಷ್ಟವಾದದ್ದು, ಪ್ರಭಾವಶಾಲಿಯಾದದ್ದು.

ಆ ಕವಿಗಳ ಅಮೂಲ್ಯ ನುಡಿಗಳನ್ನೇ ಪುನಃ ಮೆಲುಕು ಹಾಕುತ್ತಾ ನಮ್ಮ ನಾಡು–ನುಡಿಯ ಶಾಶ್ವತ ಉಳಿವು–ಬೆಳವಿಗಾಗಿ ಪ್ರಯತ್ನಿಸಬೇಕಾದ್ದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಒಬ್ಬ ಕವಿ ಹೇಳುತ್ತಾರೆ–

"ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು
ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು" ಎಂದು. ಈ ಮಾತಿನಲ್ಲಿ ಕವಿಯು ತನ್ನ ಮನೋಭಿಲಾಷೆಯ ಜೊತೆಗೆ, ನಮ್ಮ ಪೂರ್ವದ ವೈಭವ–ವೈಶಿಷ್ಟ್ಯತೆಯನ್ನೂ ಎತ್ತಿ ಹಿಡಿದಿದ್ದಾನೆ. ನಾವು ಯಾವತ್ತೂ ಸ್ವಾಭಿಮಾನದಿಂದ ಮೆರೆದಾಡಿದವರು. ಇಂದೇಕೆ ಅನ್ಯ ಪ್ರಭಾವಕ್ಕೆ ಒಳಗಾಗಿದ್ದೇವೆ. ನಮ್ಮಲ್ಲಿ ಅಪಾರವಾದ ಶಕ್ತಿ–ಸಾಮರ್ಥ್ಯಗಳಿವೆ. ಏಕೆಂದರೆ ನಮ್ಮ ನಾಡಿನ ನೆಲದ ಗುಣವೇ ಹಾಗಿದೆ–

'ರಾಜನ್ಯರಿಪು ಪರಶುರಾಮನಮ್ಮನ ನಾಡು"
ಆ ಜಲಧಿಯನೆ ಜಿಗಿದ ಹನುಮನುದಿಸಿದ ನಾಡು
ಓಜೆಯಿಂ ಮೆರೆದರಸುಗಳ ಸಾಹಸದ ಸೂಡು
ತೇಜವನು ನಮಗೀವ ವೀರ ವೃಂದದ ಬೀಡು"–

ಹೀಗಿರುವಾಗ ನಾವು ಮನಸ್ಸು ಮಾಡಿದರೆ ಏನನ್ನು ಬೇಕಾದರೂ ಮಾಡಬಹುದು.

ಆದರೆ ಜನಗಳು ಅಷ್ಟು ಸುಲಭವಾಗಿ ಎಚ್ಚರಗೊಳ್ಳುವುದಿಲ್ಲ. ಅವರು ಪರಭಾಷೆ, ಸಾಹಿತ್ಯ, ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಮೈಮರೆತಂತೆ ನಡೆಯುವುದನ್ನು ಕಂಡು ಅವರನ್ನು ಎಚ್ಚರಿಸಲು ಮತ್ತೊಬ್ಬ ಕವಿಯು ಒಂದು ವಿಶಿಷ್ಟವಾದ ಹಾದಿಯನ್ನೇ ಹಿಡಿದಿದ್ದಾರೆ. ಅವರು ಆಡಿರುವ ಮಾತುಗಳು ಎಂಥವರ ಹೃದಯವನ್ನಾದರೂ ಕಲಕಬಲ್ಲುದು. ಪರಿಣಾಮಕಾರಿಯಾದ ಆ ಮಾತು ಹೇಗಿರಬಹುದೆಂದು ನೋಡಿದ್ದೇ ಆದರೆ ನಮ್ಮ ಅಜ್ಞಾನಕ್ಕೆ ನಾವೇ ಬೆಚ್ಚಿ ಬೀಳಬೇಕಾಗುತ್ತದೆ. ಕವಿ ಹೇಳುತ್ತಾರೆ–

"ಬಾರಿಸು ಕನ್ನಡ ಡಿಂಡಿಮವ
ಓ ಕರ್ನಾಟಕ ಹೃದಯಶಿವ"– ಎಂದೇ ಪ್ರಾರಂಭಗೊಳ್ಳುವ ಈ ನುಡಿಗಳು ಎಷ್ಟು ಅರ್ಥಪೂರ್ಣ.

'ಡಿಂಡಿಮ'(ಡಮರುಗ)ವು ನಿರಂತರ ಕಾರ್ಯ ಚಟುವಟಿಕೆಯ ಹಾಗೂ ಕ್ರಿಯಾಶೀಲತೆಯ ಸಂಕೇತವಾಗಿದೆ. ಪ್ರತಿಯೊಬ್ಬರಲ್ಲೂ ಈ ಕ್ರಿಯಾಶೀಲತೆಯನ್ನು ಮೂಡಿಸಲು ಡಮರುಗದ ಮೃದು ಮಧುರ ನಿನಾದ ಎಷ್ಟೊಂದು ಆಪ್ಯಾಯಮಾನವಲ್ಲವೇ? ಈ ಆಪ್ಯಾಯತೆಯ ಜೊತೆಗೆ ಆ ಡಿಂಡಿಮವು ಮತ್ತೂ ಪ್ರಮುಖವಾದ ಕಾರ್ಯ ಮಾಡಬೇಕಾಗಿದೆ. ಏಕೆಂದರೆ ಕನ್ನಡಿಗರು ಅಂತಹ ಅಮಾಯಕ ಸ್ಥಿತಿಗೆ ಒಳಗಾಗಿದ್ದಾರೆ. ಆದ್ದರಿಂದ ಕವಿ ಹೇಳುತ್ತಾರೆ–

"ಸತ್ತಂತಿಹರನು ಬಡಿದೆಚ್ಚರಿಸು
ಕಚ್ಚಾಡುವರನು ಕೂಡಿಸು, ಒಲಿಸು–
ಹೊಟ್ಟೆಯ ಕಿಚ್ಚಿಗೆ ಕಣ್ಣೀರ್ ಸುರಿಸು
ಒಟ್ಟಿಗೆ ಬಾಳುವ ತೆರದಲಿ ಹರಸು"–ಎಂದು.

ಆಗ ಮಾತ್ರವೇ ಕನ್ನಡಿಗರು ಉದ್ಧಾರವಾಗಲು ಸಾಧ್ಯ. ಅದಕ್ಕಾಗಿಯೇ ಮತ್ತೋರ್ವ ಕವಿಯು ಕನ್ನಡಿಗರನ್ನು ಆತ್ಮೀಯತೆಯಿಂದ ಮನವೊಲಿಸಲು ಹೊರಟಿರುವ ರೀತಿಯು ಬಹಳ ಮೆಚ್ಚುವಂಥಾದ್ದಾಗಿದೆ.

"ಚೆಲುವೆಯರಾ, ಚೆನ್ನಿಗರಾ ಹಿರಿಯ ತಾಯ್ ಮಕ್ಕಳಿರಾ, ಒಡ ಹುಟ್ಟಿದವರಾ
ಒಸಗೆ ನುಡಿ ಕೇಳಿದಿರಾ ಕೇಳಿ ತಾಳದಿರಿ ಎದೆಯಲ್ಲಿ ತಾಳಿ ಬಾಳುವಿರಾ
ನಾಡು ನುಡಿ ನಡೆಗಳನು ಮುನ್ನಡೆಗೆ ನಡೆಸುತ್ತ, ಮುಂದೆ ಸಾಗುವಿರಾ
ಭಾರತದ ಲೋಕದಾ ಮಕ್ಕಳಲಿ ಹಿರಿದಾಗಿ ತೂಕ ತೂಗುವಿರಾ
ಬನ್ನಿ ಓ ಮಕ್ಕಳಿರಾ"– ಎಂಬ ಕವಿಯ ಈ ಮಾತುಗಳು ಯಾರಲ್ಲಿ ತಾನೇ ಕರ್ತವ್ಯ ಪ್ರಜ್ಞೆಯನ್ನೂ, ಸ್ವಾಭಿಮಾನವನ್ನೂ ಮೂಡಿಸುವುದಿಲ್ಲ?

ಇದರ ಹಾಗೆಯೇ ಮಗದೊಬ್ಬ ಕವಿಯು ಕೇಳುತ್ತಾರೆ–

"ಇಂದು ಕೂಡ ಆಗದೆ
ಕನ್ನಡವೊಂದಾಗದೆ?
ಭೇದದ ಉಳಿನೀಗದೆ
ಕಾಯಿಮನ ಮಾಗದೆ?
ಒಮ್ಮತದೊಗ್ಗಟ್ಟಿನ ಫಲ
ನಮ್ಮ ಬಾಳ್ಗೆ ಬಾರದೆ
ಆಗದೇ ಹೋಗದೇ
ಕನ್ನಡವೊಂದಾಗದೇ"– ಎಂಬ ಈ ಮಾತಿನಲ್ಲಿ ಎಂತಹ ಆಕಾಂಕ್ಷೆ ಅಡಕವಾಗಿದೆ. ಆದರೇನು ಕನ್ನಡಿಗನ ಮೇಲೆ ಪರಭಾಷೆಯ ಒತ್ತಡವೇ ಹೆಚ್ಚಾಗುತ್ತಿರುವುದರಿಂದ ಕನ್ನಡ ನಾಡಿನಲ್ಲಿಯೇ ಕನ್ನಡದ ಉಳಿವು ಅಸಾಧ್ಯವಾಗಿದೆ. ಇದರಿಂದ ನೊಂದು ಬೆಂದ ಒಬ್ಬ ಕವಿಯು ಹೇಳಿರುವ ಮಾತು ಎಂಥವರ ಮನವನ್ನೂ ಕಲಕಬಲ್ಲುದು.

## ವನಿತಾ
### ವಿಶೇಷ ಸೂಚನೆ

ಈ ಬಾರಿಯ ಸಂಚಿಕೆ ವಿಶೇಷಾಂಕವಾಗಿರುವುದರಿಂದ 'ಕಥೆಗೊಂದು ಚಿತ್ರ' ಶೀರ್ಷಿಕೆ ಪ್ರಕಟವಾಗುತ್ತಿಲ್ಲ. ಮುಂದಿನ ತಿಂಗಳಿನಿಂದ (ಡಿಸೆಂಬರ್) ಎಂದಿನಂತೆ ಅದು ಪ್ರಕಟವಾಗುತ್ತದೆಂದು ತಿಳಿಸಲಪೇಕ್ಷಿಸುತ್ತೇವೆ.

–ಸಂ

"ಏನು ಕೂಗಿದು ಯಾವನ ಹುಯಿಲು
ಯಾವನ ಗದ್ದೆ ಯಾವನ ಕುಯಿಲು''– ಕನ್ನಡ ನಾಡಿನಲ್ಲಿ ಕನ್ನಡಿಗರ ಮೇಲೆಯೇ ನಡೆಯುತ್ತಿರುವ ದಬ್ಬಾಳಿಕೆಗೆ ಕಂಗೆಟ್ಟು ಕೋಪಗೊಂಡ ಕವಿಯು ಹೇಳಿರುವ ಈ ಮಾತುಗಳು ಅನ್ಯರ ಅತಿಕ್ರಮಣವನ್ನು ಸ್ಪಷ್ಟವಾಗಿ ಚಿತ್ರಿಸುತ್ತವೆ. ನಾವು ಮುಖ್ಯವಾಗಿ ಅರಿಯಬೇಕಾದದ್ದು ಇಷ್ಟು–

"ನಾಡೇ ನುಡಿಯು, ನುಡಿಯೇ ನಾಡು
ಸ್ವತಂತ್ರ ದೇಶಕೆ ಬೇರಾವುದು ಹಾಡು
ಕನ್ನಡಕೇತರೆ ಹೆರನುಡಿಯೊಜ್ಜೆ
ಹೇಸುವುದೇ ನುಡಿಗಿಳಿಯಲು ಬಿಜ್ಜೆ
ಒತ್ತೆಯಿಟ್ಟು, ಪರಭಾಷೆಗೆ ಮನವ
ಪಡೆದಿಹೆವೇ ಸೊಗ ಬಾಳ್ವೆಯ ಋಣವ
ಕನ್ನಡದೀ ಜನಕಿಲ್ಲವೇ ಕಲಿತನ
ಆಳಾದಮರುಸಾಗುವ ಜತನ''– ಈ ಮಾತುಗಳು ನಮಗೆ ಬಹಳ ಅನಿವಾರ್ಯವಾದವುಗಳು. ಏಕೆಂದು ಕೇಳುವುದಾದರೆ ಅದಕ್ಕೆ ಕವಿಯೇ ನೀಡುವ ಸಮರ್ಥನೆಯು ಅತ್ಯಂತ ಅರ್ಥಪೂರ್ಣವಾಗಿದೆ.

"ಕನ್ನಡ ಜನವಲ್ಲದೆ ಕನ್ನಡವನು
ಉಳಿಸುವರಾರ್ಕೆ ಬೆಳಸುವರಾರ್ಕೆ
ಬಳಸುವವರೂ ತಾವಾರಿಹರ್ಕೆ
ಆದೊಡೆ–
ತೊಲಗದೆ ನಮ್ಮ ವಿಲಾಯಿತಿಕೆ
ಕನ್ನಡಕೆಂತ್ಕೆ ಪನ್ನತಿಕೆ''– ಇಲ್ಲಿಯ ಕೊನೆಯ ಎರಡು ಸಾಲುಗಳ ಬಗ್ಗೆ ನಾವು ತೀವ್ರವಾಗಿ ಗಮನ ಹರಿಸಬೇಕಾಗಿದೆ. ಪ್ರಥಮವಾಗಿ ನಮ್ಮ ವಿದೇಶೀ ವ್ಯಾಮೋಹ, ಪರಕೀಯ ಪ್ರಭಾವಕ್ಕೆ ಒಳಗಾಗುವಿಕೆ ನಿಲ್ಲಬೇಕು. ಆಗ ಮಾತ್ರ ಕನ್ನಡದ ಏಳಿಗೆಯನ್ನು ಕಾಣಲು ಸಾಧ್ಯ. ಇಷ್ಟು ಹೇಳಿದಷ್ಟಕ್ಕೇ ನಾಡಿನ ದುಃಸ್ಥಿತಿಯ ಬಗ್ಗೆ ಕನ್ನಡಿಗರಲ್ಲಿ ಎಚ್ಚರ ಮೂಡಲಾರದೆನಿಸಿಯೋ ಏನೋ ಮಗದೊಬ್ಬ ಕವಿ ಮತ್ತೊಂದು ಹಾದಿಯನ್ನೇ ಹಿಡಿದಿದ್ದಾರೆ.

"ಬೆಂಕಿ ಬಿದ್ದಿದೆ ಮನೆಗೆ ಓ ಬೇಗ ಬನ್ನಿ!
ಎಲ್ಲರೂ ಎದ್ದೆದ್ದು ಓಡಿ ಬನ್ನಿ!
ಕನ್ನಡದ ಗಡಿಕಾಯೆ, ಗುಡಿಕಾಯೆ ನುಡಿಕಾಯೆ
ಕಾಯಲಾರ ಎನೆ ಸಾಯೆ ಓ ಬನ್ನಿ ಬನ್ನಿ''– ಎಂಬ ಮಾತು ಎಷ್ಟು ಸಮಯೋಚಿತವಾಗಿದೆ.

'ಬೆಂಕಿ ಬಿದ್ದಿದೆ ಮನೆಗೆ' – ಎಂಬ ಮಾತು ಕನ್ನಡ ನಾಡು–ನುಡಿಗೆ ಒದಗಿರುವ ಅಪಾಯಕರ ಸ್ಥಿತಿಯನ್ನು ಬಹಳ ಪರಿಣಾಮಕಾರಿಯಾಗಿ ಚಿತ್ರಿಸಿದೆ. ಬೆಂಕಿ ಕಿರು ಪ್ರಮಾಣದಲ್ಲಿರುವಾಗಲೇ ಅದನ್ನು ನಂದಿಸುವುದು ಒಳಿತು. ಇಲ್ಲದಿದ್ದರೆ ಅದು ಬೃಹತ್ ಪ್ರಮಾಣದಲ್ಲಿ ಬೆಳೆದು ನಿಂತರೆ ಅದು ಎಲ್ಲರನ್ನೂ ಆಪೋಶನ ತೆಗೆದುಕೊಂಡು ಬಿಡುತ್ತದೆ. ಆದ್ದರಿಂದ ಬೆಂಕಿ ಬೀಳದಂತೆ ನೋಡಿಕೊಳ್ಳುವುದೇ ಹೆಚ್ಚು ಔಚಿತ್ಯಪೂರ್ಣವಾದದ್ದು. ಈ ಕಾರ್ಯ ಹೇಗೆ ಮಾಡಬೇಕೆಂದು ಕವಿವಾಣಿಯೇ ನಮಗೆ ಮಾರ್ಗದರ್ಶನ ನೀಡಬಲ್ಲುದು. –

"ಕನ್ನಡದ ಕುಲಕೋಟಿಯೆಚ್ಚರೆಚ್ಚರವಿರಲಿ
ಸಿಂಹ, ಸ್ವಪ್ನವ ಬಿಟ್ಟು ಕೆರಳಿನಿಲಲಿ
ಅನ್ನೆಯಕ್ಕೆಡೆಗೊಡದೆ
ಅಂಗುಲಂ ನೆಲಂ ಬಿಡದೆ
ಅನ್ಯರಂ ತಡೆಹಿಡಿದೆ ನಾಡುಳಿಸಲಿ'' –

"ಅನ್ನೆಯಕ್ಕೆಡೆಗೊಡದೆ'' – ಎಂಬ ಈ ಮಾತು ಕನ್ನಡಿಗರ ಸಂಸ್ಕೃತಿ, ಸನ್ನಡತೆಗಳ ಮಹತ್ವವನ್ನು ಪರಿಚಯಿಸುತ್ತದೆ. ಅಂದಾಕ್ಷಣಕ್ಕೆ ನಾವು ಬಗ್ಗಿ ಬಂಟರಾಗಬೇಕಿಲ್ಲ. "ಅಂಗುಲಂ ನೆಲಬಿಡದ'' ನಮ್ಮ ವಿಶಾಲ ಕರ್ನಾಟಕವನ್ನು ಪುನರುಜ್ಜೀವನಗೊಳಿಸುವುದು ನಮ್ಮ ಮುಂದಿರುವ ಆದ್ಯ ಕರ್ತವ್ಯವಾಗಿದೆ. ಏಕೆಂದರೆ–

"ಕನ್ನಡ ನೆಲದ ಪುಲ್ಲನಗೆ ಪಾವನ ತುಲಸಿ
ಕನ್ನಡದ ನೆಲದ ನೀರ್ವೊನಲೆನಗೆ ದೇವನದಿ
ಕನ್ನಡದ ನೆಲದ ಕಲ್ಲೆನಗೆ ಶಾಲಿಗ್ರಾಮ ಶಿಲೆ
ಕನ್ನಡ ದೈವಮ್ಮೆ
ಕನ್ನಡ ಶಬ್ದಮೆನಗೋಂಕಾರಮೀಯೆನ್ನ
ಕನ್ನಡದ ನುಡಿಯೆ ಗಾಯತ್ರಿಯದ್ಭುತಮಂತ್ರ
ಮಿನ್ನಾವುದೈ ಪೆರತು ಕನ್ನಡದ ಸೇವೆಯಿಂದ
ಧಿಕಮೀಜಗದೊಳಗೆ''–

ಎಂಬ ಪವಿತ್ರವಾದ ಭಾವನೆ ನಮ್ಮಲ್ಲಿ ತುಂಬಿ ಹರಿಯಬೇಕಾಗಿದೆ, ಮೆರೆಯಬೇಕಾಗಿದೆ. ಇದಕ್ಕೂ ಮೀರಿ ಹೇಳುವುದಾದರೆ –

ಕನ್ನಡವನುಳಿದೆನಗೆ, ಅನ್ಯ ಜೀವನವಿಲ್ಲ
ಕನ್ನಡವೆ ಎನ್ನುಸಿರು ಪೆತ್ತನ್ನ ತಾಯಿ
ಕನ್ನಡಿಗರತಿಶಯವು ಭುವನೇಶ್ವರಿಯ ದಯವು
ಕನ್ನಡಿಗರಿಗೆ ಜಯವು ಕೃಷ್ಣನಾಶ್ರಯವು
ಕನ್ನಡದ ಜನಕುಲವು, ಎನ್ನ ತೋಳಿಗೆ ಬಲವು
ಕನ್ನಡಾಂಬೆಯ ಮುಕ್ತಿ ರಾಮನುತ ಶಕ್ತಿ'' – ಎಂಬಂಥ ಭಾವನೆ, ತೀರ್ಮಾನ ಕನ್ನಡಿಗರದಾಗಬೇಕು. ಹಾಗೆಯೇ ಕನ್ನಡಾಂಬೆಯ ಬಗೆಗೂ ನಮ್ಮಲ್ಲಿ ಆತ್ಮೀಯತೆ, ವಿನಮ್ರತೆ ಮೂಡಬೇಕು. ಹಾಗಿಲ್ಲದಿದ್ದರೆ ನಾವು ಯಾರ ಪ್ರೀತಿಯ ಆಶ್ರಯ ಪಡೆಯಬೇಕು. ಆದ್ದರಿಂದಲೇ –

"ತಾಯೆ ಬಾರ, ಮೊಗವ ತೋರ ಕನ್ನಡಿಗರ ಮಾತೆಯೆ
ಹರಸು ತಾಯೆ, ಸುತರ ಕಾಯೆ ನಮ್ಮಜನ್ಮದಾತೆಯೆ
ನಮ್ಮತಪ್ಪನೆನಿತೊ ತಾಳ್ವೆ ಅಕ್ಕರೆಯಿಂದೆಮ್ಮನಾಳ್ವೆ
ನೀನೆ ಕಣಾ ನಮ್ಮ ಬಾಳ್ವೆ, ನಿನ್ನ ಮರೆಯಲಮ್ಮೆವು,
ತನು ಕನ್ನಡ, ಮನ ಕನ್ನಡ, ಧನ ಕನ್ನಡವೆಮ್ಮವು'' – ಎಂದು ಆ ತಾಯಿಯ ಮಕ್ಕಳಾದ ನಾವು ಅವಳಲ್ಲಿ ವಿನೀತರಾಗಿ ಪ್ರಾರ್ಥಿಸಿಕೊಳ್ಳಬೇಕು. ಅದರೊಂದಿಗೆ

"ಹಚ್ಚೇವು ಕನ್ನಡದ ದೀಪ
ಕರುನಾಡ ದೀಪ, ಸಿರಿನುಡಿಯ ದೀಪ
ಒಲವೆತ್ತಿ ತೋರುವಾ ದೀಪ
ಬಹುದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು'' – ಎಂಬ ಛಲವನ್ನೂ ಸ್ವಾಭಿಮಾನವನ್ನೂ ತೋರಬೇಕು. ಆಗ ಮಾತ್ರವೇ ಕನ್ನಡಾಂಬೆಯನ್ನು –

"ರಕ್ಷಿಸು ಕರ್ನಾಟಕ ದೇವಿ ಸಂ
ರಕ್ಷಿಸು ಕರ್ನಾಟಕ ದೇವಿ'' – ಎಂದು ಬೇಡುವ ಅರ್ಹತೆ ಪಡೆಯುತ್ತೇವೆ. ಇದೆಲ್ಲದರ ಪ್ರಭಾವದಿಂದ ಭುವನೇಶ್ವರಿಯು –

"ಎಲ್ಲಾದರು ಇರು, ಎಂತಾದರು ಇರು
ಎಂದೆಂದಿಗು ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು
ಕನ್ನಡತನವೊಂದಿದ್ದರೆ ನೀನೆಮಗೆ ಕಲ್ಪತರು'' – ಎಂದು ಹೃದಯ ತುಂಬಿ ಹರಸುತ್ತಾಳೆ. ಆಗ ಮಾತ್ರವೇ ಕನ್ನಡನಾಡು –

"ಬಹುಕಾಲದಿಂದ ಎದೆಯಲ್ಲಿ ಕುದಿದ
ಕನ್ನಡಿಗರಾಸೆ ಫಲಿಸಿ
ಒಂದಾದ ನಾಡು ಅಣಿಯಾದ ಹೆಸರ
ಮಣಿಪದಕವನ್ನು ಧರಿಸಿ'' – ಮೆರೆಯುವುದು ಸಾಧ್ಯ ಅಂತೆಯೇ ಈ ಎಲ್ಲಾ ಕನಸುಗಳು ನನಸಾದಾಗ –

"ಹೊತ್ತಿತೋ ಹೊತ್ತಿತು
ಕನ್ನಡದ ದೀಪ
ಮುಗಿಯಿತೋ ಮುಗಿಯಿತು
ಶತಮಾನಗಳ ಶಾಪ'' – ಎಂದು ನಾವೂ ನಲಿದಾಡುತ್ತಾ

"ನಮ್ಮ ಉಸಿರು, ನಮ್ಮ ಕಸುವು ಕನ್ನಡ
ನಮ್ಮ ಹೆಸರು ನಮ್ಮ ಕಸುಬು ಕನ್ನಡ
ಕನ್ನಡವಿದು ಕನ್ನಡ
ಬನ್ನಿ ನಮ್ಮ ಸಂಗಡ
ಒಂದಾಗುವ ಎಂದೆದ್ದರೆ ತಡೆವ ಬಂಟರೆಲ್ಲಿ
ಕನ್ನಡಜನ, ಕವಿದೆದ್ದರೆ, ನಿಲುವ ಗಂಡರೆಲ್ಲಿ'' – ಎಂಬ ಪೌರುಷವನ್ನೂ ಆತ್ಮವಿಶ್ವಾಸವನ್ನೂ ನಮ್ಮಲ್ಲಿ ತುಂಬಿಕೊಳ್ಳಬೇಕು.

"ಆಗುತಲಿದೆ, ಆಗಿದೆ ಆಗೊ
ಅಗೊ ಕನ್ನಡ ಒಂದು'' – ಎಂಬ ಎಚ್ಚರಿಕೆಯನ್ನು ಕನ್ನಡದ ಹಿತಶತ್ರುಗಳಿಗೆ ನೀಡುತ್ತಾ– ನಮ್ಮ ತಾಯಿ ಭುವನೇಶ್ವರಿಯನ್ನು ಕುರಿತು –

ಹಲವನ್ನದ ಹಿರಿಮೆಯ, ಕುಲವನ್ನದ ಗರಿಮೆಯ
ಸದ್ವಿಕಾಸಶೀಲ ನುಡಿಯ ಲೋಕಾವೃತ ಸೀಮೆಯ
ಈ ವತ್ಸರ ನಿರ್ಮತ್ಸರ ಮನದುದಾರ ಮಹಿಮೆಯ
ನಿತ್ಯೋತ್ಸವ ತಾಯಿ, ನಿತ್ಯೋತ್ಸವ.... ನಿತ್ಯೋತ್ಸವ ನಿನಗೆ ನಿತ್ಯೋತ್ಸವ– ಎಂದು ಹಾಡಿ, ಪಾಡಿ, ನಲಿದಾಡೋಣ ಎಂಬ ನಂಬಿಕೆ, ವಿಶ್ವಾಸ, ನಿರ್ಧಾರ ನಮ್ಮಲ್ಲಿ ಮೂಡಿ ಬರುತ್ತದೆ. ಹೀಗೆ ನಾಡು–ನುಡಿಯನ್ನು ಉಳಿಸಿ, ಬೆಳಸುವ ಪಣವನ್ನು ಎಲ್ಲರೂ ತೊಡಬೇಕಾಗಿದೆ.

ಕನ್ನಡ ರಾಜ್ಯೋತ್ಸವ ಹಾಗೂ ದೀಪಾವಳಿಯ ಈ ಶುಭ ಸಂದರ್ಭವು ಕನ್ನಡಿಗರೆಲ್ಲರಲ್ಲಿಯೂ ಸ್ವಾಭಿಮಾನವನ್ನು ಮೂಡಿಸಿ, ಕನ್ನಡಾಂಬೆಯ ಸೇವೆಗಾಗಿ ತನು–ಮನ–ಧನವನ್ನು ಅರ್ಪಿಸುವಂತಾಗಲೆಂದು ಆಶಿಸಿ, ಹಾರೈಸೋಣ.

"ಸಿರಿಗನ್ನಡಂ ಗೆಲ್ಗೆ''

## ಪ್ರಪ್ರಥಮ ಸ್ವತಂತ್ರ ಮುಸ್ಲಿಂ ರಾಜ್ಯ

*ಕ್ರಿಸ್ತ ಶಕ 712ರಲ್ಲಿ ಮಹಮುದ್ ಬಿನ್ ಕಾಸಿಮ್ ಸಿಂಧ್ ಪ್ರಾಂತ್ಯದ ಮೇಲೆ ಆಕ್ರಮಣ ಮಾಡಿ ರಾಮ್‌ನಲ್ಲಿ ರಾಜಾ ದಾಹಿರ್‌ನನ್ನು ಕೊಂದು ಅಲೋರ್ ರಾಜಧಾನಿಯನ್ನು ವಶಪಡಿಸಿಕೊಂಡನು. ರಾಜನ ವಿಧವಾ ಪತ್ನಿ ಹಾಗೂ ಮತ್ತಿತರ ಪರಿವಾರ "ಜೌಹಾರ್'' (ಆತ್ಮಾಹುತಿ) ಆಚರಿಸಿದರು. 17 ವಯಸ್ಸಿಗೆ ಮೇಲ್ಪಟ್ಟ, ಇಸ್ಲಾಂಗೆ ಮತಾಂತರಗೊಳ್ಳಲು ತಿರಸ್ಕರಿಸಿದ ಎಲ್ಲ ಗಂಡಸರನ್ನೂ ನಿಷ್ಕರುಣೆಯಿಂದ ಕೊಲೆ ಮಾಡಲಾಯಿತು. ಕ್ರಿ.ಶ. 779ರವರೆಗೆ ಅರಬರು ಅಧಿಕಾರದಲ್ಲುಳಿದರು. ನಂತರ ಬೇರೆ ಬೇರೆಯವರು ಆಧಿಪತ್ಯ ನಡೆಸಿದರೂ ಭಾರತದಲ್ಲಿ ಸಿಂಧ್ ಪ್ರಾಂತ ಪ್ರಪ್ರಥಮ ಮುಸ್ಲಿಂ ಪ್ರಾಂತವಾಯಿತು.*

# ನಾದಬಿಂದು

**-ಧೃತಿ**



ಬೆಂಗಳೂರಿನಿಂದ ನವದೆಹಲಿಗೆ ಹೊರಡುವ 'ಕರ್ನಾಟಕ ಎಕ್ಸ್‌ಪ್ರೆಸ್' ಚಲಿಸಲು ಇನ್ನು ಐದೇ ನಿಮಿಷ ಉಳಿದಿತ್ತು. ಆತುರವಾಗಿ ಬಂದು ರೈಲು ಹತ್ತಿ ಕುಳಿತ ವತ್ಸಲ ತನ್ನ ಕೈಗಡಿಯಾರದತ್ತ ನೋಡಿದಳು. ರೈಲು ಹೊರಡಲು ಇನ್ನೂ ನಾಲ್ಕು ನಿಮಿಷಗಳಿವೆ ವೇಗವಾಗಿ ಏರಿಳಿಯುತ್ತಿದ್ದ ಉಸಿರನ್ನು ತಹಬಂದಿಗೆ ತರಲು ಯತ್ನಿಸುತ್ತಾ ಸೂಟ್‌ಕೇಸನ್ನು ತನ್ನ ಸನಿಹಕ್ಕೆ ಎಳೆದುಕೊಂಡಳು. ಕೈಚೀಲವನ್ನು ತನ್ನ ಪಕ್ಕಕ್ಕೆ ಇರಿಸಿಕೊಂಡಳು. ವತ್ಸಲೆಯ ತಮ್ಮ ಮುರಳೀಧರ, ಕಬ್ಬಿಣದ ಸರಪಳಿಯನ್ನು ಖರೀದಿಸಿ ತಂದು ವತ್ಸಲಳ ಕೈಗಿತ್ತು,

"ಇದನ್ನು ಸೂಟ್‌ಕೇಸಿನ ಜೊತೆ ಸೇರಿಸಿ ಬೀಗ ಹಾಕಿಕೋ; ಭದ್ರವಾಗಿದ್ದಷ್ಟು ಕ್ಷೇಮ" ಎಂದ. "ಸದ್ಯ, ಒಳ್ಳೆ ಕೆಲಸ ಮಾಡಿದೆ" ಎನ್ನುತ್ತಾ ವತ್ಸಲ ಅದನ್ನು ಇಸಿದುಕೊಂಡಳು. ಮುರಳಿ ಕೆಳಗಿಳಿಯುತ್ತಿದ್ದಂತೆ ರೈಲು ಚಲಿಸಲಾರಂಭಿಸಿತು. ಸೂಟ್‌ಕೇಸನ್ನು ಸೀಟಿನ ಕೆಳಗೆ ತಳ್ಳಿ, ಹಿಂದಕ್ಕೆ ಒರಗಿ ಕುಳಿತು ಚೀಲದಿಂದ ಕರವಸ್ತ್ರವೊಂದನ್ನು ತೆಗೆದು, ಕತ್ತು, ಕೈ, ಮುಖಗಳನ್ನು ಒರೆಸಿಕೊಳ್ಳುತ್ತಾ ಸಮಾಧಾನದ ನಿಟ್ಟುಸಿರಿಟ್ಟಳು ವತ್ಸಲ. ರೈಲು ತಪ್ಪಿಬಿಡಬಹುದು ಎಂದು ಆತಂಕಗೊಂಡಿದ್ದ ಮನಕ್ಕೆ ನೆಮ್ಮದಿ ಮೂಡಿತ್ತು. 'ಸುರಪುರಿ'ಯಿಂದ ನೇರವಾಗಿ ಬೆಂಗಳೂರು ಸ್ಟೇಶನ್ನಿಗೆ ಬರದೆ, ಬಸ್ಸಿನಲ್ಲಿ ಬೆಂಗಳೂರಿಗೆ ಬಂದು, ಮುರಳಿಯ ಗೆಳೆಯನನ್ನು ಸಂಧಿಸಿ, ಅಲ್ಲಿಂದ ಸ್ಟೇಶನ್‌ಗೆ ಹೊರಟದ್ದಕ್ಕೇ ಇಷ್ಟೆಲ್ಲಾ ಫಜೀತಿಯಾಯಿತು' ಎನಿಸಿತು ಅವಳಿಗೆ. 'ರಿಕ್ಷಾ ದಾರಿಯಲ್ಲಿ ಕೆಡುತ್ತದೆಂದು ಯಾರು ಊಹಿಸಲು ಸಾಧ್ಯ? ಅಂತೂ ಸಮಯಕ್ಕೆ ಸರಿಯಾಗಿ ತಂದುಬಿಟ್ಟನಲ್ಲ ಪುಣ್ಯಾತ್ಮ' ಎಂದು ರಿಕ್ಷಾವಾಲಾನಿಗೆ ಮನದಲ್ಲೇ ವಂದನೆಗಳನ್ನರ್ಪಿಸಿದಳು.

ರೈಲು ಕ್ರಮೇಣ ವೇಗವಾಗಿ ಓಡತೊಡಗಿತು. ತಾನು ಕುಳಿತ ಬೋಗಿಯ ಸುತ್ತ ಮುತ್ತ ಅವಳ ಗಮನ ಹರಿಯಿತು. ಹವಾನಿಯಂತ್ರಿತ ಬೋಗಿಯಾದ್ದರಿಂದ ಹೆಚ್ಚು ಗದ್ದಲವಿರುವುದಿಲ್ಲ. ಆರಾಮಾಗಿ ದೆಹಲಿಯ ತನಕ ಪಯಣಿಸಬಹುದು ಎನಿಸಿತು. ಎದುರು ಸೀಟಿನತ್ತ ಅವಳ ಗಮನ ಹರಿಯಿತು. ಅದಿನ್ನೂ ಖಾಲಿಯಾಗಿಯೇ ಉಳಿದಿದೆ. ಮುರಳಿಗೆ ರಿಸರ್ವ್ ಆಗಿ ಹಿಂದಿನ ದಿನವಷ್ಟೇ ರದ್ದು ಮಾಡಿಸಿದ್ದ ಪಕ್ಕದ ಸೀಟಿನಲ್ಲೂ ಯಾರೂ ಬಂದು ಕುಳಿತಿಲ್ಲ. ಇನ್ನೊಂದು ಪಕ್ಕ

ಒಂದೊಂದೇ ಆಸನವುಳ್ಳ ಎರಡು ಸೀಟುಗಳೂ ಭರ್ತಿಯಾಗಿವೆ. ವಯಸ್ಸಾದ ಒಬ್ಬ ಗಂಡಸು ಒಂದರಲ್ಲಿ, ಯುವಕನೊಬ್ಬ ಇನ್ನೊಂದು ಸೀಟಿನಲ್ಲಿ ಕುಳಿತಿದ್ದಾರೆ. ಕೆಲಹೊತ್ತಿನ ತನಕ ಅಲ್ಲಿಂದಿಲ್ಲಿಗೆ ಓಡಾಡುವ ಜನರನ್ನು ನಿರೀಕ್ಷಿಸುತ್ತಾ ಕುಳಿತಿದ್ದಳು ವತ್ಸಲ. ಅನಂತರ ಹಾಗೆ ನೋಡಲು ಬೇಜಾರು ಎನಿಸಿ ತನ್ನೊಡನೆ ತಂದಿದ್ದ ಪತ್ರಿಕೆಯನ್ನು ಬಿಡಿಸಿ ಓದತೊಡಗಿದಳು. ಸ್ವಲ್ಪ ಹೊತ್ತು ಓದಿದ ನಂತರ ಓದಲೂ ಬೇಜಾರು ಅನಿಸಿತು. ಕೈಗಡಿಯಾರ ಎಂಟು ಗಂಟೆಯನ್ನು ತೋರಿಸುತ್ತಿದ್ದಂತೆ ಚೀಲದಿಂದ ಡಬ್ಬಿಯನ್ನು ಹೊರ ತೆಗೆದು ತಾಯಿ ಮಾಡಿಕೊಟ್ಟಿದ್ದ ಚಪಾತಿಯನ್ನು ತಿಂದಳು. ಇನ್ನೊಂದು ಪಕ್ಕದ ಒಂದೊಂದೇ ಇರುವ ಸೀಟಿನಲ್ಲಿ ಕುಳಿತಿದ್ದ ವ್ಯಕ್ತಿಗಳು ಇವಳೊಡನೆ ಮಾತನಾಡಬಹುದಾದಂತ ವ್ಯಕ್ತಿಗಳು ಎನಿಸಲಿಲ್ಲ. ಅವರಿಬ್ಬರೂ ತಮ್ಮ ತಮ್ಮಲ್ಲೇ ಮಾತನಾಡುವುದರಲ್ಲೇ ಆಸಕ್ತರಾಗಿದ್ದರು. ಮೇಲಾಗಿ ಅವರಿಬ್ಬರೂ ಹೆಂಗಸರಾಗಿರಲಿಲ್ಲ. ಹೆಂಗಸರಾಗಿದ್ದರೆ ಕುಳಿತಿರುವ ವ್ಯಕ್ತಿ ಮುದುಕಿಯೋ, ವಯಸ್ಕಳೋ, ಹುಡುಗಿಯೋ ಯಾರಾಗಿದ್ದರೂ ಮಾತಿಗೆ ಎಳೆಯಬಹುದಾಗಿತ್ತು.

ಕಾಲ ಎಷ್ಟೇ ಬದಲಾಗಿರಲಿ; ಮೊದಲೇ ಪರಿಚಿತರಾದ ವ್ಯಕ್ತಿಗಳ ವಿನಾ, ಅಥವಾ ಪರಸ್ಪರ ಆಕರ್ಷಿತರಾದ ಯುವಕ–ಯುವತಿಯರ ವಿನಾ, ಉಳಿದಂತೆ ಮಾತನಾಡಲು ಗಂಡಸು ಗಂಡಸಿನ ಜೊತೆಯನ್ನು ಬಯಸುತ್ತಾನೆ. ಹೆಂಗಸು ಹೆಂಗಸಿನ ಜೊತೆ ಬಯಸುತ್ತಾಳೆ. ವತ್ಸಲಾ ಅದನ್ನು ಅನೇಕ ಬಾರಿ ಗಮನಿಸಿದ್ದಾಳೆ. ತಮ್ಮ ಮಾತಿನಲ್ಲೇ ಆಸಕ್ತರಾಗಿದ್ದ ಆ ಗಂಡಸರ ಮುಖವನ್ನು ಪೆಕರು ಪೆಕರಾಗಿ ನೋಡುತ್ತಾ ಕುಳಿತಿರುವುದು ಅಸಾಧ್ಯವೆನಿಸಿ ವತ್ಸಲ ತನ್ನ ಸೂಟ್‌ಕೇಸಿನಿಂದ ಬೆಡ್‌ಶೀಟ್ ಒಂದನ್ನು, ಏರ್‌ಪಿಲ್ಲೋವನ್ನು ಹೊರಗೆಳೆದು ಸೂಟ್‌ಕೇಸ್ ಮುಚ್ಚಿ ಕಬ್ಬಿಣದ ಸರಪಳಿಗೆ ಬಂಧಿಸಿ ಬೀಗ ಹಾಕಿದಳು. ಇವಳು ಮಾಡುತ್ತಿದ್ದ ಕೆಲಸವನ್ನು ಗಮನಿಸಿದ ಇನ್ನೊಂದು ಬದಿಯಲ್ಲಿದ್ದ ವಯಸ್ಕ ಗಂಡಸು "ಈ ಮೂರೂ ಸೀಟು ಖಾಲಿಯಾಗೇ ಉಳಿದಿದೆ'' ಎಂದ. "ಮುಂದಿನ ಸ್ಟೇಶನ್ನಿನಲ್ಲಿ ತುಂಬಬಹುದು'' ಎಂದಳು ವತ್ಸಲ. ಆ ಗಂಡಸೂ 'ಹೌದು' ಎನ್ನುವಂತೆ ತಲೆಯಾಡಿಸಿ ಇನ್ನೊಬ್ಬ ಯುವಕನೊಂದಿಗೆ ಮಾತಿಗೆ ಪ್ರಾರಂಭಿಸಿದ.

ಸುಮ್ಮನೆ ಮಲಗುವುದು ವಾಸಿ ಎನಿಸಿತು ವತ್ಸಲೆಗೆ. ಎರಡೂ ಬದಿಯ ಆಸನಗಳ ಮಧ್ಯೆ ಹಾಕಿದ್ದ ಪರದೆಯನ್ನು ಅಗಲಕ್ಕೆ ಬಿಡಿಸಿ ಪುಸ್ತಕವೊಂದನ್ನು ಹಿಡಿದು ಮೇಲಿನ ಬರ್ತ್‌ಗೆ ಹೋಗಿ ಮಲಗಿದಳು. ಕಾಲುಗಂಟೆ ಓದುವಷ್ಟರಲ್ಲೇ ಓದುವುದೂ ಬೇಡವೆನಿಸಿ ಪುಸ್ತಕವನ್ನು ತಲೆಯ ಪಕ್ಕದಲ್ಲಿರಿಸಿಕೊಂಡು ಹಾಗೆಯೇ ಕಣ್ಮುಚ್ಚಿದಳು. ಗುಜು ಗುಜು ಗದ್ದಲದ ನಡುವೆಯೂ ಕಣ್ಣಿಗೆ ಮಂಪರು ಕವಿದಂತಾಯಿತು. ಕೆಲ ಹೊತ್ತಿನ ನಂತರ ಪರದೆ ಸರಿಸಿದ ಶಬ್ದಕ್ಕೆ ಎಚ್ಚರವಾಗಿ ಕಣ್ಣುಬಿಟ್ಟು ನೋಡಿದಳು. ಸಾಕಷ್ಟು ವಯಸ್ಸಾದಂತೆ ಕಂಡ ದಂಪತಿಗಳಿಬ್ಬರು ಆ ಜಾಗ ತಮ್ಮದೇ ಅಲ್ಲವೇ ಹೌದೇ ಎಂಬುದನ್ನು ಖಾತ್ರಿ ಮಾಡಿಕೊಳ್ಳುತ್ತಿದ್ದರು. ಅವರಿಬ್ಬರೂ ಪರದೆಯನ್ನು ಪೂರ್ತಿ ಮುಚ್ಚಿ ಕುಳಿತನಂತರ ತಲೆಯನ್ನು ತುಸುವೇ ಎತ್ತಿ ಅವರತ್ತ ನೋಡಿದಳು. ಕುಳಿತಿದ್ದ ವ್ಯಕ್ತಿಗಳು ಅಸ್ಪುಟವಾಗಿ ಕಾಣಿಸತೊಡಗಿದರು. ಇಬ್ಬರೂ ಸಾಕಷ್ಟು ವಯಸ್ಸಾದವರು. ಐವತ್ತರ ಸಮೀಪವಿರಬೇಕು. ಇಬ್ಬರೂ ಏನೇನೋ ಮಾತಾಡಿಕೊಳ್ಳುತ್ತಿದ್ದರು. ಮಲಯಾಳವೋ, ತುಳುವೋ ಮತ್ತಾವುದೋ ಇರಬೇಕು. ಅವಳಿಗೆ ಕನ್ನಡ– ಇಂಗ್ಲೀಷ್ ಬಿಟ್ಟು ಬೇರೆ ಭಾಷೆಗಳು ಚೆನ್ನಾಗಿ ಬರುವುದಿಲ್ಲ. ಹಿಂದಿ ಅರ್ಥವಾಗುತ್ತದೆ ಅಷ್ಟೆ. ಆದ್ದರಿಂದ ಅವರು ಮಾತನಾಡುತ್ತಿದ್ದುದೆಲ್ಲವೂ ತಿಳಿಯಲಿಲ್ಲ. ಮಧ್ಯೆ ಮಧ್ಯೆ ಇಂಗ್ಲೀಷನ್ನು ಬೆರೆಸಿ ಮಾತನಾಡುತ್ತಿದ್ದುದರಿಂದ 'ಹೀಗೆ ಹೇಳುತ್ತಿರಬಹುದು', 'ಹಾಗೆ ಹೇಳುತ್ತಿರಬಹುದು' ಎಂದು ತಾನೇ ಊಹಿಸಿಕೊಳ್ಳುತ್ತಿದ್ದಳು. ಅವರಿಬ್ಬರ ಇರುವಿಕೆ ಅವಳನ್ನು ವಿಶೇಷವಾಗಿ ಆಕರ್ಷಿಸಿತು. 'ಹವಾ ನಿಯಂತ್ರಿತ ಬೋಗಿ' ಎಂದ ಮೇಲೆ ಸಾಕಷ್ಟು ಸ್ಥಳವಿದ್ದೇ ಇರುತ್ತದೆ. ಆದರೆ ಅವರಿಬ್ಬರೂ ಅದೇಕೆ ಹಾಗೆ ಒಬ್ಬರಿಗೊಬ್ಬರು ಅತು ಕುಳಿತಿದ್ದಾರೆ ಎಂದು ಅವಳಿಗೆ ಆಶ್ಚರ್ಯ. ಆಕೆಯ ಕೈ ಆತನ ಹೆಗಲಮೇಲೆ. ಆತನ ಕೈ ಆಕೆಯ ತೊಡೆಯ ಮೇಲೆ. ನವದಂಪತಿಗಳೂ ಅಲ್ಲ! ಆದರೂ ಇನ್ನೊಬ್ಬ ವ್ಯಕ್ತಿ ಮೇಲೆ ಮಲಗಿದೆ ಎಂಬ ಪರಿವೆಯೂ ಇಲ್ಲದವರಂತೆ ಕುಳಿತಿದ್ದಾರಲ್ಲಾ! ವತ್ಸಲೆಗೆ ತುಸು ಮುಜುಗರ ಎನಿಸಿತು. ಮತ್ತೆ ಕಣ್ಣುಮುಚ್ಚಿ ಮಲಗಿದರೂ ನಿದ್ದೆ ಬರಲಿಲ್ಲ. ಅವರತ್ತ ಮತ್ತೊಮ್ಮೆ ನೋಡುವಂತೆ ಒಳಮನಸ್ಸು ಪ್ರೇರೇಪಿಸುತ್ತಿತ್ತು. ನೋಡಿದರೆ ಮತ್ತಾವುದಾದರೂ ದೃಶ್ಯವನ್ನು ಕಂಡೇನೆಂಬ ಸಂಕೋಚ ಮುತ್ತಿಕೊಂಡಿತು. ತಲೆಯ ಬದಿಯಲ್ಲಿ ಇರಿಸಿಕೊಂಡಿದ್ದ ಪುಸ್ತಕವನ್ನು ತೆರೆದು ಓದಲು ಪ್ರಯತ್ನಿಸಿದಳು. ಆದರೆ ಓದು ಸಾಗಲಿಲ್ಲ. ಅವರಿಬ್ಬರ ಮಾತುಗಳತ್ತ ಗಮನ ಹರಿಯುತ್ತಿತ್ತು.

"ಇನ್ನು ಮಲಗೋಣವಾ ಡಿಯರ್'' – ಆತನ ಧ್ವನಿ.

"ಬೇಡ – ಇನ್ನೂ ಕೊಂಚ ಹೊತ್ತು ಹೀಗೆಯೇ ಕುಳಿತಿರೋಣವೆನಿಸುತ್ತಿದೆ'' ಆಕೆಯ ಧ್ವನಿ.

ಹೀಗೆಯೇ ನವದಂಪತಿಗಳಂತೆ ಏನೇನೋ ಮಾತು. ಯಾವುದೋ ಕೃತ್ರಿಮ ಆ ಮಾತುಗಳಲ್ಲಿ. ವಯಸ್ಸಾದ ದಂಪತಿಗಳಿಗಿರಬೇಕಾದ ಗಾಂಭೀರ್ಯ, ಮರೆಯಾಗಿ, ನವದಂಪತಿಗಳಿಗಿರಬೇಕಾದ ನವೋಲ್ಲಾಸ, ಪ್ರೇಮ, ಉನ್ಮಾದಗಳು ಅಸಹಜ ವಯಸ್ಸಿನ ವ್ಯಕ್ತಿಗಳಲ್ಲಿ ಮೇಳವಿಸಿ ಸನ್ನಿವೇಶವನ್ನು ವಿರೂಪ ಮಾಡಿದೆ ಎನಿಸಿ ಓದುತ್ತಿದ್ದ ಪುಸ್ತಕದ ಮರೆಯಿಂದಲೇ ಮತ್ತೊಮ್ಮೆ ವೀಕ್ಷಿಸಿದಳು ವತ್ಸಲ. ಇಬ್ಬರೂ ತಮ್ಮ ತಮ್ಮಲ್ಲೇ ಮಗ್ನರಾಗಿ ಬಿಟ್ಟಿದ್ದಾರೆ. ನೋಡುತ್ತಿದ್ದ ವತ್ಸಲೆಗೆ ಅದು ನಾಟಕದಂತೆ ಅನಿಸಹತ್ತಿತು. ಇಬ್ಬರಿಗೂ ಅದರಲ್ಲೂ ವಿಶೇಷವಾಗಿ ಆ ಗಂಡಸಿಗೆ ಅಂತಹ ಪ್ರೇಮ ಪ್ರದರ್ಶನದಲ್ಲಿ ಆಸಕ್ತಿ ಇಲ್ಲ. ಆದರೆ ಒಬ್ಬರನ್ನೊಬ್ಬರು ಮೆಚ್ಚಿಸುವ ಸಲುವಾಗಿ ಒಬ್ಬರನ್ನೊಬ್ಬರು ತಾಳಿಕೊಳ್ಳುತ್ತಿದ್ದಾರೆ ಎನಿಸಿತು.

ವತ್ಸಲ ಮುಖಗಂಟಿಕ್ಕಿ ಸರಿಯಾಗಿ ಮಲಗಲು ಪ್ರಯತ್ನಿಸಿದಳು. ಅವಳು ಆ ಪ್ರಯತ್ನದಲ್ಲಿದ್ದಾಗ ಪುಸ್ತಕಕ್ಕೆ ಕೈ ತಾಕಿ ಅದು ಜಾರಿ ಕೆಳಗೆ ಬಿದ್ದಿತು. ಆ ಹೆಂಗಸು ಪಕ್ಕಕ್ಕೆ ಸರಿದು ಬಗ್ಗಿ ಆ ಪುಸ್ತಕವನ್ನೆತ್ತಿ ಮೇಲೆ ನೋಡಿದಳು. ಈಗ ತಾನೇ ಇನ್ನೊಬ್ಬ ವ್ಯಕ್ತಿಯ ಅಸ್ತಿತ್ವ ಇರುವುದನ್ನು ಆಕೆ ಗಮನಿಸುತ್ತಿದ್ದಾರೆಯೇ ಎನಿಸಿತು ವತ್ಸಲಳಿಗೆ.

"ಓದುತ್ತೀರಾ? ನಿದ್ದೆ ಮಾಡಬೇಕೋ?'' –ಆಕೆ ಪುಸ್ತಕವನ್ನು ವತ್ಸಲಳೆಡೆಗೆ ಚಾಚುತ್ತಾ ಕೇಳಿದರು– ಇಂಗ್ಲೀಷಿನಲ್ಲಿ.

"ನಿದ್ದೆ ಮಾಡಿದರೆ ಮಾಡುತ್ತೇನೆ. ಇಲ್ಲದಿದ್ದರೆ ಓದುತ್ತೇನೆ'' ಆಕೆಯ ಕಡೆಗೆ ನೋಡುತ್ತಾ ವತ್ಸಲಾ ಹೇಳಿದಳು. ಆಕೆ ತುಸು ನಕ್ಕರು.

ವತ್ಸಲ ಮತ್ತೆ ನಿದ್ರಿಸಲು ಯತ್ನಿಸಿದಳು. ನಿದ್ರಿಸಲು ಯತ್ನಿಸಿದಂತೆಲ್ಲಾ ತಾನು ಮೊದಲೇ ಕಂಡ ರೂಪ ಅದು. ಆ ವ್ಯಕ್ತಿಯನ್ನು ತಾನು ಮೊದಲೇ ಬೇರೆಲ್ಲೋ ನೋಡಿದ್ದೇನೆ ಎನಿಸಹತ್ತಿತು.

ಮುರಳಿ ಕ್ಯಾನ್ಸಲ್ ಮಾಡಿಸಿದ್ದ ಸೀಟ್ ಇನ್ನೂ ಖಾಲಿಯಾಗೇ ಉಳಿದುಬಿಟ್ಟಿತ್ತಾದ್ದರಿಂದ ಅವರಿಬ್ಬರೂ ಕೆಳಗಿನ ಬರ್ತ್‌ನಲ್ಲೇ ಮಲಗಲು ನಿರ್ಧರಿಸಿದರೆಂದು ತೋರುತ್ತದೆ. ಆಕೆ ತಲೆದಿಂಬು, ಹೊದಿಕೆ ಮುಂತಾದುವನ್ನು ತೆರೆಯಲು ಮೇಲೆದ್ದು ಹಿಂದೆ ತಿರುಗಿ ಬಗ್ಗಿದಾಗ ಆಕೆಯ ಬಾಬ್ ಮಾಡಿದ ಕೂದಲನ್ನು ಕಂಡೊಡನೆ ವತ್ಸಲೆಯ ಬುದ್ಧಿಗೆ ಥಕ್ಕನೆ ಹೊಳೆದುಹೋಯಿತು. ಆಕೆ ವಾಸಂತಿ ಅಲ್ಲವೇ? ಬೆಂಗಳೂರಿನಲ್ಲಿ ತಾನು

## ಲೋಕಜ್ಞಾನ

ಪ್ರಶ್ನೆಗಳು

1) ಯುಗೋಸ್ಲಾವಿಯಾದಲ್ಲಿ ಜನಿಸಿ, ಭಾರತದಲ್ಲಿ ನೆಲೆಸಿ ನೊಬೆಲ್ ಪ್ರಶಸ್ತಿ ಪಡೆದವರು
2) ಏಷ್ಯನ್ ಗೇಮ್ಸ್‌ನಲ್ಲಿ ಚಿನ್ನದ ಪದಕ ಗೆದ್ದ ಭಾರತದ ಮೊದಲ ಮಹಿಳಾ ಕ್ರೀಡಾಪಟು
3) ಸಿರಿಮಾವೊ ಬಂಡಾರ ನಾಯಕೆ ಅವರ ಬಿರುದು ಏನು?
4) 1761ರಿಂದ 1775ರ ವರೆಗೆ ಇಂದೂರು ಸಂಸ್ಥಾನವನ್ನು ಆಳಿದ ರಾಣಿ
5) ಮದರ್ ಥೆರೆಸಾ ಅವರು ಸ್ಥಾಪಿಸಿರುವ ಅನಾಥಾಶ್ರಮದ ಹೆಸರು
6) ಶ್ರೀಮತಿ ಗೋಲ್ಡಾಮೀರ್ ಯಾವ ದೇಶದ ಪ್ರಧಾನಿಯಾಗಿದ್ದರು?
7) ಹಿನ್ನೆಲೆಗಾಯನ ಕ್ಷೇತ್ರದಲ್ಲಿ ಗಿನ್ನೆಸ್ ದಾಖಲೆ ಹೊಂದಿರುವ ಭಾರತೀಯ ಗಾಯಕಿ
8) ಖ್ಯಾತ ನರ್ತಕಿ ರುಕ್ಮಿಣಿ ಅರುಂಡೇಲ್ ಸ್ಥಾಪಿಸಿದ ಸಂಸ್ಥೆ
9) ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ಪ್ರಪ್ರಥಮ ಮಹಿಳಾ ಸದಸ್ಯೆ
10) ಮೊಗಲರ ವಿರುದ್ಧ ಗೆರಿಲ್ಲಾ ಯುದ್ಧ ನಡೆಸಿದ ವೀರ ಮಹಿಳೆ
11) ನಾಗಚಂದ್ರನ ಕಾಲದಲ್ಲಿದ್ದ ಕನ್ನಡದ ಕವಯಿತ್ರಿ
12) ಗಾಂಧಿ ಶಿಷ್ಯೆ ಮೀರಾ ಬೆಹನ್ ಅವರ ನಿಜವಾದ ಹೆಸರು

(ಉತ್ತರಗಳು ಇದೇ ಸಂಚಿಕೆಯಲ್ಲಿವೆ. ಹುಡುಕಿ ನೋಡಿ)

* ವಿ.ಜೆ.

ಕೆಲಸ ಮಾಡುತ್ತಿದ್ದಾಗ ಆಕೆಯ ಮನೆಯಲ್ಲೇ ಬಾಡಿಗೆ ಕೊಟ್ಟುಕೊಂಡು ಇದ್ದುದಲ್ಲವೇ? ಅದೇ ವಾಸಂತಿಯೇ ಆಕೆ. ಆಗಲೇ ದೀಪಗಳನ್ನು ಆರಿಸಿಯಾಗಿತ್ತಾದ್ದರಿಂದ ಬೆಳಗಾಗುತ್ತಲೂ ಆಕೆ ವಾಸಂತಿ ಹೌದೋ ಅಲ್ಲವೋ ಎಂಬುದನ್ನು ಖಾತ್ರಿ ಮಾಡಿಕೊಂಡರಾಯಿತು ಎಂದುಕೊಂಡು ಮತ್ತೆ ಕಣ್ಣು ಮುಚ್ಚಿದಳು ವತ್ಸಲ. ಈಗ ನಿದ್ದೆ ಬರಲಿಲ್ಲ. ಐದಾರು ವರ್ಷಗಳ ಹಿಂದಿನ ದಿನಗಳು ನೆನಪಿಗೆ ಬರಲಾರಂಭಿಸಿದವು. ಅವಳು ಆಗ ತಾನೇ ಕನ್ನಡ ಎಂ.ಎ ಪೂರೈಸಿದ್ದಳು. ಲೆಕ್ಚರರ್ ಕೆಲಸ ಆಗಲೇ ಸಿಗುವುದೆಂಬ ಭರವಸೆಯೇನೂ ಇರಲಿಲ್ಲ. ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರೇ ಚಾತಕ ಪಕ್ಷಿಗಳಂತೆ ಪೇಪರ್‌ಗಳಲ್ಲಿನ ಕೆಲಸದ ಕರೆಗಾಗಿ ಕಾಯುತ್ತಿರುವಾಗ ದ್ವಿತೀಯ ದರ್ಜೆಯಲ್ಲಿ ಉತ್ತೀರ್ಣಳಾಗಿರುವ ಇವಳಿಗೆ ಯಾರು ಕೆಲಸ ಹಿಡಿದಿಟ್ಟಿರುತ್ತಾರೆ? ಆದರೂ ಅವಳು ಅಲ್ಲಿ ಇಲ್ಲಿ ಸಣ್ಣ ಪುಟ್ಟ ಕೆಲಸಕ್ಕಾಗಿ ಪ್ರಯತ್ನಿಸಿದ್ದಳು. ಬೆಂಗಳೂರಿನ ಸಂಸ್ಥೆಯೊಂದು ಅನುವಾದ ಕಾರ್ಯ ಯೋಜನೆಯೊಂದನ್ನು ರೂಪಿಸಿಕೊಂಡಿದ್ದು, ಚೆನ್ನಾಗಿ ಇಂಗ್ಲೀಷ್ ಬಲ್ಲ ವತ್ಸಲೆಯನ್ನು ಆ ಸಂಸ್ಥೆಯಲ್ಲಿ 'ಸಹಾಯಕ ಅನುವಾದಕಿ'ಯಾಗಿ ಕೆಲಸ ಮಾಡಲು ಆಹ್ವಾನಿಸಿತ್ತು. ಸಂಬಳವೇನೋ ಕಡಿಮೆಯೇ. ಆದರೂ ಅವಳು ತನ್ನ ತಾಯಿಯ ಇಚ್ಛೆಗೆ ವಿರುದ್ಧವಾಗಿ ಹೊರಟಿದ್ದಳು. ಒಂದೆರಡು ದಿನ ಗೆಳತಿಯ ಮನೆಯಲ್ಲೇ ಇರುವುದಾಗಿಯೂ, ವಾಸಿಸುವುದಕ್ಕೆ ಒಂದು ಕೋಣೆ ಎಲ್ಲಾದರೂ ಸಿಗಬಹುದೆಂದೂ, ಒಂದು ವೇಳೆ ಒಬ್ಬಳೇ ಇರಲು ಯಾವುದಾದರೂ ಕೋಣೆಯೋ, ಹಾಸ್ಟೆಲೋ ದೊರಕದಿದ್ದರೆ ವಾಪಸು ಬಂದು ಬಿಡುವುದಾಗಿ ಹೇಳಿ ತಾಯಿಯನ್ನು ಸಮಾಧಾನಪಡಿಸಿ ಹೊರಟು ಬಂದಿದ್ದಳು. ಬೆಂಗಳೂರಿನಿಂದ ಸುರಪುರಿಗೆ ಯಾವ ಮಹಾದೂರ? ಮೂರು ನಾಲ್ಕು ಗಂಟೆಗಳ ಪ್ರಯಾಣ. ಬೇಕಾದಷ್ಟು ನಾನ್‌ಸ್ಟಾಪ್ ಬಸ್ಸುಗಳು ಓಡಾಡುತ್ತಿರುತ್ತವೆ. ಯಾವ ಹೊತ್ತಿನಲ್ಲಾದರೂ ಬಸ್ಸು ಸಿಕ್ಕುತ್ತದೆ ಎಂಬ ಧೈರ್ಯ.

ಅವಳು ಅಂದುಕೊಂಡಂತೆ ಕೋಣೆಯೊಂದು ದೊರೆಯುವುದಕ್ಕೆ ಒಂದೆರಡು ದಿನಗಳೂ ಬೇಕಾಗಲಿಲ್ಲ. ಸಹೋದ್ಯೋಗಿಯೊಬ್ಬಳು "ಮುಂದಿನ ಬೀದಿಯಲ್ಲಿಯೇ ಒಂದು ರೂಮು ದೊರೆಯುತ್ತದೆ. ಮನೆಯೊಡತಿ ಒಬ್ಬಂಟಿಯಾದುದರಿಂದ ಇರುವುದಕ್ಕೆ ನಿಮಗೇನೂ ತೊಂದರೆಯಾಗುವುದಿಲ್ಲ" ಎಂದಳು. ವತ್ಸಲ ಕೂಡಲೇ ಒಪ್ಪಿಕೊಂಡು ಬಿಟ್ಟಳು. ಎರಡು ಕೋಣೆಗಳಿರುವ ಪುಟ್ಟ ಮನೆ ಅದು. ಹೊರಭಾಗದಲ್ಲಿದ್ದ ಒಂದು ಕೋಣೆ ಅವರಿಗೆ ಹೆಚ್ಚು ಎನಿಸಿದ್ದರಿಂದ ಬಾಡಿಗೆಗೆ ಕೊಡಲು ಒಪ್ಪಿದ್ದರು. ಆಕೆ ಮಧ್ಯ ವಯಸ್ಸನ್ನು ಸಮೀಪಿಸುತ್ತಿದ್ದುದರಿಂದ ಒಂಟಿಯಾಗಿ ಇರಬೇಕಾದ ವತ್ಸಲೆಗೆ ಒಂದು ಆಸರೆ ಸಿಕ್ಕಿದಂತೆ ಅನಿಸಿತ್ತು. ಇಬ್ಬರೂ ಆಗಾಗ ಸಂಧಿಸಿ ಪರಸ್ಪರ ಮಾತುಕತೆಯಾಡುವರು. ಆಕೆ ಬೆಂಗಳೂರಿಗೆ ಬಂದ ನಂತರ ಕನ್ನಡ ಕಲಿತಿದ್ದಂತೆ. ಸೊಗಸಾಗಿ ಕನ್ನಡ ಮಾತನಾಡುತ್ತಿದ್ದರು. ಒಮ್ಮೊಮ್ಮೆ ಯಾವುದಾದರೂ ತಿಂಡಿಯ ತಟ್ಟೆಯೊಡನೆ ವತ್ಸಲಳಲ್ಲಿಗೆ ಬರುವರು. ವತ್ಸಲ ಯಾವಾಗಲೂ ಅಡುಗೆ–ತಿಂಡಿ ಮಾಡಿಕೊಳ್ಳುತ್ತಿರಲಿಲ್ಲ. ಒಮ್ಮೊಮ್ಮೆ ಮಾಡಿಕೊಳ್ಳುತ್ತಿದ್ದಳು. ಹೆಚ್ಚು ದಿನಗಳಲ್ಲಿ ಹೋಟೆಲಿನಲ್ಲಿಯೇ ಊಟ ಮಾಡುತ್ತಿದ್ದಳು. ಆದ್ದರಿಂದ

## ರಂಗೋಲಿ

ಮಧ್ಯದಲ್ಲಿ 21 ಚುಕ್ಕೆಯ ಸಾಲನ್ನಿಟ್ಟು ಮೇಲೆ ಹಾಗೂ ಕೆಳಗೆ ಒಂದೊಂದೇ ಚುಕ್ಕೆಗಳಿದ್ದ ಕಡಿಮೆ ಮಾಡುತ್ತ 11 ಚುಕ್ಕೆಗಳಿಗೆ ನಿಲ್ಲಿಸಿ. ಪಾರಿಜಾತದ ರಂಗೋಲಿ ಸಿದ್ಧವಾಗುತ್ತದೆ.

–ವರದ ಭಟ್, ನಕ್ರೆ





# ಕೆಲವು ಮಕ್ಕಳು ತುಂಬ ಆರೋಗ್ಯವಾಗಿದ್ದು, ಇತರ ಕೆಲವು ಮಕ್ಕಳು ಅಸ್ವಸ್ಥವಾಗಿರುತ್ತವೆ ಅದೇಕೆ?

ಸರಿಯಾದ ಪ್ರಮಾಣದ, ಸರಿತೂಕದ **ವಿಟಮಿನ್‌ಗಳು ಮತ್ತು ಖನಿಜಾಂಶಗಳು**, ಪೋಷಕ ಆಹಾರವನ್ನು ಮೈಗೂಡಿಸಿಕೊಳ್ಳುವಲ್ಲಿ ನೆರವಾಗುತ್ತವೆಂಬುದು. ಈಗಾಗಲೇ ಸಿದ್ಧವಾಗಿದೆ. ಇವುಗಳಿಂದ, ಮಗು, ರೋಗಗಳನ್ನುಕಾಯಿಲೆಗಳನ್ನು ನಿಗ್ರಹಿಸುವ ಶಕ್ತಿ ಪಡೆದುಕೊಳ್ಳುತ್ತದೆ.

ಈ ವಿಟಮಿನ್‌ಗಳು ಮತ್ತು ಖನಿಜಾಂಶಗಳನ್ನು ಪಡೆದುಕೊಳ್ಳಲು, **ಪೌಷ್ಟಿಕವಾದ ಸಮತುಲಿತ** ಆಹಾರ ಸೇವಿಸುವುದು ಒಂದು ಅತ್ಯುತ್ತಮ ವಿಧಾನವಾಗಿದೆ.

ನೀವು ನಿಮ್ಮ ಡಾಕ್ಟರ್‌ರನ್ನು ಕೇಳಿದಲ್ಲಿ, **4 ತಿಂಗಳಾದನಂತರ** ನಿಮ್ಮ ಮಗುವಿಗೆ, ಬರೀಹಾಲು ಕುಡಿಸಿದರೆ ಸಾಲದುಎಂಬುದನ್ನು ಅವರು ಹೇಳೇ ಹೇಳುತ್ತಾರೆ. ನಿಮ್ಮ ಮಗುವಿಗೆ, ಈಗ ಪೌಷ್ಟಿಕವಾದ ಸಮತುಲಿತ ಘನ ಆಹಾರದ ಅವಶ್ಯಕತೆ ಇರುತ್ತದೆ. ಪ್ರತಿ ದಿನ, ಪ್ರತಿ ವಾರ.

ಆದರೆ ಬಹುತೇಕ ತಾಯಿಂದಿರಿಗೆ, ಸಾಂಪ್ರದಾಯಿಕ ಆಹಾರದಲ್ಲಿ ಸಮತುಲನ ರೂಢಿಸಿಕೊಂಡು ಬರುವುದು ಸುಲಭವೇನಲ್ಲ, ಅದಕ್ಕೆ ಪರಿಹಾರ?

**ಸೆರಿಲ್ಯಾಕ್** ನಿಮ್ಮ ಮಗುವಿಗೆ ಅಭ್ಯಾಸವಾಗಿರುವ **ಹಾಲಿನ ಸಕಲ ಸದ್ಗುಣಗಳನ್ನು** ಹೊಂದಿದ ಪೌಷ್ಟಿಕವಾದ ಸಮತುಲಿತ ಘನ ಆಹಾರ. ಬೆಳೆಯುವ ಮಕ್ಕಳಿಗೆ ಅತ್ಯುತ್ತಮವೆಂದು ಪರಿಗಣಿಸಲಾಗಿರುವ ಹಾಲಿನ ಪ್ರೋಟೀನ್‌ಗಳು ಸಹ ಇದರಲ್ಲಿವೆ. ಸೆರಿಲ್ಯಾಕ್, ಕೊಬ್ಬು, ಕಾರ್ಬೋಹೈಡ್ರೇಟ್ಸ್, ಕಬ್ಬಿಣಾಂಶ ಮತ್ತು ಕ್ಯಾಲ್ಷಿಯಂಅನ್ನು ಸರಿಯಾದ ಪ್ರಮಾಣದಲ್ಲಿ ಹೊಂದಿದೆ, ಹಾಗೂ ವಿಟಮಿನ್ A, D, E, B-ಕಾಂಪ್ಲೆಕ್ಸ್ ಮತ್ತು Cಗಳಿಂದ ಸಮೃದ್ಧವಾಗಿದೆ.

ಅಷ್ಟೇ ಅಲ್ಲ, ಸೆರಿಲ್ಯಾಕ್ ಅನ್ನು ಈಗ ನೆಸ್ಲೆಯ ಕ್ರಾಂತಿಕಾರಿಯಾದ **ಹೊಸ Z-ಲೈನ್ ಎನ್‌ಜೈಮ್ಯಾಟಿಕ್**ಎಂಬ **ಹೊಸ** ವಿಧಾನದಿಂದ ಸಂಸ್ಕರಿಸಿ ತಯಾರಿಸಲಾಗುತ್ತದೆ. ಈ ವಿಧಾನದಲ್ಲಿ, ಧಾನ್ಯಗಳನ್ನು ಮೊದಲೇ ಜೀರ್ಣಿಸಲಾಗಿರುತ್ತದೆ. ಇದರಿಂದಾಗಿ, ಮಗು ಸೆರಿಲ್ಯಾಕ್‌ಅನ್ನು ಜೀರ್ಣಿಸಿಕೊಳ್ಳುವುದು ಇನ್ನೂ ಸುಲಭವಾಗಿದೆ. ಸೆರಿಲ್ಯಾಕ್ ತುಂಬ ನಯವಾಗಿದೆ. ಹೆಚ್ಚು ಸ್ವಾದಿಷ್ಟವಾಗಿದೆ.

ಆದ್ದರಿಂದ, 4 ತಿಂಗಳು ತುಂಬಿದ ನಿಮ್ಮ ಮಗುವಿಗೆ ಸೆರಿಲ್ಯಾಕ್ ಕೊಡಿ. ಇದು, ಸರಿಯಾದ ವಿಟಮಿನ್‌ಗಳು ಮತ್ತು ಖನಿಜಾಂಶಗಳನ್ನು ಒಳಗೊಂಡಿದೆ. ಹಾಲಿನ ಸಕಲ ಸದ್ಗುಣಗಳನ್ನು ಹೊಂದಿದೆ. ನಿಮ್ಮ ಮಗು ಆರೋಗ್ಯವಾಗಿರಲು ಅಗತ್ಯವಾದ, ಪೌಷ್ಟಿಕವಾದ ಸಮತುಲಿತ ಘನ ಆಹಾರ ಇದೇ ಆಗಿದೆ.




ನಿಮ್ಮ ಮಗುವಿಗೆ ನೀಡಿ ಸೆರಿಲ್ಯಾಕ್ ಸೌಲಭ್ಯ..

ಒಮ್ಮೊಮ್ಮೆ ಆಕೆ ತಿಂಡಿ ತಂದಿತ್ತಾಗ ಅವಳಿಗೂ ಆಪ್ಯಾಯಮಾನವೆನಿಸುತ್ತಿತ್ತು. ಆ ದಿನ ಅವರು ತಿಂಡಿ ತಂದಿತ್ತಾಗ ವತ್ಸಲ ಕೇಳಿದ್ದಳು.

"ನೀವು ಒಬ್ಬರೇ ಇದ್ದೀರಲ್ಲ. ಬೇರೆ ಯಾರೂ ನಿಮ್ಮ ಸಂಬಂಧಿಗಳು ಇಲ್ಲವೇ? ಮಗ ಅಥವಾ ಮಗಳು ಅಥವಾ ಮತ್ಯಾರಾದರೂ?"

"ಇಲ್ಲ–ಇಲ್ಲ–ನಾನು ಮದುವೆಯನ್ನೇ ಮಾಡಿಕೊಂಡಿಲ್ಲ"

ವತ್ಸಲ ಇದನ್ನು ನಿರೀಕ್ಷಿಸಿರಲಿಲ್ಲ. ಬಹುಶಃ ಆಕೆ ವಿಧವೆಯಾಗಿದ್ದು ಮಗನೋ ಅಥವಾ ಮಗಳೋ ಬೇರೆಲ್ಲೋ ಇರಬೇಕು ಎಂದು ಭಾವಿಸಿದ್ದಳು. ವಾಸಂತಿ ಒಬ್ಬರೇ ಇದ್ದರೂ ಹಲವು ಜನ ಅವರನ್ನು ಅರಸಿಕೊಂಡು ಬರುವುದನ್ನು ವತ್ಸಲ ಗಮನಿಸಿದ್ದಳು. ಅದಕ್ಕೆಂತಲೇ ಕೇಳಿದಳು.

"ಆಗೀಗ ನಿಮ್ಮನ್ನು ಹುಡುಕ್ಕೊಂಡು ಹಲವು ಜನ ಬರ್‍ತಾರಲ್ಲ. ಅವರೆಲ್ಲ ನೆಂಟರೇ?"

"ಅವರೆಲ್ಲ ನನ್ನ ಸ್ನೇಹಿತರು"

ಒಂದು ಕ್ಷಣ ನಿಧಾನಿಸಿ ವಾಸಂತಿ ಮತ್ತೆ ಹೇಳಿದರು : "ನಾನೂ ಈ ವರ್ಷ ಮದುವೆ ಮಾಡಿಕೊಳ್ಳಬೇಕೆಂದಿದ್ದೇನೆ"

"ಆ – ಏನೆಂದಿರಿ?" ತಾನು ತಪ್ಪು ಗ್ರಹಿಸಿರಬೇಕೆಂದು ವತ್ಸಲ ಮತ್ತೆ ಕೇಳಿದ್ದಳು.

"ಹೌದು; ಮದುವೆಯಾಗ್ತೇನೆ. ನನಗೂ ಪ್ರೀತಿ ಬೇಕಾಗಿದೆ. ಅವರೂ ನನ್ನನ್ನು ಪ್ರೀತಿಸ್ತಾರೆ. ನೀವು ಸಂಜೆ ಬರ್‍ತೀರಲ್ಲ. ಆಗ ಅವರನ್ನು ನಿಮಗೆ ತೋರಿಸ್ತೇನೆ"

ವತ್ಸಲ ಪ್ರತಿ ಮಾತಾಡಲಿಲ್ಲ. ಆಶ್ಚರ್ಯದೊಂದಿಗೆ ನಗುವೂ ಮೂಡಿತು. ಆದರೆ ತಡೆದುಕೊಂಡಿದ್ದಳು. ಇಂತಹದೊಂದು ಸಂಗತಿಯನ್ನು ಅವಳು ಈವರೆಗೂ ಕೇಳಿರಲಿಲ್ಲ. ಐವತ್ತರ ಹೆಂಗಸು ಮದುವೆಯಾಗುವುದುಂಟೆ? ಮರುದಿನ ಸಹೋದ್ಯೋಗಿಗಳೊಂದಿಗೆ ಹರಟುತ್ತಿದ್ದಾಗ ಅವಳು ವಾಸಂತಿ ಮದುವೆಯ ವಿಷಯವನ್ನು ಹೇಳಿ ನಕ್ಕಳು. ನಗುತ್ತಲೇ ಅಂದಿದ್ದಳು.

"ನಮ್ಮ ಭಾರತೀಯರಿಗೆ ಇಂತಹವುಗಳೆಲ್ಲಾ ಈ ಕಾಲದಲ್ಲೂ ವಿಚಿತ್ರವಾಗಿ ಕಾಣುತ್ತದಲ್ಲವೇ? ವಿದೇಶೀಯರಲ್ಲಿ ಸರ್ವೇ ಸಾಮಾನ್ಯವಲ್ಲವಾ" ಎಂದು.

ಅವರೆಲ್ಲಾ ಅವಳೊಂದಿಗೆ ನಕ್ಕಿದ್ದರು. ರೂಮು ಕೊಡಿಸಿದ ಗೆಳತಿ ಅಂದಳು.

"ಅಯ್ಯೋ ಅವರು ಹಾಗೇ ವತ್ಸಲ. ಐವತ್ತರ ಕನ್ಯೆಯನ್ನು ಯಾರಾದರೂ ಮದುವೆಯಾಗುವರುಂಟಾ? ನೀನು ಆ ಮನೆಗೆ ಬರುವ ಮುನ್ನ ಇದ್ದ ಮತ್ತೊಬ್ಬರೂ ಹೀಗೇ ಹೇಳಿದ್ದರು. ಬಹುಶಃ ಆಕೆ ಯಾರನ್ನಾದರೂ ಮದುವೆಯಾಗುವಂತೆ ಕೇಳಿಕೊಂಡಿರಬೇಕು. ಅವರು ಒಪ್ಪಿರಲಿಕ್ಕಿಲ್ಲ. ಈಗ ಮತ್ತಾರನ್ನಾದರೂ ಮದುವೆಯಾಗುವಂತೆ ಕೇಳಿರಬೇಕು"

ಎಲ್ಲಾ ಮತ್ತೊಮ್ಮೆ ನಕ್ಕಿದ್ದರು. ಅವರಿಗೆಲ್ಲಾ ತಮಾಷೆ ಮಾಡಿಕೊಂಡು ನಗುವ ವಿಷಯವಾಗಿ ಬಿಟ್ಟಿತ್ತು ಅದು.

ಸಾಯಂಕಾಲ ಅವಳು ಮನೆಗೆ ವಾಪಸು ಬಂದಾಗ ವಾಸಂತಿ ತನ್ನ ಪ್ರಿಯಕರನನ್ನು ಪರಿಚಯಿಸಿದ್ದರು. ನಿಜವಾಗಿಯೂ ಇನ್ನೆರಡು ತಿಂಗಳುಗಳಲ್ಲಿಯೇ ಅವರು ವಿವಾಹವಾಗುವರೆಂಬ ಸುದ್ದಿ ತಿಳಿದಾಗ ನಂಬದಿರಲು ಸಾಧ್ಯವಿಲ್ಲವಲ್ಲ. ವಾಸಂತಿಯ ಪ್ರಿಯಕರನನ್ನು ಅವಳು ಆ ಮೊದಲೇ ನೋಡಿದ್ದಳು. ತೆಳ್ಳಗಿನ ಶರೀರದ, ದಟ್ಟ ಮೀಸೆಯ, ಕೈಯಲ್ಲಿ ಸಿಗರೇಟ್ ಹಿಡಿದಿರುವ ಆ ವ್ಯಕ್ತಿಯನ್ನು ಅವಳು ಹಲವು ಬಾರಿ ಸಂಧಿಸಿದ್ದಳು.

ಮಲಗಿದ ಸ್ಥಳದಿಂದಲೇ ಕತ್ತೆತ್ತಿ ಅದೇ ವ್ಯಕ್ತಿಯೇ ಎಂದು ಖಚಿತ ಮಾಡಿಕೊಳ್ಳಲು ಪ್ರಯತ್ನಿಸಿದಳು ವತ್ಸಲ. ಕೆಳಗಿನ ಬರ್ತ್‌ನಲ್ಲಿ ಮಲಗಿದ್ದ ವ್ಯಕ್ತಿಯ ಮುಖ ಸ್ಪಷ್ಟವಾಗಿ ಕಾಣಲಿಲ್ಲ. ಬೆಳಗಾದ ಮೇಲೆ ನೋಡಬೇಕು ಎಂದುಕೊಂಡಳು.

ತಾನು ವಾಸಂತಿಯ ಮನೆಯಲ್ಲಿದ್ದುದು ಕೇವಲ ಮೂರು ತಿಂಗಳುಗಳಷ್ಟೇ. ತಾಯಿ ತಮ್ಮನ ಕೈಲಿ ಕಾಗದ ಬರೆಸಿದ್ದರು. "ಇಲ್ಲಿಯೇ ಯಾವುದೋ ಕೆಲಸ ಸಿಕ್ಕುವಂತಿದೆ. ಬಂದು ಬಿಡು" ಎಂದು. ತಾಯಿಯ ಮಾತಿಗೆ ಮನ್ನಣೆ ಕೊಟ್ಟು ವಾಪಸು ಹೋಗಬೇಕಾಯಿತು. ಹೀಗಾಗಿ ವಾಸಂತಿ ಮದುವೆಯಾದರೋ ಇಲ್ಲವೋ ತಿಳಿಯಲಿಲ್ಲ. ತಾನೂ ಅಲ್ಲಿಗೇ ಆ ವಿಷಯವನ್ನು ಮರೆತು ಬಿಟ್ಟೆ. ಇದೆಲ್ಲಾ ನಡೆದು ಈಗಾಗಲೇ ಐದಾರು ವರ್ಷಗಳೇ ಸಂದು ಹೋದುವಲ್ಲ.

'ಕಾಫಿ–ಚಾಯ್' ಎಂಬ ಕೂಗುಗಳ ನಡುವೆ ಅರ್ಧ ನಿದ್ದೆ, ಅರ್ಧ ಎಚ್ಚರದೊಡನೆ ಬೆಳಗು ಮೂಡಿತ್ತು. ವತ್ಸಲ ಕಣ್ಣುಜ್ಜಿಕೊಂಡು ಏಳುತ್ತಾ ವಾಸಂತಿಯತ್ತ ನೋಡಿ,

## ಪ್ರಪ್ರಥಮ ಅತ್ಯಾಚಾರದ ಮೊಕದ್ದಮೆ

*1741ರ ಫೆಬ್ರವರಿ 27ರಂದು ಎಲಿಜಬೆತ್ ಮಾನ್‌ಸೆಲ್ ಬ್ರಿಟಿಷ್ ಮಹಿಳೆ ಇಂಗ್ಲೆಂಡಿನಿಂದ ಭಾರತಕ್ಕೆ (ಮದರಾಸು) ಬರುವಾಗ ಹಡಗಿನಲ್ಲಿ, ಅದರ ಕ್ಯಾಪ್ಟನ್ ರಾಬರ್ಟ್ ಕಮ್ಮಿಂಗ್ ತನ್ನ ಮೇಲೆ ಅತ್ಯಾಚಾರ ಮಾಡಿದ ಎಂದು ಮೊಕದ್ದಮೆ ಹೂಡಿದಳು. ಈ ಮೊಕದ್ದಮೆಯ ವಿಚಾರಣೆ ನಡೆಯಿತಾದರೂ ನ್ಯಾಯಾಲಯ ರಾಬರ್ಟ್ ನಿರ್ದೋಷಿ ಎಂದು ತೀರ್ಪು ನೀಡಿತು. ಭಾರತದಲ್ಲಿ ಪ್ರಪ್ರಥಮ ನ್ಯಾಯಾಲಯದ ಕಟ್ಟೆ ಹತ್ತಿದ ಅತ್ಯಾಚಾರದ ಪ್ರಕರಣ ಇದು.*

"ಹಲೋ ಮೇಡಂ, ನೀವು ವಾಸಂತಿಯಲ್ಲವಾ?" ಅಂದಳು. ಅವಳ ದೃಷ್ಟಿ ಆ ಗಂಡಸು ವ್ಯಕ್ತಿಯ ಕಡೆಗೂ ಹರಿದಿತ್ತು. ತಾನು ಅಂದು ಸಂಧಿಸಿದ ವ್ಯಕ್ತಿಗೂ ಈ ವ್ಯಕ್ತಿಗೂ ಸಾಮ್ಯವೇ ಕಾಣಿಸುತ್ತಿಲ್ಲ ಅನಿಸಿತು ಅವಳಿಗೆ. ಟೂತ್ ಬ್ರಷ್‌ಗೆ ಪೇಸ್ಟನ್ನು ಹಾಕಿಕೊಳ್ಳುತ್ತಿದ್ದ ವಾಸಂತಿ ತಲೆ ಎತ್ತಿ ಒಂದು ಕ್ಷಣ ಮುಗ್ಧತೆಯಿಂದ ನೋಡಿದರೂ ಮರುಕ್ಷಣದಲ್ಲೇ ಜ್ಞಾಪಿಸಿಕೊಳ್ಳುತ್ತಾ ಹೇಳಿದರು.

"ಹ್ಞಾ, ಹೌದು. ನಾನು ವಾಸಂತಿಯೇ. ನೀವೂ ನಮ್ಮ ಮನೆಯಲ್ಲಿ ಒಂದೆರಡು ತಿಂಗಳು ಇದ್ದಿರಲ್ಲವೇ?"

"ಹೌದು"

ವಾಸಂತಿ ಮುಗುಳ್ನಕ್ಕರು. ತುಟಿಗೆ ಬಳಿದಿದ್ದ ಕೆಂಪು ಬಣ್ಣ ಅರ್ಧಮರ್ಧ ಮಾಸಿ ಹೋಗಿ ಆಕೆಯ ದಪ್ಪ ತುಟಿಯನ್ನು ಅಸಹ್ಯವಾಗಿ ಪ್ರದರ್ಶಿಸಿತು.

"ಅಂತೂ ಪರಿಚಯದವರೊಬ್ಬರು ನನಗೆ ಜೊತೆ ಸಿಕ್ಕಿದಂತಾಯಿತು" – ವತ್ಸಲ ತಾನೇ ಮಾತು ಬೆಳೆಸುತ್ತಾ ಹೇಳಿದಳು.

"ನೀವೇನು ದೆಹಲಿಯ ತನಕವೇ?" – ವಾಸಂತಿ ಕೇಳಿದರು.

"ಹೌದು. ನೀವು?"

"ನಾವೂ ಅಷ್ಟೆ. ನೀವು ಕೆಲಸದ ಮೇಲೆ ದೆಹಲಿಗೆ ಹೋಗುತ್ತಿದ್ದೀರಾ?"

ಇಲ್ಲ. ಸುಮ್ಮನೆ ಸುತ್ತಾಡಲು. ಇಲ್ಲಿಯೇ ಆಗ್ರಾ, ಹರಿದ್ವಾರ, ಹೃಷಿಕೇಶಗಳನ್ನು ನೋಡಿಕೊಂಡು ಹೋಗೋಣವೆಂದು ಬಂದಿದ್ದೇನೆ"

"ಒಬ್ಬರೇ?"

"ಹ್ಞು. ನನ್ನ ತಮ್ಮ ನನ್ನೊಡನೆ ಬರಬೇಕಾಗಿತ್ತು. ಕೊನೆಯ ಕ್ಷಣದಲ್ಲಿ ಅವನ ಪ್ರಯಾಣ ರದ್ದಾಯಿತು. ನಾನೊಬ್ಬಳೇ ಬಂದು ಬಿಟ್ಟೆ"

"ನಿಮ್ಮೊಬ್ಬರಿಗೆ ಅಲ್ಲೆಲ್ಲಾ ಸುತ್ತಾಡಲು ಸಾಧ್ಯವೇ?"

"ಓ. ನನ್ನನ್ನು ನಾನು ನೋಡಿಕೊಳ್ಳಬಲ್ಲೆ. ಕೆಲವು ಪರಿಚಿತರಿಗೆ ಕಾಗದ ಬರೆದಿದ್ದೇನೆ. ಅವರು ಸಹಾಯ ಮಾಡ್ತಾರೆ."

ವಾಸಂತಿ ಕುಳಿತಲ್ಲಿಂದ ಎದ್ದು ಮುಖಮಾರ್ಜನ ಮುಗಿಸಿಕೊಂಡು ಬಂದರು. ಅಟೆಂಡೆಂಟ್ ಫ್ಲಾಸ್ಕಿನಲ್ಲಿ ಚಾ ತುಂಬಿಸಿ ತಂದಿರಿಸಿದ್ದ.

ಕಾಫಿ ಕುಡಿಯುತ್ತಾ ವಾಸಂತಿ ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿಯತ್ತ ಬೆಟ್ಟು ಮಾಡಿ ಹೇಳಿದರು.

"ಇವರು ನನ್ನ ಯಜಮಾನರು. ಕಳೆದ ವಾರ ಮದುವೆ ಮಾಡಿಕೊಂಡೆವು. ಈಗ ಹನಿಮೂನಿಗೆಂದು ಸಿಮ್ಲಾಕ್ಕೆ ಹೊರಟಿದ್ದೇವೆ."

ವತ್ಸಲ ಮಾತಾಡಲಿಲ್ಲ. ಏನೆಂದು ಹೇಳಬೇಕು? ಮುದಿತನದಲ್ಲೇನು ನಿಮ್ಮ ಕಾಮಕೇಳಿ ಎನ್ನಬೇಕೆ? ವಾಸಂತಿಯ ಸ್ವಭಾವವೆಂತಹುದೋ ಆಕೆಗೆ ತಿಳಿಯದು. ಕೇವಲ ಒಂಟಿತನದಿಂದ ಬೇಸರ ಹೊಂದಿ ಮದುವೆ ಮಾಡಿಕೊಂಡರೆ? ಅಥವಾ ಕಾಮ ವೈಪರೀತ್ಯವೋ?

ವತ್ಸಲೆಗೆ ಒಂದು ಕ್ಷಣ ಅಳುಕುಂಟಾಯಿತು. ಮದುವೆಯಾಗಬಾರದೆಂಬ ತನ್ನ 'ದೃಢ ನಿಶ್ಚಯ'ವನ್ನು ಅಲ್ಲಾಡಿಸಿ ಬಿಡುವಂತಹ ಘಟನೆಯಿದು. ತನ್ನ ನೆನಪಿನಿಂದ ಪೂರ್ತಿಯಾಗಿ ಮರೆಯಾಗಿದ್ದ ವಾಸಂತಿ ಇದೀಗ ಪ್ರತ್ಯಕ್ಷಗೊಂಡು ತನ್ನನ್ನು ಎಚ್ಚರಿಸುತ್ತಿದ್ದಾರೆಯೇ? ಹಲವರ ನಗೆ ಪಾಟಲಿಗೆ ಗುರಿಯಾಗುವಂತಹ ಜೀವನ ತನ್ನದಾಗುತ್ತದೆಯೇ? ತಾನು ದೀರ್ಘಕಾಲ ಹೀಗೆಯೇ ಯಾವ ಗಂಡಸಿನ ಸಹವಾಸವೂ ಇಲ್ಲದೆ ಇರಬಲ್ಲೆನೇ?

ಹೆಂಡತಿ ಬೇರೊಬ್ಬಳೊಡನೆ ಮಾತನಾಡಲು ಪ್ರಾರಂಭಿಸುತ್ತಲೂ ಕಿಟಕಿಯಲ್ಲಿ ನೋಡುತ್ತಾ ಕುಳಿತಿದ್ದ ಆ ವ್ಯಕ್ತಿ ಹೆಂಡತಿಯ ಮಾತು ಕೇಳಿ ಕೈ ಜೋಡಿಸಿ 'ನಮಸ್ತೆ' ಅಂದರು. ವತ್ಸಲ ತಾನೂ ಕೈ ಜೋಡಿಸಿ 'ನಮಸ್ತೆ' ಅಂದಳು. ವತ್ಸಲ ಅವಿವಾಹಿತೆ ಎಂದರಿತ ವಾಸಂತಿ ಕೇಳಿದರು.

"ನೀವೇಕೆ ಇನ್ನೂ ಒಂಟಿಯಾಗಿದ್ದೀರಿ? ನಿಮಗೂ 25–26ರ ವರ್ಷಗಳಾಗಿರಬೇಕಲ್ಲವೇ?"

"ಇಪ್ಪತ್ತೆಂಟು ತುಂಬಿತು. ಇನ್ನೂ ಮದುವೆ ಯಾಗುವ ಮನಸ್ಸು ಮೂಡಿಲ್ಲ"

ಅವಳು ಇನ್ನೇನು ಹೇಳಬಲ್ಲಳು. ತಾನು ವೈವಾಹಿಕ ಜೀವನದಲ್ಲಿ ನಿರಾಸಕ್ತಳಾಗಿದ್ದೇನೆ ಎಂದು ಆಕೆ ನಂಬುವರೆ ಅಥವಾ ಆಜೀವ ಪರ್ಯಂತ ಬ್ರಹ್ಮಚಾರಿಣಿಯಾಗಿಯೇ ಇರುತ್ತೇನೆ ಎಂದು ಈಗಲೇ ಹೇಳಲು ಸಾಧ್ಯವೇ? ಹಾಗೆ ಹೇಳಿದರೆ ವಾಸಂತಿ ತನ್ನದೇ ಉದಾಹರಣೆಯನ್ನು ನೀಡಿ ಒಬ್ಬ ಹೆಂಗಸು ಹಾಗೆಲ್ಲಾ ಕಲ್ಪಿಸಿಕೊಳ್ಳಲು ಸಾಧ್ಯವೂ ಇಲ್ಲ ಎನ್ನಬಹುದು.

–(ಸಶೇಷ)

# ಪೀಚಾಗಿರುವ ಮಕ್ಕಳ ಸಮಸ್ಯೆ

ತಮ್ಮ ಮಗು ತೆಳ್ಳಗಿದೆ ಎಂದು ತಿಳಿದು ವೈದ್ಯರ ಸಲಹೆ ಪಡೆಯುವ ಮೊದಲೇ ತಾಯಿ ತಂದೆಯರು ಹಿಂಸೆ ಮಾಡಿ ಮಗುವಿಗೆ ಆಹಾರ ವನ್ನು ಬಲವಂತವಾಗಿ ಕೊಡಲು ಪ್ರಾರಂಭಿ ಸುತ್ತಾರೆ. ಹೀಗೆ ಮಾಡುವಾಗ ಮಗುವನ್ನು ಗದರಿಸುವುದು ಬೆದರಿಸುವುದೂ ಉಂಟು. ಸಂದರ್ಭಾನುಸಾರ ಮಗುವಿಗೆ ಆಸೆ ತೋರಿಸಿ ಮೋಸ ಮಾಡುವುದೂ ಉಂಟು. ಇನ್ನೊಂದು ತುತ್ತು ತಿಂದರೆ ಸಂಜೆ ಐಸ್ ಕ್ರೀಮೋ ಮತ್ತೊಂದೋ ಕೊಡಿಸುವುದಾಗಿ ಹೇಳಿ, ಸಂಜೆಯ ಹೊತ್ತಿಗೆ ಅದನ್ನು ಮರೆತು ಬಿಡು ವುದೂ ಉಂಟು.

ಇಂಥ ಸಂದರ್ಭದಲ್ಲಿ ಮಗುವನ್ನು ವೈದ್ಯರು ಪರೀಕ್ಷೆ ಮಾಡಿದರೆ ಮಗು ವಯಸ್ಸಿಗೆ ತಕ್ಕ ತೂಕವನ್ನು ಹೊಂದಿರುವುದನ್ನೂ ಆರೋಗ್ಯ ವಾಗಿಯೂ ಹರ್ಷವಾಗಿಯೂ, ಇರುವುದನ್ನು ನೋಡಬಹುದು. ಬೇರೆ ಬೇರೆ ವಯಸ್ಸಿನಲ್ಲಿ ವಯಸ್ಸಿಗೆ ತಕ್ಕ ತೂಕವಿರುವುದನ್ನು ಒಂದೇ ವಯಸ್ಸಿನ ಮಕ್ಕಳಲ್ಲಿ ಹಸಿವು ಹೆಚ್ಚು ಕಮ್ಮಿ ಇರುವುದನ್ನು ಮತ್ತು ಶರೀರದ ತೂಕ ವಂಶ ವಾಹಿಗಳ ಪ್ರಾಬಲ್ಯಕ್ಕೆ ಒಳಗಾಗಿರುವುದನ್ನು ತಾಯಿ ತಂದೆಗಳಿಗೆ ತಿಳಿಸಿ ಸಮಾಧಾನ ಪಡಿ ಸುವುದು ವೈದ್ಯರ ಕರ್ತವ್ಯ

ಶರೀರದ ತೂಕ ಮಕ್ಕಳಿಗೆ ವ್ಯತ್ಯಾಸವಿರು ತ್ತದೆ. ದೇಶದಿಂದ ದೇಶಕ್ಕೂ ಜನಾಂಗದಿಂದ ಜನಾಂಗಕ್ಕೂ ವಲಯದಿಂದ ವಲಯಕ್ಕೂ ಈ ವ್ಯತ್ಯಾಸ ಕಂಡುಬರುತ್ತದೆ. ನಿರ್ದಿಷ್ಟ ತೂಕಕ್ಕೆ ಶೇಕಡ 20ರಷ್ಟು ರಿಯಾಯತಿ ತೋರಿಸ ಬಹುದು. ಇದಕ್ಕಿಂತಲೂ ಹೆಚ್ಚು ಕಮ್ಮಿ ಇದ್ದ ಪಕ್ಷದಲ್ಲಿ ಸರಿಪಡಿಸಿಕೊಳ್ಳಬೇಕು. ತಂದೆತಾಯಿ ಗಳ ಆಕಾರವನ್ನು ಮಕ್ಕಳು ಹೋಲುವುದ ರಿಂದ ಮಕ್ಕಳ ತೂಕ ಪರೀಕ್ಷೆ ಮಾಡುವ ಕಾಲ ದಲ್ಲಿ ಇದನ್ನು ಗಮನದಲ್ಲಿಡಬೇಕು. ಅನೇಕ ವೇಳೆ ಮಗು ಸಾಕಷ್ಟು ಹಸಿವನ್ನು ಹೊಂದಿ ದ್ದರೂ ಸಾಕಷ್ಟು ನಿದ್ರೆ ಮಾಡುತ್ತಿದ್ದರೂ ತಾಯಿ-ತಂದೆಯರು ಮಗುವಿನ ಹಸಿವಿನ ಮತ್ತು ನಿದ್ರೆಯ ಬಗ್ಗೆ ಸಂಶಯ ತೋರಿ ಕೊರಗುವುದೂ ಉಂಟು.

ಮಗು ಹುಟ್ಟಿದ ಹತ್ತು ತಿಂಗಳ ತನಕ ಸಾಧಾರಣವಾಗಿ ದುಂಡು ದುಂಡಾಗಿಯೇ ಇರುತ್ತದೆ. ಸಾಕಷ್ಟು ಹಸಿವೂ ಇರುತ್ತದೆ. ಅಲ್ಲಿಂದ ಎರಡು ವರ್ಷ ಕಳೆಯುವವರೆಗೆ ಸ್ವಲ್ಪ ತೂಕ ಕಮ್ಮಿಯಾಗಿ ಸಣ್ಣದಾಗಿರುವ ಹಾಗೆ ಕಾಣಿಸಿಕೊಳ್ಳುತ್ತದೆ. ಈ ವೇಳೆಯಲ್ಲಿ ತಾಯಿ ಮಗುವಿನ ಪೋಷಣೆಗೆ ಗಮನ ಕೊಡು ತ್ತಾಳೆ. ಎರಡು ಮೂರು ವರ್ಷದಲ್ಲಿ ಹೊಟ್ಟೆ ಮುಂದೆ ಬರುವುದೂ ಉಂಟು. ಮೂರರಿಂದ ಐದು ವರ್ಷದ ತನಕ ತೂಕದಲ್ಲಾಗಲೀ ಎತ್ತರ ದಲ್ಲಾಗಲೀ ಹೆಚ್ಚು ವ್ಯತ್ಯಾಸ ಕಂಡುಬಾರ ದಿದ್ದರೂ ಸ್ವಲ್ಪ ಸಣ್ಣದಾಗಿಯೇ ಕಂಡು ಬಂದು ಎದೆ ಮೂಳೆಗಳು ಎದ್ದುಕಾಣುತ್ತವೆ. ಮುಂದೆ ಬಂದಿದ್ದ ಹೊಟ್ಟೆ ಈ ವಯಸ್ಸಿನಲ್ಲಿ ಕಮ್ಮಿಯಾಗು ವುದುಂಟು. ಆರನೇ ವರ್ಷದಿಂದ ಹರೆಯ ಬರುವ ತನಕ ವರ್ಷ ಒಂದಕ್ಕೆ 30ಗ್ರಾಂ ತೂಕ 6 ಸೆಂಟಿಮೀಟರ್ ಎತ್ತರ ಹೆಚ್ಚುವುದು ಕಂಡುಬರುತ್ತದೆ. ಹುಡುಗಿಯರಲ್ಲಿ 12ನೇ ವಯಸ್ಸಿನಲ್ಲಿ ತಟಕ್ಕನೆ ಬೆಳವಣಿಗೆ ರಭಸದಿಂದ ಚಿಮ್ಮುವುದು. ಆದರೆ ಹುಡುಗರಲ್ಲಿ ಸ್ವಲ್ಪ ನಿಧಾನ. 14ನೇ ವಯಸ್ಸಿನಲ್ಲಿ ಹುಡುಗ ತನ್ನ ನಿರ್ದಿಷ್ಟ ತೂಕವನ್ನು ಎತ್ತರವನ್ನು ಹೊಂದು ತ್ತಾನೆ.

ಅನೇಕ ತಂದೆ ತಾಯಿಯರು ಮಗುವಿನ ಕಮ್ಮಿ ಬೆಳವಣಿಗೆಗೆ ಮಗುವಿನ ಓಡಾಟ ಮತ್ತು ಯೋಜನೆಗಳೇ ಕಾರಣ ಎಂದು ತಿಳಿದಿ ರುತ್ತಾರೆ. ಜನನವಾದಾಗ ಮಗುವಿನ ತೂಕ 2.5ರಿಂದ 4 ಕಿಗ್ರಾಂ ಸಾಧಾರಣವಾಗಿರುತ್ತದೆ. ಹುಟ್ಟಿದಾಗ ಇದಕ್ಕಿಂತಲೂ ಕಮ್ಮಿ ಇದ್ದರೆ ನಿರ್ದಿಷ್ಟ ತೂಕವನ್ನು ಹೊಂದಬೇಕಾದರೆ ಬಹಳ ದಿವಸಗಳಾಗುತ್ತವೆ. ಆಹಾರ ಕೊಡುವ ವಿಧಾನದಲ್ಲಿ ತಪ್ಪಿದರೆ ಮಗುವಿನ ತೂಕ ಏರುವುದಿಲ್ಲ. ಎಳೆಮಕ್ಕಳು ಒಂದೊಂದು ವೇಳೆ ತಾಯಿ ಮೊಲೆತೊಟ್ಟನ್ನು ನಾಲಿಗೆಯ ಮೇಲೆ ಇಟ್ಟರೆ ಹಾಲು ಕುಡಿಯುವುದಿಲ್ಲ. ಇದು ತಾಯಿಯ ಗಮನಕ್ಕೆ ಬಾರದೆ ಮಗುವು ಕ್ಷೀಣ ಹೊಂದುತ್ತದೆ. ಸುಮಾರು ಒಂಬತ್ತು ತಿಂಗಳಿಂದ ಎರಡು ವರ್ಷ ಮುಗಿಯುವ ತನಕ ಸಾಮಾನ್ಯವಾಗಿ ಮಕ್ಕಳಿಗೆ ತಂದೆತಾಯಿ ಯರ ಮೇಲೆ ಪೂರ್ಣ ಅಧಿಕಾರ ಇದೆ ಯೆಂದು ತಿಳಿವಳಿಕೆ ಉಂಟಾಗುತ್ತದೆ. ಈ ಅಹಂಭಾವದಿಂದ ನಿರಾಕರಿಸುವ ಮತ್ತು ವಿರೋ ಧಿಸುವ ಗುಣಗಳನ್ನು ಪಡೆಯುತ್ತದೆ. ಇದರಲ್ಲಿ ಆಹಾರ ನಿರಾಕರಿಸುವುದೂ ಒಂದು ಗುಣ. ಇದನ್ನು ತಿಳಿಯದೆ ತಂದೆ ತಾಯಿಗಳು ಕನಿ ಕರದಿಂದ ಮಗುವನ್ನು ಆಹಾರ ತೆಗೆದುಕೊಳ್ಳ ವಂತೆ ಪುಸಲಾಯಿಸಲು ಪ್ರಾರಂಭಿಸುತ್ತಾರೆ. ಅನೇಕರು ಪುಸಲಾಯಿಸುದರಿಂದ ಪ್ರಯೋಜನ ವಾಗದೆ ಹೋದರೆ ದೂಷಿಸುವುದೂ ಉಂಟು.

ಒಂದೊಂದು ವೇಳೆ ತಟ್ಟೆ ತುಂಬ ಆಹಾರ ಇಟ್ಟು ಊಟ ಮಾಡಬೇಕೆಂದು ಬೇಡುತ್ತಾರೆ. ಈ ಅಪರಿಚಿತ ಪ್ರಮಾಣವನ್ನು ನೋಡಿದ ಕೂಡಲೇ ಅಸಹ್ಯಪಟ್ಟು ಮಗು ತಲೆ ಅಲ್ಲಾಡಿಸಿ ಬೇಡವೆನ್ನುತ್ತದೆ. ಇಲ್ಲೇ ತಂದೆ ತಾಯಿಯರ ತಾಳ್ಮೆ ಪರೀಕ್ಷೆಗೆ ಬರುವುದು. ಬುದ್ಧಿವಂತರು ಸ್ವಲ್ಪ ಸ್ವಲ್ಪ ಬಣ್ಣ ಬಣ್ಣದ ತಿಂಡಿಯನ್ನು ಕೊಟ್ಟು ಮಗುವನ್ನು ತಮ್ಮಂತೆ ಮಾಡಿಕೊಳುತ್ತಾರೆ. ಹಾಗೂ ಮಗು ತಿಂಡಿ ಯನ್ನು ನಿರಾಕರಿಸಿದರೆ ಪೀಡಿಸದೆ ಗಡಿಬಿಡಿ ಮಾಡದೆ ತಿಂಡಿಯನ್ನು ಹಿಂದಕ್ಕೆ ತೆಗೆದು ಕೊಳ್ಳುವುದರಿಂದ ಅನೇಕ ವೇಳೆ ತಂದೆ ತಾಯಿಯರೇ ಗೆಲ್ಲುತ್ತಾರೆ. ಆದರೆ ಊಟದ ಮಧ್ಯೆ ಮಾತ್ರ ಯಾವಾಗಲೂ ಪ್ರೀತಿ ಬೆಳೆಸ ಲು ತಿಂಡಿ ಕೊಡಬಾರದು. ಬಳಲೆಯಲ್ಲಿ ಹಾಲು ಕೊಡುವ ವಿಧಾನ ಇನ್ನೂ ಕೆಲವ ರಲ್ಲಿರ ಬಹುದು. ಶೀಶೆಯ ಹಾಲೇ ಸರ್ವೇಸಾ ಮಾನ್ಯ ರೂಢಿಯಲ್ಲಿರುವ ವಿಧಾನ. ತಾಯಿ ಸಾಮಾನ್ಯವಾಗಿ ಮಗು ಅಳುತ್ತಿದ್ದರೂ ಕೂಡಾ ಒತ್ತಾಯ ಮಾಡಿ ಕುಡಿಸಿದ ಹಾಲು ತಕ್ಷಣವೇ ವಾಂತಿಯಾಗಲೂಬಹುದು. ಈ ಕಾರಣಗಳೆಲ್ಲಾ ಎರಡು ವರ್ಷದವರೆಗೂ ಕಾಣುತ್ತದೆ. ಕಿಂಡರ್ ಗಾರ್ಡನ್ ಪ್ರಾಥಮಿಕ ಶಾಲೆಗೆ ಹೋಗುವ ಮಕ್ಕಳಲ್ಲಿ ಬೇರೆ ರೀತಿಯ ಕಾರಣಗಳಿರುತ್ತದೆ. ಹುಟ್ಟಿನಿಂದ ಬಂದ ಹೃದಯ ಖಾಯಿಲೆಗಳು, ರುಮ್ಯಾಟಿಕ್ ಹೃದಯ ಖಾಯಿಲೆಗಳು, ಶ್ವಾಸಕೋಶದ ಖಾಯಿಲೆಗಳು, ಮೂತ್ರ ಪಿಂಡದ ಸೋಂಕುಗಳು - ಇವೆಲ್ಲಾ ನಮ್ಮ ದೇಶದಲ್ಲಿ ಹೆಚ್ಚು ಹೆಚ್ಚಾಗಿ ಕಾಣುತ್ತಲೇ ಇವೆ. 'ಲಸಪಾಕ' ಎಂಬ ಬಾಯಿಹುಣ್ಣು ನೋವುಂಟು ಮಾಡುವುದರಿಂದ ಮಗು ಆಹಾರ ತೆಗೆದು ಕೊಳ್ಳಲು ಅಂಜುತ್ತದೆ. ಕೆಲವು ವೇಳೆ ನಾಯಿ ಕೆಮ್ಮಿನಿಂದುಂಟಾಗುವ ವಾಂತಿ ಬಹಳ ದಿವಸ ನಿಂತರೆ ದೇಹಬಲ ಕಡಿಮೆಯಾಗುವುದು ಸಹಜ.

ಕರುಳುಗಳಿಂದ ಆಹಾರ ಸರಿಯಾಗಿ ರಕ್ತಕ್ಕೆ ಸೇರದಿರುವುದರಿಂದಲೂ ಬೆಳವಣಿಗೆ ಕಮ್ಮಿ ಯಾಗುತ್ತದೆ. ಈ ಖಾಯಿಲೆಯಲ್ಲಿ ಅಂಡು ಸಣ್ಣಾಗಾಗುವುದು ಮತ್ತು ಹೊಟ್ಟೆ ಮುಂದೆ ಬರುವುದು. ಇದನ್ನು "ಸಿಲಿಯಕ್" ಖಾಯಿಲೆ ಎಂದು ಕರೆಯುತ್ತಾರೆ.

ಬೈಯ್ಯುವುದರಿಂದ, ಶಿಕ್ಷೆಗೆ ಗುರಿ ಮಾಡು ವುದರಿಂದ, ಹೆಚ್ಚು ವಿಶ್ವಾಸ ತೋರಿಸುವುದ ರಿಂದ ಒಂದೊಂದು ವೇಳೆ ಮನೋವಿಕಾರ ಉಂಟಾಗಿ ಆರೋಗ್ಯ ಕಮ್ಮಿಯಾಗುತ್ತದೆ.

ಜಠರದಿಂದ ಮುಂಗರುಳಿಗೆ ಹೋಗುವ ದಾರಿ ಕಿರಿದಾಗಿರುವಾಗಲೂ ಸಿಹಿ ಮೂತ್ರ ಖಾಯಿಲೆಯಲ್ಲೂ ಮತ್ತು ನಿರ್ನಾಳ ಗ್ರಂಥಿ ಗಳ ಖಾಯಿಲೆಯಲ್ಲೂ ಶರೀರ ನಿರ್ದಿಷ್ಟ ರೀತಿ ಯಲ್ಲಿ ಬೆಳೆಯುವುದಿಲ್ಲ. ಮುಖ್ಯವಾಗಿ ನಮ್ಮ ದೇಶದಲ್ಲಿ ಸರಿಯಾದ ಸಮತೂಕದ ಆಹಾರ ಇಲ್ಲದಿರುವುದೇ ಈ ದೌರ್ಬಲ್ಯಕ್ಕೆ ಮುಖ್ಯ ಕಾರಣ.

—ಉಷಾ ಕವರಗಾನಹಳ್ಳಿ

# ಕನಸಿನ ಮನೆಯತ್ತ... ಮೂರು ಹಂತ.




# ಇದೀಗ ಯುನಿಟ್ ಟ್ರಸ್ಟ್ ತಂದಿರುವ ಅನನ್ಯ ಹೌಸಿಂಗ್ ಯೋಜನೆ.

ಎಚ್‌ಡಿಎಫ್‌ಸಿ ಹೌಸಿಂಗ್ ಸಾಲಕ್ಕೆ ಅರ್ಹತೆಯನ್ನೀಯುವ ಯುನಿಟ್ ಟ್ರಸ್ಟ್ ಯೋಜನೆಯೊಂದರಲ್ಲಿ ನೀವೀಗ ಧನ ವಿನಿಯೋಗಿಸಬಲ್ಲಿರಿ. ಅಷ್ಟೇ ಅಲ್ಲ, 10 ವರ್ಷಗಳ ಅವಧಿಯಲ್ಲಿ ಬಡ್ಡಿ ಸಮೇತವಾಗಿ ಸಾಲವನ್ನು ಮರುಪಾವತಿ ಮಾಡುವ ಜವಾಬ್ದಾರಿಯನ್ನೂ ಯುನಿಟ್ ಟ್ರಸ್ಟ್ ಹೊರುತ್ತದೆ.

**ಈ ಯೋಜನೆ ಹೇಗೆ ಕೆಲಸ ಮಾಡುತ್ತದೆ?**

ಯುನಿಟ್ ಟ್ರಸ್ಟ್ ಮತ್ತು ಎಚ್‌ಡಿಎಫ್‌ಸಿ ಒಂದಾಗಿ ಅಂಗೀಕರಿಸಿದ ಒಪ್ಪಂದದ ಪ್ರಕಾರ, ಯುನಿಟ್ ಟ್ರಸ್ಟ್‌ನ ಈ ಯೋಜನೆಯಲ್ಲಿ ನೀವು ಹಣ ತೊಡಗಿಸಿದ ನಾಲ್ಕು ವರ್ಷಗಳ ನಂತರ ಆ ಮೊಬಲಗಿನ ಮೂರು ಪಟ್ಟನ್ನೂ ಏಳು ವರ್ಷಗಳ ನಂತರ ನಾಲ್ಕು ಪಟ್ಟನ್ನೂ ಎಚ್‌ಡಿಎಫ್‌ಸಿಯಿಂದ ಸಾಲ ಪಡೆಯಬಲ್ಲಿರಿ.

ಈ ಯೋಜನೆಯು ಮುಖಾಂತರ ಸಂಗ್ರಹಿಸಿದ ಮೊತ್ತವನ್ನು ಯುಟಿಐ ವಿವಿಧ ಪೋರ್ಟ್‌ಫೋಲಿಯೋಗಳಲ್ಲಿ ವಿನಿಯೋಗಿಸುತ್ತದೆ.

* ಯುನಿಟ್ ಟ್ರಸ್ಟ್‌ನ ಧ್ಯೇಯವೆಂದರೆ ಮೂಲಧನ ವೃದ್ಧಿಯಿಂದಲೇ ಬಡ್ಡಿ ಸಮೇತ ಸಾಲ ಮರುಪಾವತಿಯಾಗುವಂತೆ ನೋಡಿಕೊಳ್ಳುವುದು. ಒಂದು ಪಕ್ಷ ಅದು ಕಡಿಮೆ ಬಿದ್ದರೆ ವಿನಿಯೋಗದಾರರು ವ್ಯತ್ಯಾಸದ ಮೊಬಲಗನ್ನು ತೆರಬೇಕಾಗುವುದು. ಅದಲ್ಲದೆ ವೃದ್ಧಿಯ ಮೊತ್ತ ಹೆಚ್ಚಾದರೆ ಅದನ್ನು ವಿನಿಯೋಗದಾರರಿಗೇ ನೀಡಲಾಗುವುದು.




**ಯೋಜನೆಯ ವೈಶಿಷ್ಟ್ಯಗಳು :**

- ಎಲ್ಲಾ ವ್ಯಕ್ತಿಗಳಿಗೂ ಎನ್‌ಆರ್‌ಐಗಳಿಗೂ ಯೋಜನೆ ತೆರೆದಿದೆ.
- ಕನಿಷ್ಠತಮ ವಿನಿಯೋಗ ರೂ. 2000 (ರೂ. 100ರ ಮುಖ ಬೆಲೆಯ 20 ಯುನಿಟ್‌ಗಳು) ಮತ್ತು ಅನಂತರ ರೂ. 1000ದ ಗುಣಾಕಾರದಲ್ಲಿ. ಗರಿಷ್ಠ ಮಿತಿ ಇಲ್ಲ.
- ಯುನಿಟ್‌ಗಳ ಮಾರಾಟದ ಹಾಗೂ ಮರು ಖರೀದಿಯ ಬೆಲೆಗಳು ನೆಟ್ ಎಸೆಟ್ ವ್ಯಾಲ್ಯುವನ್ನು ಅನುಸರಿಸುತ್ತದೆ.
- ಅತಿ ವಿಶೇಷ ಸಂದರ್ಭಗಳ ಹೊರತಾಗಿ, ಐದು ವರ್ಷಗಳ ವರೆಗೆ ಮರುಖರೀದಿ ಸಾಧ್ಯವಿಲ್ಲ.
- ಹೌಸಿಂಗ್ ಸಾಲಗಳ ಗರಿಷ್ಠ ಮಿತಿ ರೂ. 5 ಲಕ್ಷ. ಸಾಲದ ಅವಧಿ ಹತ್ತು ವರ್ಷಗಳು.
- ಯಾವುದೇ ಡಿವಿಡೆಂಡ್ ಘೋಷಿಸಲಾಗದು. ಗಳಿಕೆಯನ್ನು ಮೂಲಧನ ವೃದ್ಧಿಗೆ ಸೇರಿಸಲಾಗುತ್ತದೆ ಮತ್ತು ಬಡ್ಡಿ ಸಮೇತ ಸಾಲ ಮರುಪಾವತಿಗೆ ಉಪಯೋಗಿಸಲಾಗುತ್ತದೆ.

ಉಚಿತವಾದ ಹಸ್ತಪುಸ್ತಿಕೆಗಾಗಿ ಯಾವುದೇ ಯುನಿಟ್ ಟ್ರಸ್ಟ್ ಆಫೀಸು, ಪ್ರಮುಖ ಪ್ರತಿನಿಧಿ, ಏಜಂಟ್ ಅಥವಾ ಎಚ್‌ಡಿಎಫ್‌ಸಿ ಆಫೀಸನ್ನು ಸಂಪರ್ಕಿಸಿರಿ.



**ಯುನಿಟ್ ಟ್ರಸ್ಟ್ ಆಫ್ ಇಂಡಿಯಾ**

ಎರಡೂ ಕೋಟಿಗೂ ಮೀರಿದ ಯುನಿಟ್‌ದಾರರ ಸೇವೆಯಲ್ಲಿ

## ಯುಟಿಐ ಮತ್ತು ಎಚ್·ಡಿ·ಎಫ್·ಸಿ ಯ ಸಂಯುಕ್ತ ಯೋಜನೆ.

ಹೌಸಿಂಗ್ ಡೆವಲಪ್‌ಮೆಂಟ್ ಫೈನಾನ್ಸ್ ಕಾರ್ಪೊರೇಷನ್ ಲಿಮಿಟೆಡ್

ಎಲ್ಲಾ ಭದ್ರತೆ ಬಂಡವಾಳಗಳ ಮೇಲೆ ಮಾರುಕಟ್ಟೆಯ ಪ್ರಭಾವ ಇದ್ದೇ ಇದೆ. ವಿವರಗಳಿಗಾಗಿ ಹಸ್ತಪುಸ್ತಿಕೆ ಓದಿರಿ ಮತ್ತು ಹಣ ತೊಡಗಿಸುವ ಮೊದಲು ನಿಮ್ಮ ಬಂಡವಾಳ ಸಲಹೆಗಾರರನ್ನು ಅಥವಾ ಏಜಂಟರನ್ನು

**Branch Offices:** • Bangalore Ph: 263739 • Hubli Ph: 51098

Sista's UTI 1969 92 KN A

## ನಿಬಂಧನೆಗಳು

ಮಹಿಳೆಯರ ಸ್ಮರಣ ಶಕ್ತಿಗೆ ಹೊಸ ಹುರುಪನ್ನೊದಗಿಸಿ, ಪರಿಮಿತ ಚೌಕಟ್ಟಿನಲ್ಲಿ ಬೇರೆ ಬೇರೆ ವಿಷಯಗಳ ಕಿರು ಪರಿಚಯ ನೀಡುವ ವನಿತಾ ಪದಸಂಪದ ಶಬ್ದ ಸಂಪತ್ತಿಗೆ ಒಂದು ಪರೀಕ್ಷೆ ಕೂಡ. ಮನರಂಜನೆಯೊಂದಿಗೆ ಮನೋವಿಕಾಸಕ್ಕೂ ಸಹಾಯಕವಾಗಿರುವ, ಮಹಿಳೆಯರು ಮಾತ್ರ ಪಾಲ್ಗೊಳ್ಳಲು ಅವಕಾಶವಿರುವ ವಿಶಿಷ್ಟ ಸ್ಪರ್ಧೆ.

ಆಧಾರಗಳನ್ನು ಅನುಸರಿಸಿ ನಿಮ್ಮ ಉತ್ತರಗಳನ್ನು ಪಕ್ಕದ ವನಿತಾ ಪದಸಂಪದ ಚೌಕದಲ್ಲಿ ಭರ್ತಿ ಮಾಡಿ 1992ರ ನವೆಂಬರ್ 25ನೇ ದಿನಾಂಕದೊಳಗೆ "ವನಿತಾ ಪದಸಂಪದ 51, ಚಂದಮಾಮ ಬಿಲ್ಡಿಂಗ್ಸ್, ಮದರಾಸು – 600 026" ಈ ವಿಳಾಸಕ್ಕೆ ಕಳುಹಿಸಿರಿ. ಉತ್ತರ ವನಿತಾ ಪದಸಂಪದ ಚೌಕದಲ್ಲಿರಬೇಕಾದುದು ಅವಶ್ಯ. ಸರಿಯಾದ ಉತ್ತರಕ್ಕೆ ಬಹುಮಾನ.

ಲಕೋಟೆಯಲ್ಲಿ "ವನಿತಾ ಪದಸಂಪದ" ಚೌಕದ ಹೊರತು ಬೇರೇನೂ ಇರಕೂಡದು. ಒಂದು ಲಕೋಟೆಯಲ್ಲಿ ಒಂದೇ ಪ್ರವೇಶಿಕೆ ಇರಬೇಕು. ಚೌಕಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿ ತಿಳಿಯುವಂತಿದ್ದು ಚಿತ್ತುಗಳೂ, ತಿದ್ದುಪಡಿಗಳೂ ಇರಬಾರದು. ಇದರ ಸರಿಯಾದ ಉತ್ತರವನ್ನು 1993ರ ಜನವರಿ 'ವನಿತಾ'ದಲ್ಲಿ ಪ್ರಕಟಿಸಲಾಗುತ್ತದೆ. ನಮ್ಮಲ್ಲಿರುವ ಉತ್ತರಗಳಿಗೆ ಸರಿಹೊಂದುವ ಉತ್ತರ ಕಳಿಸಿದವರಿಗೆ ರೂ. 250/– ಬಹುಮಾನ ನೀಡಲಾಗುತ್ತದೆ. ಸರಿಯಾದ ಉತ್ತರ ಕಳುಹಿಸಿದವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದ್ದರೆ ಬಹುಮಾನದ ಹಣವನ್ನು ಹಂಚಲಾಗುತ್ತದೆ. ಹಾಗೂ ಬೇರೆ ಯಾವುದೇ ರೀತಿಯ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸಂಪಾದಕ ವರ್ಗಕ್ಕಿದ್ದು ಈ ವಿಷಯದಲ್ಲಿ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. 'ವನಿತಾ'ದಲ್ಲಿ ಕೆಲಸ ಮಾಡುವವರಾಗಲಿ ಅವರಿಗೆ ಸಂಬಂಧಿಸಿದವರಾಗಲಿ ಇದರಲ್ಲಿ ಭಾಗವಹಿಸುವಂತಿಲ್ಲ.

# ವನಿತಾ ಪದಸಂಪದ

ರೂ 250 ಬಹುಮಾನ!

# 51




ಹೆಸರು : ______________________

ವಿಳಾಸ : ______________________

______________________

______________________

### ಎಡದಿಂದ ಬಲಕ್ಕೆ

2. ಈ ನಾಡಿನಲ್ಲಿ ಈ ತಿಂಗಳಿಡೀ ಆಚರಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳ ಹಬ್ಬ (7)
6. ಬರೀ ರೋಡನ್ನೇ ಹೊಂದಿರುವ ನಗರ (3)
8. ದಶರಥನ ಸೊಸೆ ಈಗ ಗಾಯಕಿ (3)
10. ಕೈಯಿಂದಲೇ ಪರಚುವ ಕಾಡು ಪ್ರಾಣಿ (3)
11. ಕೊರಳಿನಲ್ಲಿ ರತ್ನವನ್ನು ಇಟ್ಟುಕೊಂಡ ಈಶ್ವರ (4)
13. ಮಂಗಳವಾದದ್ದು ಕೈಯನ್ನು ಹೊಂದಿದೆ (4)
16. ಕಲಸಿ ನಾದಿದ ಹಿಟ್ಟು ಕಣದಲ್ಲಿ ಸಿಗುತ್ತದೆ (3)
18. ಅದೃಷ್ಟವನ್ನು ಬರೆಯುವ ನಿಯಮ (2)
19. ದಿನ ಬರುವ ಬಡವ ತಿರುಗಿದ್ದಾನೆ (2)
20. ಬೇಯಿಸದ ಅಕ್ಕಿ ತಿರುಗಿದೆ (2)
21. ಹೂವು, ಹಣ್ಣಿನ ಗೊಂಚಲು (2)
23. ಮಹಂತರು ವಾಸಿಸುವ ಉಪ್ಪರಿಗೆ (3)
26. ಒಂಬತ್ತು ಮಣಿಗಳಿಂದ ಕೂಡಿದೆ (4)
28. ಮಾಲೆ ಧರಿಸಲು ಆದ ಆತುರ (4)
30. ಸಾರವನ್ನೆಲ್ಲಾ ಹೊಂದಿದ ಸಮುದ್ರ (3)
31. ವಿನಾಯಕನ ಹೆಸರಿನಲ್ಲಿ ಬಂದ ಲೆಕ್ಕ ಹಾಕುವಾತ (3)
33. ಚುಂಬಿಸುವ ಆಕರ್ಷಣೆ (3)
35. ಹೊಚ್ಚ ಹೊಸದಾದ ನಿಯತ ಕಾಲಿಕ (7)

### ಮೇಲಿನಿಂದ ಕೆಳಕ್ಕೆ

1. ಪ್ರತಿರೂಪವನ್ನು ಹೊಂದಿದ ವಿಗ್ರಹ (2)
2. ಕಡಗ ತೊಟ್ಟು ತಂದ ಸಾಲ (2)
3. ಇಂತಹವಳ ಪತಿ ಎಂದು ಗುರುತಿಸಲ್ಪಡುವ ಯದುಕುಲನಂದನ (5)
4. ಜಾವ ಗಾಡಿ ಓಡಿಸಿದ್ದಕ್ಕೆ ಕೆಲಸದಿಂದ ಹೊರದೂಡಲ್ಪಟ್ಟಿದ್ದು ಹೀಗೆ (2)
5. ಎಲ್ಲವನ್ನೂ ಸ್ವಾಹ ಮಾಡುವ ಅಗ್ನಿ (2)
7. ಬೆಟ್ಟದಂತಹ ಈಕೆ ನಕ್ಷತ್ರಗಳಲ್ಲಿ ಒಬ್ಬಾಕೆ (3)
9. ದೇಹದ ಮಧ್ಯ ಭಾಗದಿಂದ ಆರಂಭವಾದ ಕಂಪನ (3)
11. ಚಿತ್ತಕ್ಕೆ ಸಂಬಂಧಿಸಿದ ವಿಶೇಷ ಜ್ಞಾನಶಾಸ್ತ್ರ (5)
12. ಎಳೆಯ ಮಗು (2)
14. ಜೋಪಾನ ಮಾಡುತ್ತಾ ಬಂದವರಿವರು (2)
15. ಕಳುಹಿಸುವವನ ಕೈಯಲ್ಲಿ ರವೆಯೂ ಇದೆ, ನೂಲೂ ಇದೆ (5)
16. ಕದಿಯಲು ಬಂದ ಪ್ರಚಂಡ (3)
17. ಕನ್ನ ಕೊರೆದ ದರ್ಪಣ (3)
22. ಪರಾಕ್ರಮವನ್ನು ಹೊಂದಿದಾತ (2)
24. ಮಳೆಯ ತುಂತುರಿನಂತೆ ಬರೆದ ಪದ್ಯ (5)
25. ಅಕ್ಕನ ಮಗಳನ್ನು ಮದುವೆಯಾದವನಿಗೆ ಹೆಂಡತಿಯ ಅಪ್ಪ (2)
27. ಋಣ ತೀರಿಸಲು ಮಳೆ ಸುರಿಸುವಾತ (3)
29. ಮಾಲೆ ತೊಟ್ಟುಕೊಂಡ ಲಲಿತ ಸುಂದರಿ (3)
31. ಗರಡಿ ಮನೆಯ ಎಲ್ಲೆ (2)
32. ಕತ್ತರಿ ವಿಧಾನ ಕಲಿಯದ ಲೇಖಕ (2)
33. ಬೇಸಿಗೆಯಲ್ಲಿ ಆಗುವ ಹಿಂಸೆ (2)
34. ಆತನು ಹೊಂದಿದ ದೇಹ (2)

—ಮಲ್ಲಿಕಾ ಪ್ರಹ್ಲಾದ್

ತಿಂಗಳ ಮೊದಲ ವಾರ. ಬ್ಯಾಂಕಿನಲ್ಲಿ ತುಂಬಾ ರಷ್ ಇತ್ತು. ಎಲ್ಲರಿಗೂ ಕೈ ತುಂಬಾ ಕೆಲಸ. ರಕ್ಷಾ ಪ್ರಭು ತನ್ನ ಕೆಲಸದಲ್ಲಿ ತಲ್ಲೀನಳಾಗಿದ್ದಳು. ಹಿಂದಿನ ದಿನ ಬ್ಯಾಂಕಿಗೆ ರಜವಿದ್ದುದರಿಂದ ಮರುದಿನವೂ ರಜವಾದುದರಿಂದ ವಿಪರೀತ ಗಲಾಟೆ. ಲೆಡ್ಜರ್‌ನಲ್ಲಿ ಎಂಟರ್ ಮಾಡುತ್ತಿದ್ದ ಅವಳ ಕೈಗಳು ಪಕ್ಕದಲ್ಲಿ ಯಾರೋ ಬಂದು ನಿಂತಂತೆ ಆದುದರಿಂದ ಒಮ್ಮೆಲೇ ಸ್ತಬ್ಧವಾಯಿತು.

"ಮೇಡಮ್...., ಈ ಪಾಸ್ ಬುಕ್ ಸ್ವಲ್ಪ ಎಂಟರ್ ಮಾಡಿಕೊಡುತ್ತೀರಾ..." ಮಾತಿನಲ್ಲಿ ಗತ್ತು.

ರಕ್ಷಾಳಿಗೆ ರೇಗಿತು. ತಾನು ಗಡಿಬಿಡಿಯಲ್ಲಿ ಒದ್ದಾಡುತ್ತಿದ್ದೇನೆ. ಈಗ ಪಾಸ್ ಬುಕ್ ಎಂಟ್ರಿಯೇ? ಅದೂ ತನ್ನ ಪಕ್ಕದಲ್ಲಿಯೇ ಬಂದು ನಿಂತು ಕೇಳಲು ಅವನಿಗೆ ಎಷ್ಟು ಧೈರ್ಯ! ಅವಳು ಮೊದಲೇ [illegible] ಮೈಂಡೆಡ್. ಇಂದು ಕೋಪವೂ ಸೇರಿತ್ತು. ಅಂದ ಮೇಲೆ ಕೇಳಬೇಕೇ?

'ರೀ... ಯಾರ್ರೀ... ನಿಮ್ಮನ್ನ ಒಳಗಡೆ ಬಿಟ್ಟಿದ್ದು? ಮೊದಲು ಕೌಂಟರ್ ಹೊರಗೆ ಹೋಗಿ ನಿಲ್ಲಿ. ಆಮೇಲೆ ಮಿಕ್ಕ ವಿಚಾರ" ರೇಗಿದಳು.

'ರೀ... ಮೇಡಮ್. ನೀವು ಹೊಸಬರಿರಬೇಕು. ಹಿಂದೆ ಇದ್ದವರು ಹೀಗೆಯೇ ಮಾಡುತ್ತಿದ್ದುದು. ನಿಮ್ಮ ಆಫೀಸರ್‌ನ್ನೇ ಕೇಳಿ ಬೇಕಾದರೆ. ಕಸ್ಟಮರ್ಸ್ ಜೊತೆ ಪೊಲೈಟ್ ಆಗಿ ಬಿಹೇವ್ ಮಾಡೋದನ್ನ ನೀವು ಕಲಿಯಿರಿ ಮೊದಲು" ಕಸ್ಟಮರ್ ತಿರುಗಿ ನುಡಿದ.

ರಕ್ಷಾ ಸ್ವಾಭಿಮಾನಿ. ಕಸ್ಟಮರ್ ಒಬ್ಬ ತನಗೇ ನೀತಿ ಹೇಳುವುದೆಂದರೆ? ತಿರುಗಿ ಬೀಳುವುದೆಂದರೆ?

"ಮಿಸ್ಟರ್... ಮೊದಲು ನೀವು ಕೌಂಟರ್‌ನ ಹೊರಗೆ ನಿಲ್ಲಿ. ನಾಳೆ ಏನಾದರೂ ಹೆಚ್ಚು ಕಡಿಮೆಯಾದರೆ ನನ್ನ ತಲೆಯ ಮೇಲೆ ಬರುತ್ತೆ"

"ಏನ್ರೀ ಹೆಚ್ಚು ಕಡಿಮೆಯಾಗುವುದು? ನನ್ನನ್ನೇ ಕಳ್ಳ ಎನ್ನುತ್ತೀರಾ...? ಸುಮಾರು ಟೂ ಲ್ಯಾಕ್ಸ್‌ಗೂ ಹೆಚ್ಚು ಡೆಪಾಸಿಟ್ ನನ್ನದಿದೆ ಗೊತ್ತೇನು? ಸ್ವಲ್ಪ ಮರ್ಯಾದೆ ಕೊಟ್ಟು ಮಾತನಾಡಿ. ಇಲ್ಲದಿದ್ದರೆ ಈ ಕ್ಷಣವೇ ಹಣದ ವಿತ್‌ಡ್ರಾ ಮಾಡಿ...."

'ರಕ್ಷಾ... ಏನದು ಗಲಾಟೆ....?" ಮೋಹಿನಿ ಕಾಮತ್ ತನ್ನ ಸೀಟು ಬಿಟ್ಟು ಎದ್ದು ಬಂದಳು.

"ನೋಡಿ ಮೇಡಮ್.... ಈತ...."

"ಯಸ್' ಐ ನೋ ಹಿಮ್. ಪಾಸ್ ಬುಕ್ ಎಂಟರ್ ಮಾಡಿ ಕೊಡಿ"

"ಮೇಡಮ್.... ಇವರು...."

"ನಾನು ಹೇಳಿದಷ್ಟು ಮಾಡಿ" ರೇಗಿದಳು.

ರಕ್ಷಾ ಲೆಡ್ಜರ್ ತೆಗೆದು ಮೌನವಾಗಿ ಪಾಸ್ ಬುಕ್ ಎಂಟರ್ ಮಾಡಿಟ್ಟಳು. ಆತ ಅವಳತ್ತ ಗೆಲುವಿನ ನಗೆ ಬೀರಿ ಹೆಜ್ಜೆ ಹಾಕಿದ.

"ರಕ್ಷಾ... ನೀವಿನ್ನೂ ಚಿಕ್ಕವರು. ಹಾಗೆಲ್ಲಾ ಕಸ್ಟಮರ್ಸ್ ಮೇಲೆ ತಂದುಕೊಳ್ಳಬಾರದು" ಉಪದೇಶಿಸಿದಳು.

"ಮೇಡಮ್...., ಕಸ್ಟಮರ್ಸ್‌ನ ಕೌಂಟರ್ ಒಳಗೆ ಸೇರಿಸುವುದು ತಪ್ಪು. ನಾಳೆ ಹೆಚ್ಚು ಕಡಿಮೆಯಾದರೆ?"

"ಅಂತದ್ದೇನೂ ಆಗಲ್ಲ" ಎಂದು ಗರ್ವದಿಂದ



# ಎರಡು ಮುಖಗಳು

-ಎಚ್.ಕೆ. ಅನಸೂಯ ಸಂಪತ್

ನುಡಿದು ತನ್ನ ಸೀಟಿಗೆ ಹೋಗಿ ಕುಳಿತಳು ಮೋಹಿನಿ. ಎಲ್ಲರೂ ರಕ್ಷಾಳನ್ನೇ ಅನುಕಂಪದಿಂದ ನೋಡಿದರು.

ರಕ್ಷಾಳಿಗೆ ತನಗಾದ ಸೋಲಿಗಿಂತ ತನ್ನ ಮೇಲಧಿಕಾರಿ ಮೋಹಿನಿ ತನ್ನನ್ನು ಸಮರ್ಥಿಸದಿದ್ದುದು ಕಂಡು ನೋವಾಯಿತು. ಆಫೀಸರ್ ಆಗಿ ತನ್ನ ಸಿಬ್ಬಂದಿಯನ್ನು ಸಮರ್ಥಿಸಬೇಕಾದುದು ಆಕೆಯ ಕರ್ತವ್ಯ. ಅವಳು ಹಿಂದೆ ಇದ್ದ ಬ್ರಾಂಚ್‌ನಲ್ಲಿ ಅವಳ ಮೇಲಧಿಕಾರಿ ತನ್ನ ಸ್ಟಾಫ್‌ಗಳನ್ನು ಎಂದೂ ಯಾರ ಮುಂದೆಯೂ ಹೀಗೆ ಬಿಟ್ಟುಕೊಡುತ್ತಿರಲಿಲ್ಲ. ಇಲ್ಲಿಯೋ ಈ ವಿಚಿತ್ರ ಪರಿ. ಒಂದು ವಿಚಿತ್ರ ಸಂಗತಿಯೆಂದರೆ ಮೋಹಿನಿಯ ಈ ರೀತಿಯ ವರ್ತನೆ ರಕ್ಷಾಳಿಗೆ ಮಾತ್ರ ಸೀಮಿತ. ಉಳಿದ ಪುರುಷ ಸಿಬ್ಬಂದಿಯನ್ನು ಆಕೆ ಆದರದಿಂದಲೇ ಮಾತನಾಡಿಸುತ್ತಾಳೆ.

ರಕ್ಷಾ ಸ್ವಭಾವತಃ ಸಹನಾಶೀಲೆ. ಆಕೆ ಏನು ಮಾಡಿದರೂ ಸಹಿಸುತ್ತಿದ್ದಳು. ವಿರುದ್ಧ ಮಾತನಾಡುತ್ತಿರಲಿಲ್ಲ. ಬಹುಶಃ ಅವಳ ಈ ತಾಳ್ಮೆಯೇ ದುರುಪಯೋಗವಾಗುತ್ತಿದೆಯೇನೋ...?

ಮೋಹಿನಿಯೇ ಈ ಬಗ್ಗೆ ಯೋಚಿಸುವುದಿದೆ. ತನಗೇಕೆ ರಕ್ಷಾಳನ್ನು ಕಂಡರೆ ಕೋಪ ಎಂದು ಹಲವಾರು ಬಾರಿ ಚಿಂತಿಸಿದ್ದಾಳೆ. ಆದರೆ ಉತ್ತರ ಹೊಳೆದಿಲ್ಲ. ರಕ್ಷಾಳಿಗೆ ಏನಾದರೊಂದು ಕಿರುಕುಳ ಕೊಡಬೇಕೆಂದು ಅವಳ ಮನಸ್ಸು ಬಯಸುತ್ತದೆ.

ರಕ್ಷಾಳ ಗಂಡ ರಂಜನ್ ಸಹ ಬ್ಯಾಂಕ್ ಆಫೀಸರ್. ಪ್ರತಿದಿನವೂ ಬೈಕ್‌ನಲ್ಲಿ ಅವಳನ್ನು ಮನೆಗೆ ಕರೆದೊಯ್ಯುತ್ತಿದ್ದ. ಅವರದು ಚಿಕ್ಕ ಚೊಕ್ಕ ಸಂಸಾರ. ಅವರಿಬ್ಬರ ದಾಂಪತ್ಯ ಫಲವಾದ 'ರಾಗ' ಎರಡು ವರ್ಷದ ಮುದ್ದು ಮಗು, ಸ್ಫುರದ್ರೂಪಿ ಗಂಡ. ಕೈ ತುಂಬಾ ಸಂಬಳದ ಕೆಲಸ. ಮತ್ತೇನು ಬೇಕು? ಜೊತೆಗೆ ಅಪ್ರತಿಮ ಸೌಂದರ್ಯವತಿ ಅವಳು. ಬದುಕಿನಲ್ಲಿ ಸಂಪೂರ್ಣ ತೃಪ್ತೆ. ಅವಳ ವಿಚಾರವೆಲ್ಲಾ ಮೋಹಿನಿಗೆ ಗೊತ್ತಿತ್ತು. ಅದಕ್ಕೆ ಅವಳ ಇತರ ಸಹೋದ್ಯೋಗಿಗಳು ಮೋಹಿನಿಯನ್ನು 'ಅತ್ತೆ' ಎಂದು ರೇಗಿಸುತ್ತಿದ್ದರು. ಅದಕ್ಕೆ ಅವಳ ಉತ್ತರ ಮುಗುಳ್ನಗೆ.

ಆ ದಿನ ಜೋರಾಗಿ ಮಳೆ ಬರುತ್ತಿತ್ತು. ಬ್ಯಾಂಕಿನ ಹೊರಗೆ ಎಲ್ಲರೂ ಕಾದು ನಿಂತಿದ್ದರು. ರಂಜನ್ ಕಾರಿನಲ್ಲಿ ಬಂದ. ರಕ್ಷಾ ತನ್ನ ಸಹೋದ್ಯೋಗಿಗಳನ್ನು ಕರೆದಳು. ಆದರೆ ನಿಂತಿದ್ದ ಮೋಹಿನಿಯನ್ನು ಗಮನಿಸಲಿಲ್ಲ. ಯಾರೂ ಬರುವುದಿಲ್ಲವೆಂದುದರಿಂದ

ಗಂಡನೊಂದಿಗೆ ಹೊರಟು ಹೋದಳು ರಕ್ಷಾ. ಮೋಹಿನಿಯ ಹೊಟ್ಟೆಯಲ್ಲಿ ಕಿಚ್ಚು ಹತ್ತಿತ್ತು. ತಾನು ಆಫೀಸರ್. ತನ್ನನ್ನು ಕರೆಯದೆ ಹೋದಳಲ್ಲ.. ಎಷ್ಟು ದುರಹಂಕಾರ! ಇರಲಿ, ಒಂದು ಕೈ ನೋಡಿಕೊಳ್ಳುತ್ತೇನೆ ಎಂದು ಹಠ ತೊಟ್ಟಳು.

ಪಾಪ.... ರಕ್ಷಾಳ ದುರಾದೃಷ್ಟ! ಮರುದಿನವೇ ಮೋಹಿನಿಗೆ ಆ ಅವಕಾಶ ಸಿಗಬೇಕೆ?

ಎಲ್ಲರೂ ಐದುಗಂಟೆಗೇ ಬ್ಯಾಂಕ್ ಬಿಡುತ್ತಿದ್ದರೂ ರಕ್ಷಾಳಿಗೆ ಮಾತ್ರ ಆ ಸೌಲಭ್ಯವಿರಲಿಲ್ಲ. ಐದೂವರೆಯ ನಂತರವೇ ಹೊರಡಬೇಕು. ರಕ್ಷಾಳಿಗೆ ಮೋಹಿನಿಯ ದಾಕ್ಷಿಣ್ಯಕ್ಕೆ ಒಳಗಾಗುವುದು ಇಷ್ಟವಿರಲಿಲ್ಲ. ಹೀಗಾಗಿ ಅವಳು ರೂಲ್ಸ್ ಪ್ರಕಾರವೇ ನಡೆದುಕೊಳ್ಳುತ್ತಿದ್ದಳು. ಆದರೆ ಆ ದಿನ ರಾಗಳಿಗೆ ತುಸು ಜ್ವರವಿತ್ತು.

''ರಕ್ಷಾ..., ಮಗು ಅಮ್ಮಾ.. ಅಮ್ಮಾ... ಅಂತ ಒದ್ದಾಡತ್ತೆ. ಸ್ವಲ್ಪ ಬೇಗ ಬಾಮ್ಮ'' ಎಂದಿದ್ದರು ಅತ್ತೆ. ಆದ್ದರಿಂದ ಮೋಹಿನಿಯನ್ನು ಪರ್ಮಿಷನ್ ಕೇಳಲೇ ಬೇಕಾಗಿತ್ತು.

''ಮೇಡಮ್... ಮಗೂಗೆ ಹುಷಾರಿಲ್ಲ. ನಾನು ಇವತ್ತು ಸ್ವಲ್ಪ ನಾಲ್ಕೂವರೆಗೇ ಹೋಗುತ್ತೇನೆ''

''ನಿಮ್ಮ ಸಂಸಾರದ ಕಷ್ಟ, ಮನೆ ಮಕ್ಕಳ ಸಮಸ್ಯೆ ಅದೆಲ್ಲಾ ಇಲ್ಲಿ ಹೇಳಬೇಡಿ. ಇದನ್ನ ಸ್ವಲ್ಪ ಟ್ಯಾಲಿ ಮಾಡಿ...'' ಎಂದು ಬಿಟ್ಟಳು.

ಮೊದಲ ಬಾರಿಗೆ ರಕ್ಷಾಳಿಗೆ ಕೋಪ ಬಂದಿತು. ಜೊತೆಗೆ ಬೇಸರವೂ ಆಯಿತು. ಹೆಣ್ಣಾಗಿಯೂ ಈಕೆಯ ಹೃದಯ ಎಷ್ಟು ಕಠೋರ ಎಂದು ಮರುಗಿದಳು. ರಾತ್ರಿ ಗಂಡನೊಂದಿಗೆ ಆ ವಿಷಯ ಹೇಳಿದಾಗ,

''ಓಹ್... ನಿನ್ನ ಆಫೀಸರ್ ಮೋಹಿನಿಯಾ...? ಮೊನ್ನೆ ಅವಳ ಕಥೇನ ನನ್ನ ಫ್ರೆಂಡ್ ರಮೇಶ್ ರಾವ್ ಹೇಳಿದ.''

''ಏನಂತೆ?''

''ಆಕೆ ಒಂದು ತರಹ ಸ್ವಭಾವದವಳು. ಅಸೂಯೆಯ ಮೊಟ್ಟೆ ಅವಳು. ಬಹುಶಃ ಅವಕಾಶ ಕೊಟ್ಟರೆ ನಿನಗೆ ಒಂದು ತೊಟ್ಟು ವಿಷನೂ ಕೊಟ್ಟು ಬಿಡುತ್ತಾಳೆ. ಆದರೆ ನಿನ್ನ ಪುಣ್ಯ, ಅಂತಹ ಅವಕಾಶ ಸಿಕ್ಕಿಲ್ಲ''

''ಏನ್ರೀ, ನೀವನ್ನುವುದು? ನೀವು ಹೇಳುವಷ್ಟು ಕೆಟ್ಟವಳಲ್ಲ ಬಿಡಿ. ಏನೋ ಆಫೀಸರ್‌ಗಿರಿ ತೋರಿಸುವ ಆಸೆಯೇನೋ?''

''ನೀನು ಅಲ್ಲಿಯೇ ತಪ್ಪು ತಿಳಿದಿರುವುದು, ರಕ್ಷಾ. ಆಕೆಗೆ ಒಂದು ರೀತಿಯ ಮನೋಕ್ಷೋಭೆ. ಆಕೆಯ ಸಾಂಸಾರಿಕ ಜೀವನ ಸರಿಯಿಲ್ಲ''.

''ನಿಮಗೆ ಯಾರು ಹೇಳಿದ್ದು?''

''ನನ್ನ ಫ್ರೆಂಡ್ ರಮೇಶ್‌ರಾವ್ ಹೇಳಿದ್ದು. ಆಕೆಗೂ ಅವಳ ಗಂಡನಿಗೂ ಸರಿಯಿಲ್ಲವಂತೆ. ನಿತ್ಯ ಜಗಳ, ಕದನ. ಈಕೆ ಶ್ರೀಮಂತ ಕುಟುಂಬದಿಂದ ಬಂದವಳು. ಗಂಡ ಮಧ್ಯಮ ವರ್ಗ. ಹೀಗಾಗಿ ಹೊಂದಾಣಿಕೆಯಾಗಿಲ್ಲ''

''ಅವರಿಗೆ ಒಬ್ಬ ಮಗಳಿದ್ದಾಳೆ''

''ಇದ್ದಾಳೆ. ಆದರೆ ಗಂಡ ಡೈವೋರ್ಸ್ ಮಾಡಿದ್ದಾನೆ. ತಾಯಿ ಮಗಳು ಮಾತ್ರ ಇರುವುದು''

''ಮತ್ತೆ ನಮ್ಮ ಹಸ್ಬೆಂಡ್ ಫಾರಿನ್‌ನಲ್ಲಿ ಇದ್ದಾರೆ ಅಂತ ಅನ್ನುತ್ತಿದ್ದಳು''

''ಮತ್ತೇನು ಹೇಳಿಕೊಳ್ಳುತ್ತಾಳೆ? ಗಂಡ ಡೈವೋರ್ಸ್ ಮಾಡಿದ್ದಾನೆ ಅಂತ ಎಲ್ಲರೆದುರಿಗೆ ಹೇಳಲು ಸಾಧ್ಯವೇ? ತನ್ನ ಹುಳುಕನ್ನು ಮುಚ್ಚಿಕೊಳ್ಳಲು ಸುಳ್ಳು ಹೇಳುತ್ತಾಳೆ''

''ಹೌದಾ....?'' ಆಶ್ಚರ್ಯದಿಂದ ಉದ್ಗಾರ ತೆಗೆದಳು ರಕ್ಷಾ.

''ಅದಕ್ಕೆ ಆಕೆಗೆ ಚೆನ್ನಾಗಿರುವವರನ್ನು ಕಂಡರೆ ಒಂದು ರೀತಿಯ ಅಸೂಯೆ. ಗಂಡ ಮಕ್ಕಳೊಂದಿಗೆ ಅಚ್ಚುಕಟ್ಟಾಗಿ ಸಂಸಾರ ನಡೆಸುತ್ತಿರುವವರನ್ನು ಕಂಡರೆ ಬಹುಶಃ ಹೊಟ್ಟೆ ಉರಿದುಹೋಗುತ್ತದೇನೋ..? ಅದಕ್ಕೆ ಆಕೆಗೆ ನಿನ್ನ ಕಂಡರೆ ಮತ್ಸರ. ನಿನಗೆ ಏನಾದರೊಂದು ಕಿರುಕುಳ ಕೊಡುವ ಮೂಲಕ ಆಕೆ ತನ್ನ ಸುಪ್ತ ಮನಸ್ಸಿಗೆ ಸಮಾಧಾನ ತಂದುಕೊಳ್ಳುತ್ತಾಳೆ.''

''ಜನ ಹೀಗೂ ಇರುತ್ತಾರಾ?''

''ಜನರ ಮನಸ್ಸು ಹೀಗೇ ಅಂತ ಹೇಳಲು ಸಾಧ್ಯವೇ? ತಮಗೆ ಸಿಗದಿದ್ದುದು ಬೇರೆಯವರಿಗೆ ಸಿಗಬಾರದು ಎನ್ನುವ ಮನೋಭಾವ ಕೆಲವರಿಗೆ. ನಿನ್ನ ಮೋಹಿನಿ ಆ ವರ್ಗಕ್ಕೆ ಸೇರಿದವಳು. ಎಲ್ಲಾ ರೀತಿಯಲ್ಲಿಯೂ ಸುಖವಾಗಿರುವವರನ್ನು ಕಂಡರೆ ಅವಳಿಗೆ ಒಂದು ರೀತಿಯ ಅತೃಪ್ತಿ. ಆ ಅತೃಪ್ತಿ ಕಿರುಕುಳದಲ್ಲಿ ವ್ಯಕ್ತವಾಗುತ್ತದೆ. ನೀನು ನೊಂದರೆ ಅವಳಿಗೆ ವಿಚಿತ್ರ ತೃಪ್ತಿ. ವಿಲಕ್ಷಣ ಆನಂದ. ಅದಕ್ಕೆ ಅವಳು ಹಾಗೆ ಮಾಡುತ್ತಾಳೆ''

ರಕ್ಷಾಳಿಗೂ ಗಂಡನ ಮಾತು ಸರಿಯೆನಿಸಿತು. ತನ್ನನ್ನು ಗೋಳು ಹುಯಿದುಕೊಂಡಾಗ ಮೋಹಿನಿ ವಿಚಿತ್ರ ಸಂತೋಷದಿಂದ ಇರುವುದನ್ನು ಕಂಡಿದ್ದಾಳೆ. ಮತ್ತೊಬ್ಬ ಹೆಣ್ಣು ಸಂತೋಷವಾಗಿದ್ದರೆ ಅವಳಿಗೆ ಅಸಮಾಧಾನವಾಗದೆ ಇರಲು ಸಾಧ್ಯವೇ? ಯಾರೇ ಅವಳ ಸ್ಥಿತಿಯಲ್ಲಿದ್ದರೂ ಅವಳ ಮನೋಸ್ಥಿತಿಯೇ ಇರುತ್ತಿತ್ತೇನೋ? ಪಾಪ..., ಎಲ್ಲರೂ ಜೀವನದಲ್ಲಿ ಸುಖವಾಗಿರುವುದಿಲ್ಲ. ವಿಧಿ ಲಿಖಿತದಂತೆ ಬದುಕು. ಹೀಗಿರುವಾಗ ತಾನೇ ಇನ್ನು ಮುಂದೆ ಅವಳಿಗೆ ಹೊಂದಿಕೊಳ್ಳಬೇಕು. ಅವಳ ಮಾತನ್ನು ತಪ್ಪು ತಿಳಿಯಬಾರದು ಎಂದು ನಿರ್ಧರಿಸಿದಳು.

''ರಂಜನ್ ನೀವು ಅವಳ ಬಗ್ಗೆ ಹೇಳಿದ್ದು ಒಳ್ಳೆಯದಾಯಿತು. ಓರ್ವ ಹೆಣ್ಣಾಗಿ ಅವಳ ಮನಸ್ಸನ್ನು ಅರ್ಥ ಮಾಡಿಕೊಳ್ಳಲು ಯತ್ನಿಸುತ್ತೇನೆ. ಅವಳು ನನಗೆ ಕೆಡುಕು ಮಾಡಿದರೂ ಕ್ಷಮಿಸುತ್ತೇನೆ.''

''ದಟ್ ಈಸ್ ಗುಡ್ ಮೈ ಡಿಯರ್ ರಕ್ಷಾ...'' ಎಂದು ಅವಳ ಬೆನ್ನು ತಟ್ಟಿದ ರಂಜನ್.

* * * *

ಆ ದಿನ ಅವಳು ಬ್ಯಾಂಕಿಗೆ ಬಂದಾಗ ಕಾಲು ಗಂಟೆ ತಡವಾಗಿತ್ತು. ಖಂಡಿತಾ ಈ ಬಗ್ಗೆ ಏನಾದರೂ ಮೋಹಿನಿ ಅನ್ನುತ್ತಾಳೆಂದು ಅವಳಿಗೆ ಗೊತ್ತು. ಅವಳ ನಿರೀಕ್ಷೆ ಸುಳ್ಳಾಗಲಿಲ್ಲ.

''ರಕ್ಷಾ.., ಎಷ್ಟು ಹೊತ್ತಿಗೆ ಬರುವುದು..? ಮೊನ್ನೆ ತಾನೇ ಮ್ಯಾನೇಜರ್ ಹೆಡ್ ಆಫೀಸಿಗೆ ಹೋಗಿದ್ದಾಗ ಡಿ.ಎಂ. ಸ್ಟ್ರಿಕ್ಟಾಗಿ ಇನ್‌ಸ್ಟ್ರಕ್ಷನ್ ಕೊಟ್ಟಿದ್ದಾರೆ. ಎಲ್ಲಾ ಸ್ಟಾಫ್ ಇನ್‌ಟೈಮ್ ಸೀಟಿನಲ್ಲಿರಬೇಕು. ಯಾರೂ ಅರ್ಲಿಯಾಗಿ ಹೋಗಬಾರದು ಅಂತ''

''ಆಯಿತು ಮೇಡಮ್. ಇವತ್ತು ಸ್ವಲ್ಪ ತಡ ವಾಯಿತು''

''ಮತ್ತೊಮ್ಮೆ ಹೀಗೆ ಮಾಡಬೇಡಿ. ನಿಮ್ಮಿಂದ ನನಗೆ ಕೆಟ್ಟ ಹೆಸರು''

ರಕ್ಷಾ ಮಾತನಾಡಲಿಲ್ಲ. ಡಿ.ಎಂ. ತನಗೆ ಮಾತ್ರ ಸೂಚನೆ ಕೊಟ್ಟಿರುವರೇ? ಅವರು ಎಲ್ಲರಿಗೂ ಕೊಟ್ಟಿರುತ್ತಾರೆ. ಆದರೆ ತಾನು ಮಾತ್ರ ಅದನ್ನು ಪಾಲಿಸಬೇಕೆಂಬುದು ಎಷ್ಟು ವಿಚಿತ್ರ! ಈ ಹೆಂಗಸು ತನ್ನ ಮೇಲೆ ಅದೆಷ್ಟು ದ್ವೇಷ ಸಾಧಿಸುತ್ತಾಳೆ. ಮ್ಯಾನೇಜರ್ ದೇವರಂತಹ ಮನುಷ್ಯರು. ಅವರು ಒಂದು ಮಾತೂ ಆಡುವುದಿಲ್ಲ. ಆದರೆ ಈಕೆ? ತಾನು ಹೆಚ್ಚು ಓದಿದ್ದೇನೆಂಬುದೂ ಅಸೂಯೆ. ಮೊನ್ನೆ ಏನೋ ಮಾತಿಗೆ ಬಂದು...,

''ರಕ್ಷಾ..., ನೀವು ಎಂ.ಎಸ್.ಸಿಯೇನ್ರೀ? ನನಗೆ ಗೊತ್ತೇ ಇರಲಿಲ್ಲ, ಏನೋ ಎಸ್.ಎಸ್.ಎಲ್.ಸಿ.ನೋ, ಪಿ.ಯು.ಸಿ.ನೋ ಇರಬೇಕು ಅಂದುಕೊಂಡಿದ್ದೆ...'' ಎಂದಿದ್ದಳು ಮೋಹಿನಿ.

''ಎಲ್ಲರಿಗೂ ಗೊತ್ತಲ್ಲ ಮೇಡಮ್''

''ಇರಬಹುದೇನೋ? ನನಗೆ ಗೊತ್ತಿರಲಿಲ್ಲ'' ಸಿಡುಕಿದಳು.

ಕಾಲೇಜು ಮೆಟ್ಟಿಲು ಹತ್ತಿರದ ಮೋಹಿನಿ ಸೀನಿಯಾರಿಟಿ ಆಧಾರದ ಮೇಲೆ ಆಫೀಸರ್ ಆಗಿದ್ದಳು. ಆದರೆ ರಕ್ಷಾ....? ಈಗಾಗಲೇ ಒಂದು ಪಾರ್ಟ್ ಸಿ.ಎ.ಐ.ಐ.ಬಿ. ಮುಗಿಸಿದ್ದಾಳೆ. ಇನ್ನೊಂದು ಪಾರ್ಟ್ ಮುಗಿಸಿದರೆ ಆಫೀಸರ್ ಆಗುತ್ತಾಳೆ. ಅದಕ್ಕೆ ಅವಳಿಗೆ ಪ್ರತಿಯೊಬ್ಬರೂ ಮನ್ನಣೆ ಕೊಟ್ಟು ಮಣೆ ಹಾಕುವುದು ಎನಿಸಿತು.

ಅದಕ್ಕೆ ತಕ್ಕಂತೆ ಅಂದು ಬ್ಯಾಂಕಿನಲ್ಲಾದ ಘಟನೆ ಮೋಹಿನಿಯನ್ನು ಮತ್ತಷ್ಟು ಯೋಚಿಸುವಂತೆ ಮಾಡಿತು.

ಅಂದು ಸಂಜೆಯಾದರೂ ಬ್ಯಾಲೆನ್ಸ್ ಷೀಟ್ ಟ್ಯಾಲಿಯಾಗಿರಲಿಲ್ಲ. ಎಷ್ಟೇ ಹುಡುಕಿದರೂ ಡಿಫರೆನ್ಸ್ ಎಲ್ಲಿ ಎನ್ನುವುದು ಗೊತ್ತಾಗಲಿಲ್ಲ. ಪ್ರತಿಯೊಬ್ಬರೂ ನೋಡಿದರು. ಆದರೂ ಪತ್ತೆಯಾಗಲಿಲ್ಲ. ಮೋಹಿನಿ ತನ್ನ ಬುದ್ಧಿಯನ್ನೆಲ್ಲಾ ಖರ್ಚು ಮಾಡಿದಳು. ಆದರೂ ವ್ಯರ್ಥ.

''ಮೇಡಮ್ ಒಂದು ಸಾರಿ ರಕ್ಷಾ ನೋಡಿ ಬಿಡಲಿ. ಅರೆ ಕ್ಷಣದಲ್ಲಿ ತೋರಿಸುತ್ತಾರೆ'' ದೇಸಾಯಿ ನುಡಿದ.

### ಏಕೈಕ ಸಂಸ್ಕೃತ ಗ್ರಾಮ

*ಶಿವಮೊಗ್ಗದಿಂದ 12 ಕಿ.ಮೀ. ದೂರದಲ್ಲಿ ತುಂಗಾ ತೀರದಲ್ಲಿ ಮತ್ತೂರು ಎಂಬ ಗ್ರಾಮವಿದೆ. ಸಂಸ್ಕೃತ ಮೃತ ಭಾಷೆ ಎಂದು ಹೇಳುವವರು ಈ ಊರಿಗೆ ಬಂದರೆ ಅಚ್ಚರಿಗೊಳ್ಳಬಹುದು. ಇಲ್ಲಿ ಸಂಸ್ಕೃತ ದಿನ–ನಿತ್ಯದ ವ್ಯಾವಹಾರಿಕ ಭಾಷೆಯಾಗಿದೆ. ಇಲ್ಲಿ ಸುಮಾರು 2,000 ಜನಸಂಖ್ಯೆಯಿದ್ದು 40% ಸಂಸ್ಕೃತದಲ್ಲಿ ಅಚ್ಚುಕಟ್ಟಾಗಿ ಮಾತನಾಡುತ್ತಾರೆ. ಅದು ಎಲ್ಲರಿಗೂ ಅರ್ಥವಾಗುತ್ತದೆ. ಈ ಗ್ರಾಮದಲ್ಲಿ ಸಂಸ್ಕೃತ ಪಾಠಶಾಲೆಯೊಂದಿದೆ. ಜೊತೆಗೆ ವೇದ ಪಾಠಗಳೂ ನಡೆಯುತ್ತವೆ. ಗದ್ದೆಯಲ್ಲಿ ಕೆಲಸ ಮಾಡುವವನಿಗೂ ಸಂಸ್ಕೃತ ಅರ್ಥವಾಗುತ್ತದೆ. ಪೋಸ್ಟ್‌ಮ್ಯಾನ್ ಕೂಡ ಸರಾಗವಾಗಿ ಸಂಸ್ಕೃತದಲ್ಲಿ ಮಾತನಾಡುತ್ತಾನೆ. ಸಂಸ್ಕೃತ ಜೀವಂತ ಭಾಷೆ ಎಂದು ಸಾರುವ ಏಕೈಕ ಗ್ರಾಮ ಮತ್ತೂರು.*

"ಅವರಿಗೇನ್ರೀ ಗೊತ್ತಾಗುತ್ತೆ? ನಮಗೆ ಸಿಗದಿದ್ದುದು ಅವರಿಗ ಸಿಗುತ್ತೇನು?''

'ಟ್ರೈ ಮಾಡುವುದಕ್ಕೇನು? ಮೇಡಮ್ ಟ್ರೈಲ್ ಕಾಸ್ಟ್ಸ್ ನಥಿಂಗ್...'' ಎನ್ನುತ್ತ ಅವಳುತ್ತರಕ್ಕೂ ಕಾಯದೆ ರಕ್ಷಾಳ ಮುಂದಿಟ್ಟು...,

"ನೋಡಿ ಮೇಡಮ್ ಸ್ವಲ್ಪ'' ಎಂದ.

ಒಂದು ನಿಮಿಷ ಕಣ್ಣಾಡಿಸಿದ ರಕ್ಷಾ ಪೆನ್ಸಿಲಿನ ತುದಿಯಿಂದ ತೋರಿಸಿದಳು.

"ವೆರಿಗುಡ್. ನಮಗೆ ಯಾರಿಗೂ ಗೊತ್ತಾಗದಿದ್ದುದು ನಿಮಗೆ ಹೇಗೆ ಗೊತ್ತಾಯಿತು?''

ರಕ್ಷಾ ಮುಗುಳ್ನಕ್ಕಳಷ್ಟೆ. ಆದರೆ ಮ್ಯಾನೇಜರ್ ನಗುತ್ತಾ...

"ದಟ್ ಈಸ್ ರಕ್ಷಾ... ಅವರು ವೆರಿ ಇಂಟೆಲಿಜೆಂಟ್. ಷಿ ಈಸ್ ಆ್ಯನ್ ಅಸೆಟ್ ಟು ದಿಸ್ ಬ್ರಾಂಚ್..'' ಎಂದಳು.

ಮೋಹಿನಿಗೆ ಅವಮಾನವಾಯಿತು. ತನ್ನ ಮುಂದೆಯೇ ತನ್ನ ಕೈ ಕೆಳಗಿನವಳಿಗೆ ಪ್ರಶಂಸೆ! ಅದೂ ತನ್ನ ವೈರಿ ರಕ್ಷಾಳಿಗೆ?

"ಇದೇನು ಮಹಾ ದೊಡ್ಡ ವಿಷಯ ಬಿಡಿ. ಸ್ವಲ್ಪ ಹೊತ್ತಿಗೆ ನಮಗೂ ಗೊತ್ತಾಗುತ್ತಿತ್ತು'' ಎಂದಳು ಅಲಕ್ಷ್ಯದಿಂದ.

"ಮೇಡಮ್, ಗುಣಕ್ಕೆ ಮತ್ಸರ ಏಕೆ? ನಿಮಗೆ ವಿಶಾಲ ಹೃದಯವಿದ್ದರೆ ಅವರನ್ನು ಅಪ್ರಿಶಿಯೇಟ್ ಮಾಡಿ. ಇಲ್ಲದಿದ್ದರೆ ಸುಮ್ಮನಿರಿ...'' ಎಂದು ರೇಗಿದ ದೇಸಾಯಿ.

ಮೋಹಿನಿ ಸುಮ್ಮನಾದರೂ ಅವಳ ಮನಸ್ಸು ಆಕ್ರೋಶದಿಂದ ಚೀರಿತು. ಹೇಗಾದರೂ ಮಾಡಿ ಇದಕ್ಕೆ ಮುಕ್ತಾಯ ಹಾಡಲೇಬೇಕು. ಇಲ್ಲದಿದ್ದರೆ ಎಲ್ಲರೂ ರಕ್ಷಾಳನ್ನು ಮೆರೆಸಿ ತನ್ನನ್ನು ಮೂಲೆಗುಂಪು ಮಾಡಿಬಿಡುತ್ತಾರೆ. ತಾನು ಆಗ ಎಲ್ಲರ ಮುಂದೆ ನಿಕೃಷ್ಟಳಾಗಿ ಬಿಡುತ್ತೇನೆ. ಈಗಾಗಲೇ ರಕ್ಷಾಳಿಗೆ ಅವಳೇ ಹೆಚ್ಚೆಂಬ ಗರ್ವ ಬಂದು ಬಿಟ್ಟಿರಬೇಕು, ಎನಿಸಿತು.

ಮೋಹಿನಿಯ ಮನದಲ್ಲಾಗುತ್ತಿದ್ದ ತಳಮಳವನ್ನು ಊಹಿಸಿದ ರಕ್ಷಾ ದೇಸಾಯಿಗೆ ಕಣ್ಣು ಸನ್ನೆ ಮಾಡಿದಳು. ಅವನು ಸುಮ್ಮನಾದ.

"ಮೇಡಮ್.ನಿಮ್ಮ ಅನುಭವದಲ್ಲಿ ಅರ್ಧ ಸಹ ನನಗಿಲ್ಲ. ನಿಮ್ಮಿಂದ ಕಲಿಯುವುದು ಬೇಕಾದಷ್ಟಿದೆ'' ಎಂದಳು ನಮ್ರತೆಯಿಂದ.

ಅವಳನ್ನು ದುರುಗುಟ್ಟಿ ನೋಡಿದ ಮೋಹಿನಿ...,

"ನಿಮಗೇ ಎಲ್ಲಾ ಗೊತ್ತಲ್ಲ. ನನ್ನಿಂದ ಕಲಿಯುವುದು ಏನಿದೆ? ನಾನು ನಿಮಗೆ ನೆಪ ಮಾತ್ರ...'' ಸಿಡುಕಿದಳು ಮೋಹಿನಿ.

ಈ ಘಟನೆಯಾದ ನಂತರ ಒಂದು ವಾರ ಬ್ಯಾಂಕಿಗೆ ಬರಲಿಲ್ಲ ಮೋಹಿನಿ. ಕಾರಣ ಏನೆಂದು ಎಲ್ಲರಿಗಿಂತ ಹೆಚ್ಚು ಚಿಂತಿಸಿದವಳು ರಕ್ಷಾ. ಮೊದಲೇ ಒಂಟಿ ಹೆಂಗಸು. ಏನೆಲ್ಲಾ ಯೋಚನೆ ಮಾಡಿ ಏನಾದರೂ ಮಾಡಿಕೊಂಡರೆ? ಗಂಡ ಹೇಳಿದಂತೆ ಆಕೆಯ ಮನಸ್ಸು ತುಂಬಾ ಸೂಕ್ಷ್ಮ. ತನಗೆ ಅಪಮಾನವಾಯಿತೆಂದು ಅತಿರೇಕಕ್ಕೆ ಹೋಗಿ ಆಗಬಾರದ್ದು ಆದರೆ? ಅವರ ಮನೆಗೆ ಹೋಗಿ ನೋಡಿ ಬರಲೇ ಎಂದು ಹಲವು ಬಾರಿ ಯೋಚಿಸಿದಳು.

## ಎದೆಹಾಲಿನ ಮಹತ್ವ

**ಜಗತ್ತಿನಾದ್ಯಂತ ಜನತೆ ಎದೆಹಾಲಿನ ಪ್ರಾಮುಖ್ಯತೆಯಲ್ಲಿ ಏಕೆ ನಂಬಿಕೆ ಇಟ್ಟದೆ? ಅದರಿಂದ ಪ್ರಯೋಜನವೇನಾದರೂ ಇದೆಯೇ?**

- ವಿಶ್ವದಾದ್ಯಂತ ಮಿಲಿಯಗಟ್ಟಲೆ ಶಿಶುಗಳ ಪ್ರಾಣ ಸಂರಕ್ಷಣೆಯಾಗುತ್ತದೆ.
- ಪ್ರತಿಯೊಂದು ದೇಶದಲ್ಲೂ ತಡೆಗಟ್ಟಬಹುದಾದ ವ್ಯಾಧಿಗಳಿಂದ ನರಳುತ್ತಿರುವ ಶಿಶುಗಳನ್ನು ಕಾಪಾಡಬಹುದು.
- ವೃಕ್ಷಗಳು ಮತ್ತಿತರ ಶಕ್ತಿ ಸಂಪನ್ಮೂಲಗಳನ್ನೊಳಗೊಂಡಂತೆ ಪೃಥ್ವಿಯ ನೈಸರ್ಗಿಕ ಸಂಪನ್ಮೂಲಗಳನ್ನು ಉಳಿಸಬಹುದು.
- ಸ್ತನ ಮತ್ತು ಅಂಡಾಶಯದ ಕ್ಯಾನ್ಸರ್‌ನಿಂದ ಬಳಲುವ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡಬಹುದು.
- ಕೃತಕ ಶಿಶು ಆಹಾರ ಉತ್ಪಾದನೆ ಹಾಗೂ ಉಪಯೋಗಿಸಲಾದ ಹಾಲಿನ ಡಬ್ಬಿಗಳಿಂದಾಗುವ ಭೂ–ಜಲ–ಅನಿಲ ಮಾಲಿನ್ಯವನ್ನು ತಗ್ಗಿಸಬಹುದು.
- ಕೃತಕ ಶಿಶು ಆಹಾರಕ್ಕಾಗಿ ಹಾಗೂ ಅದನ್ನು ಶಿಶುಗಳಿಗೆ ಉಣಿಸುವ ಕುರಿತು ತಿಳಿಸುವ ಕಾರ್ಯಕ್ರಮಗಳಿಗಾಗಿ ಸರಕಾರ ವೆಚ್ಚ ಮಾಡುವ ಹಣವನ್ನು ಉಳಿತಾಯ ಮಾಡಬಹುದು.
- ಕೃತಕ ಶಿಶು ಆಹಾರ ಬಳಕೆಯಿಂದಾಗಿ ತಡೆಗಟ್ಟಬಹುದಾದಂತಹ ವ್ಯಾಧಿಗಳಿಗೆ ಹಾಗೂ ಅಲರ್ಜಿಗೆ ಚಿಕಿತ್ಸೆ ಮಾಡುವ ವೈದ್ಯಕೀಯ ವೆಚ್ಚವನ್ನು ಗಣನೀಯ ಪ್ರಮಾಣದಲ್ಲಿ ಕಡಿತಗೊಳಿಸಬಹುದು.
- ದುಬಾರಿ ಬೆಲೆಯ ಕೃತಕ ಶಿಶು ಆಹಾರದ ಖರೀದಿಯ ಕಾರಣವಾಗಿ ತತ್ತರಿಸುತ್ತಿರುವ ಕುಟುಂಬದ ಆರ್ಥಿಕ ಹೊರೆಯನ್ನು ಹಗುರಗೊಳಿಸಬಹುದು.
- ಹೆಣ್ಣಿನ ಎದೆಹಾಲುಣಿಸುವ ಸಾಮರ್ಥ್ಯದ ಅಪಮೌಲ್ಯೀಕರಣವನ್ನು ತಡೆಯಬಹುದು ಹಾಗೂ ಎದೆ ಹಾಲುಣಿಸುವುದರಿಂದ ಸಮಾಜಕ್ಕೆ ಅವರ ಅಮೂಲ್ಯ ಸೇವೆಯನ್ನು ಸಾರಿ ಹೇಳಬಹುದು.
- ಕನಿಷ್ಠ ಪಕ್ಷ ಜೀವನದ ಮೊದಲೆರಡು ವರ್ಷಗಳವರೆಗಾದರೂ ಶಿಶುಗಳಿಗೆ ಆಹಾರದ ಭದ್ರತೆ ಮತ್ತು ಪೋಷಕ ಆಹಾರದ ಪ್ರಮುಖ ಮೂಲವನ್ನು ಶಿಶುಗಳಿಗೆ ಒದಗಿಸಿದಂತಾಗುತ್ತದೆ.
- ಮಹಿಳೆಯರ ಆರೋಗ್ಯಕ್ಕೆ ಧಕ್ಕೆ ಬಾರದಂತೆ ಗರ್ಭಧಾರಣೆಯಲ್ಲಿ ಸಾಕಷ್ಟು ಅಂತರ ಕಾಯ್ದುಕೊಳ್ಳಲು ನೈಸರ್ಗಿಕ ಅನುಕೂಲವನ್ನೊದಗಿಸುತ್ತದೆ.
- ತಲೆತಲಾಂತರದಿಂದ ಪಾಲಿಸಿಕೊಂಡು ಬಂದ ಎದೆ ಹಾಲುಣಿಸುವ ಕುಶಲ ಪರಂಪರೆ ಮುಂದುವರಿಯಲು ಇವರು (ಎದೆ ಹಾಲುಣಿಸುವ ತಾಯಂದಿರು) ವಾಸ್ತವಿಕ ಮಾದರಿಗಳಾಗುತ್ತಾರೆ.
- ಜಗತ್ತಿನ ಮಕ್ಕಳ ಭಾವನಾತ್ಮಕ, ಬೌದ್ಧಿಕ ಹಾಗೂ ಅರಿವಿನ ಸೂಕ್ತ ವಿಕಾಸಕ್ಕೆ ಪೋಷಣೆ ನೀಡುವುದು.

('ಯೂನಿಸೆಫ್' ಪುಸ್ತಿಕೆಯಿಂದ)

ಆದರೆ ಆಕೆ ಮುಖಕ್ಕೆ ಹೊಡೆದಂತೆ ಏನಾದರೂ ಅಂದರೆ ಎನ್ನುವ ಭಯ.

ಒಂದು ವಾರದ ನಂತರ ಮೋಹಿನಿ ಡ್ಯೂಟಿಗೆ ಬಂದಳು. ಅಂದು ಬೆಳಿಗ್ಗೆ ಹೆಡ್ ಆಫೀಸಿನ ಜವಾನ "ಅಮ್ಮಾವರೇ... ನಿಮ್ಮ ಆಫೀಸರ್ ಅಮ್ಮಾವರು ಒಂದು ವಾರದಿಂದ ಹೆಡ್ ಆಫೀಸಿಗೆ ಖುದ್ದಾಗಿ ಓಡಾಡವರೇ. ಏನೋ ಕರಾಮತ್ತು ನಡೆಸವರೇ ಅಮ್ಮಾವರೇ... ಯಾರದೋ ಟ್ರಾನ್ಸ್‌ಫರ್‌ಗೆ ಓಡಾಡುತ್ತಿರಬೇಕು...'' ಎಂದ ರಕ್ಷಾಳಿಗೆ. ಅವನ ಮಾತನ್ನು ರಕ್ಷಾ ಕಿವಿಗೆ ಹಾಕಿಕೊಳ್ಳಲಿಲ್ಲ.

"ಮೇಡಮ್...., ಏಕೆ ಆರೋಗ್ಯ ಸರಿಯಿಲ್ಲವೇ? ಒಂದು ವಾರದಿಂದ ಬರಲಿಲ್ಲ...? ಎಂದಳು.

"ಹ್ಞಂ ಜ್ವರ ಬಂದಿತ್ತು. ಮನೆ ಬಿಟ್ಟು ಹೊರಗೆ ಬಂದದ್ದೇ ಇವತ್ತು....'' ಸರಾಗವಾಗಿ ಸುಳ್ಳು ಹೊರಬಂದಿತು.

ಆದರೆ ಆ ದಿನದ ಪೋಸ್ಟ್ ಬಂದಾಗ ನಿಜಾಂಶ ಬಯಲಾಯಿತು.

ರಕ್ಷಾಳಿಗೆ ಟ್ರಾನ್ಸ್‌ಫರ್ ಆರ್ಡರ್! ಅದನ್ನು ಕಂಡು ಎಲ್ಲರೂ ಗುಸು ಗುಸು ಮಾತನಾಡಲಾರಂಭಿಸಿದರು. ರಕ್ಷಾಳಿಗೆ ಅದರ ಹಿನ್ನೆಲೆ ಅರ್ಥವಾಯಿತು. ಆದರೂ ಅವಳು ಯಾವ ಭಾವವನ್ನೂ ತೋರಲಿಲ್ಲ.

"ಮೇಡಮ್.., ನನಗೆ ಜಯನಗರದ ಬ್ರಾಂಚ್‌ಗೆ ವರ್ಗವಾಗಿದೆ...'' ಎಂದಳು.

"ಹೌದೇನ್ರೀ...? ನಿಮ್ಮಂತಹ ಹ್ಯಾಂಡ್ಸ್ ಹೋದರೆ ಹೇಗೆ? ನಾನು ಕ್ಯಾನ್ಸಲೇಷನ್‌ಗೆ ಟ್ರೈ ಮಾಡುತ್ತೀನಿ ಇರಿ'' ಎಂದಳು ಮೋಹಿನಿ ಬೆಣ್ಣೆಯಲ್ಲಿ ಕೂದಲು ತೆಗೆದಂತೆ.

"ಬೇಡ ಮೇಡಮ್...., ನಿಮ್ಮಂತಹ ಒಳ್ಳೆಯ ಆಫೀಸರ್ ಹತ್ತಿರ ಕೆಲಸ ಮಾಡುವ ಯೋಗ್ಯತೆ, ಅರ್ಹತೆ,ಅದೃಷ್ಟ ನನಗಿಲ್ಲವೇನೋ...?'' ಆ ಮಾತಿನಲ್ಲಿ ಸಹಸ್ರ ಅರ್ಥವಿತ್ತು.

"ರಕ್ಷಾ....!'' ಮೋಹಿನಿಯ ಕೂಗಿನಲ್ಲಿ ಕಂಪನ.

"ಇರಲಿಬಿಡಿ ಮೇಡಮ್. ನೀವು ಏಕೆ ತೊಂದರೆ ತೆಗೆದುಕೊಳ್ಳುತ್ತೀರಿ? ಯಾವತ್ತೂ ಯಾರೂ ನಿಂತ ನೀರಾಗಬಾರದು. ಹರಿಯುವ ನದಿಯಾಗಬೇಕು. ಆಗಲೇ ಬದುಕಿಗೆ ಅರ್ಥ. ಈ ಬ್ರಾಂಚ್ ಋಣ ಮುಗಿಯಿತು. ಈಗ ಮತ್ತೊಂದು ಕಡೆ'' ಎಂದಳು ನಿರ್ವಿಕಾರವಾಗಿ.

ಆ ಮಾತಿನರ್ಥವಾಗದ ಮೋಹಿನಿ ರಕ್ಷಾಳನ್ನೇ ಚಕಿತಳಾಗಿ ನೋಡಿದಳು. ಆದರೆ ರಕ್ಷಾಳ ನೋಟ ಮೋಹಿನಿಯ ದೃಷ್ಟಿಯೊಂದಿಗೆ ಬೆರೆಯಲಿಲ್ಲ.

* * * *

# ಶುಚಿ, ರುಚಿ, ಆರೋಗ್ಯ: ಎಂ.ಟಿ.ಆರ್ ವೈಶಿಷ್ಟ್ಯ

ಬೆಂಗಳೂರಿನ ನಾಗರಿಕರಿಗೆ ರುಚಿಯಾದ, ಶುಚಿಯಾದ ಹಾಗೂ ಆರೋಗ್ಯಕರವಾದ ಉಪಾಹಾರವನ್ನು ಪೂರೈಸುವ ಸಲುವಾಗಿ 1924ರಲ್ಲಿ ಸಣ್ಣದಾಗಿ ಪ್ರಾರಂಭಗೊಂಡ ಮಾವಳ್ಳಿ ಟಿಫನ್ ರೂಮ್ಸ್ (ಎಂ.ಟಿ.ಆರ್.) ಇಂದು ತ್ರಿವಿಕ್ರಮನಾಗಿ ಬೆಳೆದು ಉಪಾಹಾರದ ಜತೆಗೆ ಗೃಹ ಕೃತ್ಯಕ್ಕೆ ಅಗತ್ಯವಾದ ಆಹಾರ ವಸ್ತುಗಳು, ದಿಢೀರ್ ಆಹಾರ ಪದಾರ್ಥಗಳು, ಉಪ್ಪಿನಕಾಯಿ, ಸಾಂಬಾರ ವಸ್ತುಗಳನ್ನು ಆರೋಗ್ಯಕರ ರೀತಿಯಲ್ಲಿ ತಯಾರಿಸುತ್ತಿದ್ದು ದೇಶವಿದೇಶಗಳಿಗೆ ಈ ಉತ್ಪನ್ನಗಳನ್ನು ರಫ್ತು ಮಾಡುತ್ತಾ ರಾಷ್ಟ್ರಕ್ಕೆ ಅಮೂಲ್ಯವಾದ ವಿದೇಶೀ ವಿನಿಮಯವನ್ನು ಗಳಿಸಿಕೊಡುತ್ತಿವೆ.

ಗುಣಮಟ್ಟ ಎಂಟಿಆರ್‌ನ ಮುಖ್ಯ ವೈಶಿಷ್ಟ್ಯ. ತಿಂಡಿ ಪದಾರ್ಥಗಳಿಗೆ ಪರಿಶುದ್ಧವಾದ ವಸ್ತುಗಳು ಹಾಗೂ ಅಪ್ಪಟ ತುಪ್ಪವನ್ನೇ ಬಳಸಿ ತಯಾರಿಸುತ್ತಿರುವ ಎಂಟಿಆರ್ ಕೇವಲ ಲಾಭಕ್ಕಾಗಿ ಗುಣಮಟ್ಟವನ್ನು ಎಂದಿಗೂ ತ್ಯಾಗ ಮಾಡುವುದಿಲ್ಲ ಎನ್ನುತ್ತಾರೆ ಎಂಟಿಆರ್ ಸಂಸ್ಥೆಗಳ ಕಾರ್ಯನಿರ್ವಾಹಕ ನಿರ್ದೇಶಕರಾಗಿರುವ ಸದಾನಂದ ಮಯ್ಯ.

ತುರ್ತು ಪರಿಸ್ಥಿತಿಯ ಸಮಯದಲ್ಲಿ ಸರ್ಕಾರದ ಅಸಹಕಾರ ಮನೋಭಾವದಿಂದಾಗಿ, ಅಗ್ಗದ ದರಗಳಲ್ಲಿ ತಿಂಡಿ ಪದಾರ್ಥಗಳನ್ನು ಪೂರೈಸಲು ಗುಣಮಟ್ಟವನ್ನು ಕೈ ಬಿಡಲು ಒಪ್ಪದ ಎಂಟಿಆರ್ ವ್ಯವಸ್ಥಾಪಕರು ಒಂಬತ್ತು ತಿಂಗಳ ಕಾಲ ಹೋಟೇಲನ್ನು ಮುಚ್ಚಿದ್ದರು. ಆ ಸಮಯದಲ್ಲಿ ಕೆಲಸಗಾರರನ್ನು ಮನೆಗೆ ಕಳುಹಿಸಲು ಇಷ್ಟಪಡದೇ ಅವರಿಗೆ ಉದ್ಯೋಗ ಒದಗಿಸುವುದಕ್ಕೆ ಪ್ರಾರಂಭವಾದದ್ದೇ ಎಂ.ಟಿ.ಆರ್. ಡಿಪಾರ್ಟ್‌ಮೆಂಟಲ್ ಸ್ಟೋರ್ಸ್. ಇಲ್ಲಿಯೂ ಸಹ ಶುದ್ಧವಾದ ಕಲಬೆರಕೆಯಾಗದ ದಿನಸಿ ಹಾಗೂ ಆಹಾರವಸ್ತುಗಳನ್ನು ಮಾರಾಟ ಮಾಡಲಾಗುತ್ತಿತ್ತು. ಗ್ರಾಹಕರ ಬೇಡಿಕೆಯ ಮೇರೆಗೆ ಕ್ರಮೇಣ ರವೆ ಇಡ್ಲಿ ಮಿಕ್ಸ್, ಇತರ ಇನ್ಸ್‌ಟಂಟ್ ಆಹಾರಗಳು, ಗುಲಾಬ್ ಜಾಮೂನ್ ಮಿಕ್ಸ್ ಮುಂತಾದ ಸಿಹಿ ತಿಂಡಿಗಳ ಮಿಕ್ಸ್‌ಗಳನ್ನು ತಯಾರಿಸಲಾರಂಭಿಸಿತು. ಪರಿಣಾಮವಾಗಿ ಎಂ.ಟಿ.ಆರ್. ಫುಡ್ ಪ್ರಾಡಕ್ಟ್ಸ್ ಹಾಗೂ ಎಂ.ಟಿ.ಆರ್. ಕಾಂಡಿಮೆಂಟ್ಸ್ ಸಂಸ್ಥೆಗಳು ಉದಯವಾದವು. ಅನಂತರ ಮಸಾಲಾ ಮತ್ತು ಸಾಂಬಾರ ಪದಾರ್ಥಗಳ ತಯಾರಿಕೆಗಾಗಿ ಎಂಟಿಆರ್ ಡಿಸ್ಟ್ರಿಬ್ಯೂಟರ್ಸ್, ಸಿಹಿ ಭಕ್ಷ್ಯಗಳ ತಯಾರಿಕೆಗೆ ಅರವಿಂದ್ ಎಂಟರ್‌ಪ್ರೈಸಸ್, ತಿನ್ನಲು ಸಿದ್ಧವಾದ ಆಹಾರಗಳ ತಯಾರಿಕೆಗಾಗಿ ಶರ್ವಾಣಿ ಫುಡ್ ಪ್ರಾಡಕ್ಟ್ಸ್ ಮತ್ತು ಈ ಎಲ್ಲವನ್ನೂ ವಿದೇಶಗಳಿಗೆ ರಫ್ತು ಮಾಡುವ ಸಲುವಾಗಿ ಎಂಟಿಆರ್ ಇಂಟರ್‌ನ್ಯಾಷನಲ್ ಸಂಸ್ಥೆಗಳು ಪ್ರಾರಂಭವಾದವು. ಇವೆಲ್ಲ ಎಂಟಿಆರ್ ಲಾಂಛನದಡಿಯಲ್ಲೇ ಸ್ಥಾಪಿಸಲಾಗಿದ್ದು ಸದಾನಂದ ಮೈ ಮತ್ತು ಹರಿಶ್ಚಂದ್ರ ಮಯ್ಯ ಅವರುಗಳು ಈ ಸಂಸ್ಥೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ.



ಬೆಂಗಳೂರಿಗೆ ಭೇಟಿ ಕೊಡುವ ಯಾರೇ ಆಗಿರಲಿ ಎಂಟಿಆರ್‌ಗೆ ಭೇಟಿ ಕೊಡದೆ ಹಿಂದಿರುಗುವುದು ಅಪರೂಪ. ವಿದೇಶೀಯರೂ ಸಹ ಇದಕ್ಕೆ ಅಪವಾದವಲ್ಲ.

ಲಾಲ್‌ಬಾಗ್ ಸಮೀಪದ ಮಾವಳ್ಳಿ ಟಿಫಿನ್ ರೂಮ್ಸ್ ಒಳ ಪ್ರವೇಶಿಸುತ್ತಿದ್ದಂತೆಯೇ ಘಮ ಘಮ ತುಪ್ಪದ ವಾಸನೆ ನಿಮ್ಮನ್ನು ಆಕರ್ಷಿಸುತ್ತದೆ. ಸಾಮಾನ್ಯವಾಗಿ ಅಲ್ಲಿ ಸ್ಥಳ ಸಿಕ್ಕುವುದು ಕಷ್ಟ. ಹೀಗಾಗಿ ಒಂದು ಸುಸಜ್ಜಿತ ವೇಯಿಟಿಂಗ್ ರೂಂ ಇದೆ. ಅನಂತರ ಸೀಟುಗಳು ಖಾಲಿಯಾದಾಗ ನಿಮಗೆ ಅಲ್ಲಿ ಪ್ರವೇಶ. ಮೆನು ಕಾರ್ಡ್ ಅಲ್ಲಿ ದೊರೆಯುವ ತಿಂಡಿ ಪದಾರ್ಥಗಳ ಪಟ್ಟಿ ನೀಡುತ್ತದೆ. ಆ ಪೈಕಿ ಅತ್ಯಂತ ಜನಪ್ರಿಯ ಖಾದ್ಯ ರವೆ ಇಡ್ಲಿ, ಕೇಸರೀಭಾತ್, ಮಸಾಲೆ ದೋಸೆ, ಬಾದಾಮಿ ಹಲ್ವ. ಎಲ್ಲ ಶುಚಿ ರುಚಿ.

ಒಮ್ಮೆ ತಮಿಳುನಾಡಿನ ಪತ್ರಕರ್ತರ ತಂಡವೊಂದು ಎಂ.ಟಿ.ಆರ್.ಗೆ ಭೇಟಿ ಕೊಟ್ಟು ಅಲ್ಲಿನ ನೈರ್ಮಲ್ಯ ಹಿತವಾದ ಪರಿಸರ ಹಾಗೂ ಶುಚಿ ರುಚಿಯಾದ ತಿಂಡಿಗಳನ್ನು ನೋಡಿ

"ಪಾರ್ತಾಲೇ ಪಸಿ ತೀರುಂ" (ನೋಡಿದರೇ ಹಸಿವು ಹಿಂಗುತ್ತದೆ)

–ಎಂದು ಉದ್ಗರಿಸಿದರಂತೆ. ಇದಕ್ಕಿಂತ ಬೇರೆ ಅರ್ಹತಾ ಪತ್ರ ಬೇಕೇ? ಅಮೆರಿಕಾದ ನ್ಯೂಯಾರ್ಕ್ ಟೈಂಸ್‌ನ ಪ್ರತಿನಿಧಿ ಎಂಟಿಆರ್‌ಗೆ ಭೇಟಿ ನೀಡಿ ಅದರ ವೈಶಿಷ್ಟ್ಯದ ಬಗೆಗೆ ಲೇಖನ ಬರೆದಿದ್ದಾರೆ. ಆ ಲೇಖನವನ್ನೋದಿ ಅನೇಕ ಮಂದಿ ಅಮೆರಿಕನ್ನರು ಬೆಂಗಳೂರಿಗೆ ಬಂದಾಗ ತಪ್ಪದೆ ಎಂಟಿಆರ್‌ಗೆ ಭೇಟಿ ನೀಡಿ ತೃಪ್ತಿ ಹೊಂದಿ ಹಿಂದಿರುಗುತ್ತಾರೆ.

1984ರಲ್ಲಿ ಒಂದು ಕಂಟೈನರ್ ಕಾಂಡಿಮೆಂಟ್ಸ್ ಕುವೈತ್‌ಗೆ ರಫ್ತಾದವು. ಇಂದು ಎಂ.ಟಿ.ಆರ್‌ನ ಆಹಾರೋತ್ಪನ್ನಗಳು ಮುಖ್ಯವಾಗಿ ಅಮೆರಿಕ, ಇಂಗ್ಲೆಂಡ್, ಆಸ್ಟ್ರೇಲಿಯ, ಆಫ್ರಿಕಾ, ಸಿಂಗಪೂರ್ ಹಾಗೂ ಗಲ್ಫ್ ರಾಷ್ಟ್ರಗಳಿಗೆ ರಫ್ತಾಗುತ್ತವೆ.

ಮಾವಳ್ಳಿ ಟಿಫಿನ್ ರೂಮ್ಸ್ ಅನ್ನು ಮೊಟ್ಟ ಮೊದಲಿಗೆ 1924 ರಲ್ಲಿ ಪ್ರಾರಂಭಿಸಿದವರು ಪರಮೇಶ್ವರ ಮಯ್ಯ ಅವರದು ಅವಿಭಕ್ತ ಕುಟುಂಬ. ಅವರ ಇತರ ಸೋದರರು ಗಣಪಯ್ಯ ರಾಮ ಮಯ್ಯ ಮತ್ತು ಕಡೆಯವರು ಯಜ್ಞನಾರಾಯಣ ಮಯ್ಯ

(ಸದಾನಂದ ಮಯ್ಯ ಅವರ ತಂದೆ) ಇವರೆಲ್ಲ ಆ ದಿನಗಳಲ್ಲಿ ಮನೆಗಳಲ್ಲಿ ಅಡಿಗೆ ಕೆಲಸ ಮಾಡುತ್ತಿದ್ದವರು. 1932ರಲ್ಲಿ ಪರಮೇಶ್ವರ ಮಯ್ಯ ನಿಧನರಾದ ನಂತರ ಕಡೆಯ ಸೋದರ ಯಜ್ಞನಾರಾಯಣ ಮಯ್ಯ ಹೋಟೆಲ್‌ನ ಆಡಳಿತವನ್ನು ವಹಿಸಿಕೊಂಡರು. ಅವರ ಕಾಲದಲ್ಲೇ ಎಂಟಿಆರ್ ಒಳ್ಳೆಯ ಹೆಸರು, ಕೀರ್ತಿ ಗಳಿಸಿತು ಎನ್ನಬಹುದು. ಬಹುದಿನಗಳವರೆಗೆ ಜನ ಎಂ.ಟಿ.ಆರ್ ಅನ್ನು ಯಜ್ಞಪ್ಪನವರ ಹೋಟೆಲ್ ಎಂದೇ ಕರೆಯುತ್ತಿದ್ದರು. 1950ರಲ್ಲಿ ಯಜ್ಞಪ್ಪನವರು ಪತ್ರಕರ್ತ ಮಿತ್ರ ಕೆ. ಜೀವಣ್ಣರಾವ್ ಅವರೊಂದಿಗೆ ಇಂಗ್ಲೆಂಡ್ ಪ್ರವಾಸ ಕೈಗೊಂಡರು. ಅಲ್ಲಿಂದ ಹಿಂದಿ



ಹರಿಶ್ಚಂದ್ರ ಮಯ್ಯ



ಸದಾನಂದ ಮಯ್ಯ









ರುಗಿದ ನಂತರ ಹೋಟೆಲ್‌ನಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು. ಮೊಟ್ಟ ಮೊದಲಿಗೆ ಪ್ಲೇಟು ಲೋಟಗಳನ್ನು ತೊಳೆಯಲು ಸ್ಟರ್ಲೈಸೇಷನ್ ತಂತ್ರವನ್ನು ರೂಪಿಸಿದರು. ಶುಚಿತ್ವ ಮತ್ತು ಆರೋಗ್ಯ ನಿಯಮಗಳಿಗೆ ಪ್ರಥಮ ಆದ್ಯತೆ ನೀಡಿದರು. ಅದರಿಂದಾಗಿಯೇ ಎಂಟಿಆರ್ ಇತರ ಹೋಟೆಲ್‌ಗಳಿಗಿಂತ ವಿಭಿನ್ನವಾಗಿ ತನ್ನದೇ ವೈಶಿಷ್ಟ್ಯ ಗಳಿಸಿತು. 1960ರಲ್ಲಿ ರೆಸ್ಟಾರೆಂಟನ್ನು ಈಗಿರುವ ಹೊಸ ಕಟ್ಟಡಕ್ಕೆ ಬದಲಾಯಿಸಿದರು. 1968ರಲ್ಲಿ ಯಜ್ಞಪ್ಪನವರು ನಿಧನರಾದ ನಂತರ ಕುಟುಂಬದಲ್ಲಿ ಯಾರೂ ಎಂಟಿಆರ್‌ನ ಜವಾಬ್ದಾರಿ ವಹಿಸಲು ಮುಂದಾಗಲಿಲ್ಲ. ಕಾರಣ ಎಲ್ಲರೂ ಡಬ್ಬಲ್ ಗ್ರಾಜುಯೇಟ್‌ಗಳು. ಒಬ್ಬರು ವೈದ್ಯರು, ಒಬ್ಬರು ಚಾರ್ಟರ್ಡ್ ಅಕೌಂಟೆಂಟ್, ಹೀಗೆ ವಿವಿಧ ವೃತ್ತಿಗಳನ್ನು ಆರಿಸಿಕೊಂಡರು. ಆಗ ಯಜ್ಞಪ್ಪನವರ ಪುತ್ರ ಎಂಜಿ





ನಿಯರಿಂಗ್ ಪದವೀಧರರಾಗಿದ್ದ ಸದಾನಂದ ಮಯ್ಯ ಮತ್ತು ಹರಿಶ್ಚಂದ್ರ ಮಯ್ಯ ಈ ಉದ್ಯಮವನ್ನು ನಿರ್ವಹಿಸಲು ಮುಂದಾದರು. ಇಂದು ಎಂಟಿಆರ್ ಸಾಧಿಸಿರುವ ಮುನ್ನಡೆಗೆ ಮಯ್ಯ ಸೋದರರ ದೂರ ದರ್ಶಿತ್ವ ಹಾಗೂ ನಿರಂತರ ಪರಿಶ್ರಮವೇ ಕಾರಣ ಎಂದರೆ ತಪ್ಪಾಗದು.

ಕಳೆದ ಆರು ದಶಕಗಳಲ್ಲಿ ಎಂಟಿಆರ್ ಸಾಧಿಸಿರುವ ಮುನ್ನಡೆ ಹಾಗೂ ಗಳಿಸಿರುವ ಅಂತರರಾಷ್ಟ್ರೀಯ ಖ್ಯಾತಿ ಒಂದು ರೋಚಕ ಇತಿಹಾಸ.

ಈ ವಿಶಿಷ್ಟ ಸಂಸ್ಥೆಯ ಸಾಧನೆಗಳ ಬಗೆಗೆ ಮತ್ತಷ್ಟು ವಿವರಗಳನ್ನು ಸಂಗ್ರಹಿಸಲು 'ವನಿತಾ' ಎಂಟಿಆರ್‌ನ ಕಾರ್ಯನಿರ್ವಾಹಕ ನಿರ್ದೇಶಕರಾದ ಸದಾನಂದ ಮಯ್ಯ ಅವರನ್ನು ಭೇಟಿ ಮಾಡಿ ನಡೆಸಿದ ಮಾತುಕತೆಗಳ ಸಂಕ್ಷಿಪ್ತ ವಿವರ ಇಲ್ಲಿದೆ :

*ಎಂಜಿನಿಯರಿಂಗ್ ಪದವೀಧರರಾದ ನೀವು ಈ ಉದ್ಯಮಕ್ಕೆ ಅರ್ಪಿಸಿಕೊಂಡದ್ದು ಹೇಗೆ?

–ಅದು ಅನಿವಾರ್ಯವಾಗಿತ್ತು. ಹರಿಕೃಷ್ಣ ಅವರ ತಂದೆ ಪರಮೇಶ್ವರ ಮಯ್ಯ ಸ್ಥಾಪಿಸಿ, ನನ್ನ ತಂದೆ ಬೆಳೆಸಿ ಪೋಷಿಸಿದ ಈ ಹೋಟೆಲನ್ನು ಕೈಬಿಡಲು ನಮಗೆ ಮನಸ್ಸು ಬರಲಿಲ್ಲ. ಜತೆಗೆ ಪ್ರಾರಂಭದಿಂದ ಉದ್ಯೋಗದಲ್ಲಿರುವ ಕೆಲಸಗಾರರು ಬೀದಿ ಪಾಲಾಗು ವುದೂ ನಮಗಿಷ್ಟವಿರಲಿಲ್ಲ. ಹೀಗಾಗಿ ನಾನು ಮತ್ತು ಹರಿಶ್ಚಂದ್ರ ಈ ಉದ್ಯಮದಲ್ಲೇ ನೆಲೆಯೂರಲು ನಿರ್ಧರಿಸಿದೆವು. ಪಿಡಬ್ಲ್ಯುಡಿ. ಇಲಾಖೆಯಿಂದ ನಿವೃತ್ತ ರಾದ ಹರಿಶ್ಚಂದ್ರ ಈಗ ನಮ್ಮ ಡಿಪಾರ್ಟ್‌ಮೆಂಟಲ್ ಸ್ಟೋರ್ ನೋಡಿಕೊಳ್ಳುತ್ತಿದ್ದಾರೆ. ಏನು ಮಾಡಬೇಕಾ ದರೂ ನಾನು ಈ ಹಿರಿಯರ ಸಲಹೆ ಸೂಚನೆಗಳನ್ನು ಪಡೆಯದೆ ಮುಂದೆ ಹೋಗುವುದಿಲ್ಲ.

* ನೀವು ಎಂಜಿನಿಯರಿಂಗ್ ಪದವೀಧರರಾದದ್ದು ಯಾವಾಗ?

–1971ರಲ್ಲಿ, ಬಿ.ಎಂ.ಎಸ್. ಕಾಲೇಜಿನಿಂದ. ಅಷ್ಟು ಹೊತ್ತಿಗೆ ನಮ್ಮ ತಂದೆ ನಿಧನರಾಗಿದ್ದುದರಿಂದ ನಾನು ಎಂಟಿಆರ್ ಆಡಳಿತವನ್ನು ವಹಿಸಿಕೊಂಡಿದ್ದೆ.

*ನೀವು ಹೋಟೆಲ್ ಉದ್ಯಮದಿಂದ ಆಹಾರೋ ತ್ಪನ್ನಗಳ ಉದ್ಯಮಕ್ಕೆ ಬಂದದ್ದು ಹೇಗೆ?

–1975ರಲ್ಲಿ ತುರ್ತು ಪರಿಸ್ಥಿತಿ ಘೋಷಿಸ ಲಾಯಿತಷ್ಟೇ? ಆಗ ರಾಜ್ಯ ಸರ್ಕಾರ ಹೋಟೆಲ್‌ಗಳಲ್ಲಿ ಆಹಾರ ವಸ್ತುಗಳ ಬೆಲೆಯನ್ನು ನಿಗದಿ ಪಡಿಸಿ ನಿರ್ಬಂಧ ಪಡಿಸಿತು. ಅಕ್ಕಿ ಇಡ್ಲಿ 10 ಪೈಸೆ, ದೋಸೆ 40 ಪೈಸೆ, ಕಾಫಿ 25 ಪೈಸೆಯಂತೆ ನಿಗದಿಪಡಿಸಲಾಗಿತ್ತು. ಬೇರೆ ಹೋಟೆಲ್‌ಗಳಿಗೆ ಅದರಿಂದ ಅಂಥ ತೊಂದರೆ ಇರಲಿಲ್ಲ. ಆದರೆ ನಾವು ದೋಸೆಗೆ ಬಳಸುತ್ತಿದ್ದ ಅಪ್ಪಟ ತುಪ್ಪದ ಬೆಲೆಯೇ 60 ಪೈಸೆಯಷ್ಟಾಗುತ್ತಿತ್ತು. ಹಾಗೆಯೇ ಎಲ್ಲಾ ಆಹಾರಗಳಿಗೂ ನಾವು ಶುದ್ಧ ವಸ್ತುಗಳನ್ನು ಬಳಸುತ್ತಿದ್ದುದರಿಂದ ಸರ್ಕಾರ ನಿಗದಿ ಪಡಿಸಿದ ಬೆಲೆಗೆ ಮಾರಲು ಸಾಧ್ಯವಿರಲಿಲ್ಲ. ಹಾಗೆಯೇ ಸುಮಾರು 15 ದಿವಸ ನಡೆಸಿದೆವು. ಪ್ರತಿ ದಿನ ನ್ಯೂಸ್‌ಪೇಪರ್‌ನಲ್ಲಿ ಬೆಲೆ ಪಟ್ಟಿ ವಿವರಿಸಿ ನಮಗೆ ಎಷ್ಟು ನಷ್ಟವಾಗುತ್ತಿದೆ ಅಂತ ಪ್ರಕಟಿಸುತ್ತಿದ್ದೆವು. ಸರ್ಕಾರಕ್ಕೂ ಮೊರೆಯಿಟ್ಟೆವು. ಆದರೆ ಪ್ರಯೋಜನವಾಗಲಿಲ್ಲ. ಆ ನಂತರ ಹೋಟೆಲನ್ನು ಅನಿವಾರ್ಯವಾಗಿ ಮುಚ್ಚಬೇಕಾಯಿತು. ಈ ಅವಧಿ ಯಲ್ಲಿ ಒಂದು ಲಕ್ಷ ರೂ.ಗಳಿಗೂ ಹೆಚ್ಚು ನಷ್ಟವಾಗಿತ್ತು. ಹೀಗೆ 9 ತಿಂಗಳು ಕಳೆದೆವು. ಆದರೆ ಸರ್ಕಾರದಿಂದ

ಎಂಟಿಆರ್‌ನಲ್ಲಿ ಪ್ರತಿದಿನ ತಯಾರಿಸುವ ತಿನಿಸುಗಳ ವಿವರ

1,500 ಅಕ್ಕಿ ಇಡ್ಲಿ
1440 ರವಾ ಇಡ್ಲಿ
1,500 ದೋಸೆಗಳು

ಯಾವ ರಿಯಾಯಿತಿಯೂ ದೊರೆಯಲಿಲ್ಲ. ಹಾಗೇ ಇದ್ದರೆ ನಮ್ಮಲ್ಲಿದ್ದ ಕೆಲಸಗಾರರ ಗತಿ ಏನು? ಅವರಿಗೆ ಊಟ, ವಸತಿ, ಸಂಬಳ ಇದಕ್ಕೆಲ್ಲಾ ಏನು ಮಾಡು ವುದು? ಯಾರನ್ನೂ ಕೆಲಸದಿಂದ ತೆಗೆಯುವಂತಿರಲಿಲ್ಲ. ಹೆಚ್ಚಿನವರು ನಮ್ಮ ತಂದೆಯವರ ಕಾಲದಿಂದ ಇದ್ದವರು. ಆದ್ದರಿಂದ ಡಿಪಾರ್ಟ್‌ಮೆಂಟಲ್ ಸ್ಟೋರ್ ತೆರೆಯಲು ನಿರ್ಧರಿಸಿದೆವು. ದಿನಸಿ ವಸ್ತುಗಳು ಜತೆಗೆ ಸಾಂಬಾರ ಪದಾರ್ಥಗಳನ್ನು ತಯಾರಿಸಿ ಮಾರಾಟ ಮಾಡ ಲಾಗುತ್ತಿತ್ತು. ಇಲ್ಲಿಯೂ, ಶುಚಿ, ರುಚಿಯೇ ನಮ್ಮ ವೈಶಿಷ್ಟ್ಯ. ಕಲಬೆರಕೆಯಿಲ್ಲದ ಶುದ್ಧ ವಸ್ತುಗಳನ್ನೇ ಬಳಸುತ್ತಿದ್ದೆವು. ಹೀಗಾಗಿ ವ್ಯಾಪಾರ ಚೆನ್ನಾಗಿ ಕುದುರಿ ಕ್ರಮೇಣ ಕಾಂಡಿಮೆಂಟ್ಸ್ ಮತ್ತಿತರ ಉತ್ಪನ್ನಗಳನ್ನು ತಯಾರಿಸಿ ಮಾರಾಟ ಮಾಡಲಾರಂಭಿಸಿದೆವು. ಮುಂದೆ 1977ರಲ್ಲಿ ಹೋಟೆಲನ್ನು ಪುನರಾರಂಭಿಸಿದ ನಂತರವೂ ಈ ಉದ್ಯಮವನ್ನು ಮುಂದುವರೆಸಿಕೊಂಡು ಬಂದೆವು. ಗ್ರಾಹಕರ ಬೇಡಿಕೆಯ ಮೇರೆಗೆ ಹೊಸ ಹೊಸ ಆಹಾರೋತ್ಪನ್ನಗಳನ್ನು ತಯಾರಿಸತೊಡಗಿದೆವು. ಮೊದಲು ರವೆ ಇಡ್ಲಿ ಮಿಕ್ಸ್ ಮತ್ತು ಜಾಮೂನ್ ಮಿಕ್ಸ್ ಬಳಕೆಗೆ ತಂದೆವು.

*ಎಂಟಿಆರ್‌ನ ವೈಶಿಷ್ಟ್ಯ ರವೆ ಇಡ್ಲಿ ಅಲ್ಲವೇ? ಹೋಟೆಲ್‌ನಲ್ಲೂ ನೀವು ಇದೇ ಮಿಕ್ಸ್ ಬಳಸು ತ್ತಿರುವಿರಾ?

–ಹೌದು. ಒಂದೇ ವ್ಯತ್ಯಾಸವೆಂದರೆ ನಾವು ಮಿಕ್ಸ್ ತಯಾರಿಸಿ ಒಂದು ದಿನ ಬಿಟ್ಟು ಅದನ್ನು ಕೂಲ್ ಆಗಲು ಬಿಟ್ಟು ಮಾರನೆಯ ದಿನ ಪ್ಯಾಕ್ ಮಾಡುತ್ತೇವೆ. ಆದರೆ ಹೋಟೆಲ್‌ನಲ್ಲಿ ಅಂದೇ ಉಪಯೋಗಿಸುತ್ತೇವೆ.

*ಗುಲಾಬ್ ಜಾಮೂನ್ ಯಾವಾಗಿನಿಂದ ತಯಾರಿಸುತ್ತಿರುವಿರಿ?





–1983ರಿಂದ, ಇತರ ಬ್ರಾಂಡ್‌ಗಳ ಜಾಮೂನ್‌ಗಳಲ್ಲಿ ಮಧ್ಯೆ ಬೀಜದಂತೆ ಇರುತ್ತದೆ ಅಥವಾ ಕಲ್ಲಿನಂತೆ ಗಟ್ಟಿಯಾಗಿ ಇರುತ್ತದೆ. ಆದರೆ ನಮ್ಮದು ಸಂಪೂರ್ಣವಾಗಿ ಮೃದುವಾಗಿರುತ್ತದೆ.

*ಸಿಹಿಗಳಲ್ಲಿ ಗುಲಾಬ್ ಜಾಮೂನ್ ಬಿಟ್ಟರೆ ಬೇರೆ ಯಾವ ಉತ್ಪನ್ನ ಜನಪ್ರಿಯವಾಗಿದೆ?

–ಕೇಸರಿಭಾತ್ ಇದೆ. ಆದರೆ ಅದರ ಮಾರಾಟ ಇಂದಿಗೂ ಒಂದು ಪ್ರಾಬ್ಲಂ ಆಗಿದೆ. ಅದು ವೆಚ್ಚಕ್ಕೆ ಸಂಬಂಧಿಸಿದುದು. ಕೇಸರೀಭಾತ್‌ನಲ್ಲಿ ನಾವು ಗೇರು ಬೀಜ, ತುಪ್ಪ, ಒಣದ್ರಾಕ್ಷಿ ಹಾಗೂ ಅಪ್ಪಟ ಕೇಸರಿ ಬಳಸುತ್ತೇವೆ. ಕೇಸರಿ ಬೆಲೆ 25 ಗ್ರಾಂಗೆ 25 ರೂಪಾಯಿ. ಒಣದ್ರಾಕ್ಷಿ ಬೆಲೆ ಸುಮಾರು 250 ರೂ. ಅದರಿಂದಾಗಿ ಒಂದು ಪ್ಯಾಕೆಟ್‌ಗೆ ನಮಗೆ ತಗಲುವ ವೆಚ್ಚ ಕನಿಷ್ಠ 16ರಿಂದ 17 ರೂ.ಗಳು. ಆದುದರಿಂದ ಶ್ರೀಮಂತರು ಮಾತ್ರ ಇದನ್ನು ಕೊಳ್ಳಲು ಸಾಧ್ಯ. ಆದರೆ ಜಾಮೂನ್ ಜನಪ್ರಿಯವಾಗಿದೆ. ಸದ್ಯದಲ್ಲಿಯೇ ಕ್ಯಾರೆಟ್ ಹಲ್ವ ಮಾರುಕಟ್ಟೆಗೆ ತರುವ ಯೋಜನೆಯಿದೆ.

*ಉಪ್ಪಿನ ಕಾಯಿ ತಯಾರಿಕೆಯನ್ನು ಯಾವಾಗ ಪ್ರಾರಂಭಿಸಿದಿರಿ? ಎಷ್ಟು ಬಗೆ?

–1985ರಲ್ಲಿ ಪ್ರಾರಂಭಿಸಿದೆವು. ಈಗ ಏಳು ಬಗೆಯ ಉಪ್ಪಿನಕಾಯಿಗಳನ್ನು ತಯಾರಿಸುತ್ತಿದ್ದೇವೆ– ಮಾವಿನಕಾಯಿ, ಮಿಡಿ, ಆವಕ್ಕಾಯಿ, ಗೋಂಗೂರ, ನಿಂಬೇ, ಮಿಕ್ಸಡ್ ಫ್ರುಟ್. ಇತರ ಕಾಂಡಿಮೆಂಟ್ಸ್‌ಗಳೆಂದರೆ ರಸಂಪುಡಿ, ಸಾಂಬಾರ್‌ಪುಡಿ ಮತ್ತು ಇವುಗಳ ದಿಢೀರ್ ಮಿಕ್ಸ್, ವಾಂಗೀಭಾತ್‌ಪುಡಿ, ಚಟ್ನಿಪುಡಿ, ಪುಳಿಯೋಗರೆ ಪುಡಿ, ಗುಂಟೂರು ಮೆಣಸಿನಕಾಯಿ ಪುಡಿ, ಧನಿಯ ಪುಡಿ, ಜೀರಿಗೆ ಪುಡಿ, ಮೆಣಸು ಪುಡಿ, ಗರಂ ಮಸಾಲಾ ಮುಂತಾದುವನ್ನು ತಯಾರಿಸುತ್ತಿದ್ದೇವೆ.

* ಇಂತಹ ಸಾಮಗ್ರಿಗಳನ್ನು ತಯಾರಿಸುವಲ್ಲಿ ನಿಮ್ಮ ವೈಶಿಷ್ಟ್ಯವೇನು?

–ವಿವಿಧ ಪುಡಿಗಳನ್ನು ತಯಾರಿಸುವಲ್ಲಿ ನಮ್ಮ ವೈಶಿಷ್ಟ್ಯವೆಂದರೆ, ಇಲ್ಲಿ ನಾವು ಮನೆಯಲ್ಲಿ ಮಾಡುವಂತೆಯೇ ಕುಟ್ಟಿ ಪುಡಿ ಮಾಡುತ್ತೇವೆ. ಯಂತ್ರಗಳ ಮೂಲಕ ಪುಡಿಗಳನ್ನು ತಯಾರಿಸುವುದಿಲ್ಲ. ಈ ವಿಧಾನ ಸ್ವಲ್ಪ ನಿಧಾನವಾದರೂ ರುಚಿ–ಬಣ್ಣ ಆಕರ್ಷಕವಾಗಿರುತ್ತದೆ. ಇನ್ನೊಂದೆರಡು ವರ್ಷಗಳಲ್ಲಿ ಜಾಮ್, ಸಾಸ್ ಮುಂತಾದುವನ್ನು ನಾವು ಮಾಡಲಿದ್ದೇವೆ.

*ಇವೆಲ್ಲ ಎಷ್ಟು ಕಾಲ ಬಾಳಿಕೆ ಬರುತ್ತವೆ?

–ಪಚನಕ್ರಿಯೆಗೆ ಮುಖ್ಯವಾಗಿ ಬೇಕಾದ ಪ್ರಾಣವಾಯು ಆಹಾರದ ಒಂದು ಪ್ರಮುಖ ಮುಖ್ಯ ಅಂಶ. ಇಲ್ಲಿ ನಾವು ಬ್ಯಾಕ್ಟೀರಿಯಾಗಳನ್ನು ನಿವಾರಿಸಬೇಕಾಗುತ್ತದೆ. ಪ್ಯಾಕೆಟ್ ಒಳಗೆ ಸ್ವಚ್ಛತೆ ಅತಿ ಮುಖ್ಯ. ಸಾಮಗ್ರಿಯನ್ನು ತುಂಬಿದ ನಂತರವೇ ಸ್ಟರ್ಲೈಸ್ ಮಾಡುತ್ತೇವೆ. ಹಾಗೂ ನಂತರ ಪ್ಯಾಕೆಟ್ ಸೀಲ್ ಮಾಡುತ್ತೇವೆ. ಇವೆಲ್ಲವನ್ನೂ ಆಟೋಮ್ಯಾಟಿಕ್ ಮೆಷಿನ್‌ನಿಂದ ಮಾಡುತ್ತೇವೆ. ಇದರಿಂದಾಗಿ ತಯಾರಿಸುವ ಆಹಾರ ಸಾಮಗ್ರಿಗಳು ಒಂದು ವರ್ಷ ಬಾಳಿಕೆ ಬರುತ್ತವೆ. ಆದರೆ ಭಾರತೀಯ ಸ್ಥಿತಿ–ಗತಿಗಳ ಹಿನ್ನೆಲೆಯಲ್ಲಿ ಈ ವಿಷಯದಲ್ಲಿ ಶೇಕಡಾ 100 ಪರಿಣಾಮ ಕಾಣಲು ಸಾಧ್ಯವಾಗುತ್ತಿಲ್ಲ. ಉಷ್ಣತೆ 117 ಡಿಗ್ರಿಗೆ ತಲುಪಿದಾಗ ಮಾತ್ರ ಈ ಫಲಿತಾಂಶ ಪಡೆಯಲು ಸಾಧ್ಯ. ನಾವು 105ರಿಂದ 106 ಡಿಗ್ರಿವರೆಗೆ ಸಾಧಿಸಿದ್ದೇವೆ. ಬರುವ ವರ್ಷದೊಳಗೆ ಅವಶ್ಯಕ ಉಷ್ಣತಾಮಾನ ಪಡೆಯಲು ಸರಿಯಾದ ಫಲಿತಾಂಶ ಪಡೆಯುವ ಭರವಸೆ ನಮಗಿದೆ.

ಅಸಲು ಕರ್ನಾಟಕದ ತಿನಿಸುಗಳಾದ ಕೇಸರಿ ಭಾತ್, ಕಾರಾಭಾತ್‌ಗಳನ್ನೂ ಈ ವಿಧಾನದಲ್ಲಿ ಪ್ಯಾಕ್ ಮಾಡುವ ಕುರಿತು ಒಂದು ಆಲೋಚನೆಯೂ ಇದೆ.

*ನಕಲಿ ಸಾಮಗ್ರಿಗಳ ಹಾವಳಿ ವಿಪರೀತ. ಹೀಗಿರುವಾಗ ನಿಮ್ಮ ತಯಾರಿಕೆಗೇನಾದರೂ ಈ ನಕಲಿ ಸಾಮಗ್ರಿಗಳಿಂದ ತೊಂದರೆ?

–ತುಂಬಾ ಇದೆ. ನಾವು ಪಾಲಿಯೆಸ್ಟರ್ ಪ್ಯಾಕ್‌ಗೆ ಬರಲು ಕಾರಣವೇ ಈ ನಕಲಿ ಮಾಲುಗಳು. ಇದರಿಂದಾಗಿ ಸಣ್ಣ–ಪುಟ್ಟವರು ನಮ್ಮನ್ನು ನಕಲು ಹೊಡೆಯುವುದು ಕಷ್ಟ. ಉದಾಹರಣೆಗೆ ಒಬ್ಬರು ಎನ್.ಟಿ.ಆರ್ ಬ್ರಾಂಡ್‌ನಲ್ಲಿ ತಯಾರಿಸಿ 'ಇದು ಎಂಟಿಆರ್ ಅವರದೇ. ಆದರೆ ಬ್ರಾಂಡ್ ಮಾತ್ರ ಬದಲಾಯಿಸಿದ್ದಾರೆ ಎಂದು ಸುಳ್ಳು ಪ್ರಚಾರ ಮಾಡಿದರು. ನಾವು ಅವರಿಗೆ ಲಾಯರ್ ನೋಟೀಸ್ ಮತ್ತು ಪೋಲೀಸ್ ಕಂಪ್ಲೇಂಟ್ ನೀಡಿದೆವು. ಅಲ್ಲಿಗೆ ಆ ವ್ಯವಹಾರ ನಿಲ್ಲಿಸಿದರು. ಅವರು ಯಾವನ್ನು ಬೇಕಾದರೂ ಇಮಿಟೇಟ್ ಮಾಡಬಹುದು. ಆದರೆ ಎಂಟಿಆರ್ ಅನ್ನು ಮಾತ್ರ ಇಮಿಟೇಟ್ ಮಾಡಲು ಸಾಧ್ಯವಿಲ್ಲ.

* ರವೆ ಇಡ್ಲಿ ತಯಾರಿಕೆಯಲ್ಲಿ ನಿಮಗೆ ಬೇರೆ ಬೇರೆ ಕಂಪನಿಗಳಿಂದ ಪೈಪೋಟಿ ಇಲ್ಲವೇ?

–ಖಂಡಿತ ಇಲ್ಲ. ರವೆ ಇಡ್ಲಿ ಎಂಟಿಆರ್ ಸ್ಪೆಶಾಲಿಟಿ. ಅದರ ಕಂಪೋಸಿಷನೇ ನಮ್ಮ ತಂದೆಯವರ ಶೋಧ. ಇದು ಕರಾರುವಾಕ್ಕಾಗಿ ಬೇರೆ ಯಾರಿಗೂ ಗೊತ್ತಿಲ್ಲ.

ಈ ಕಾನ್ಸೆಪ್ಟನ್ನು ಅಭಿವೃದ್ಧಿಗೊಳಿಸಿದ ನಂತರ ಸುಮಾರು 6 ವರ್ಷಗಳ ಕಾಲ ಕಾದು (77–83) ಅನಂತರ ಮಾರಾಟಕ್ಕೆ ಬಿಡುಗಡೆ ಮಾಡಿದೆವು. ಅಲ್ಲಿಯವರೆಗೆ ನಮ್ಮ ಹೋಟೆಲ್‌ನಲ್ಲಿ ಮಾತ್ರ ಉಪಯೋಗಿಸುತ್ತಿದ್ದೆವು. ಜನರ ಪ್ರತಿಕ್ರಿಯೆ ತಿಳಿಯುವುದು ನಮಗೆ ಅಗತ್ಯವಾಗಿತ್ತು. ಈಗ ಇಡೀ ಮದರಾಸು ಮಾರುಕಟ್ಟೆಯನ್ನು ಆವರಿಸಿದ್ದೇವೆ. ಮಾರಾಟ ಮಾಡುವ ಮೊದಲು ನಾವು ಡೆಮಾನ್‌ಸ್ಟ್ರೇಷನ್ ಏರ್ಪಡಿಸಿದೆವು. ಜನರ ಎದುರಿನಲ್ಲಿ ತಯಾರಿಸಿ ಅವರಿಗೆ ತಿನ್ನಲು ಕೊಟ್ಟು ಅವರಿಗೆ ತೃಪ್ತಿಯಾದ ನಂತರ ಅವರು ಕೊಳ್ಳುವರು. ಇದು ನಮ್ಮ ತತ್ವ. ಮೊದಲ ಪ್ರಯೋಗ ನಾನೇ. ನಾವು ತಿಂದು ನಮಗೆ ತೃಪ್ತಿಯಾದ ನಂತರ ಬೇರೆಯವರಿಗೆ ಕೊಡುವುದು. ಏಕೆಂದರೆ ರವೆ ಇಡ್ಲಿಯಾಗಲೀ, ಬೇರಾವುದೇ ಮಿಕ್ಸ್ ಆಗಲೀ ನಾವು ಕೊಟ್ಟಿರುವ ಸೂಚನೆಗಳ ಪ್ರಕಾರ ಮಾಡಿದರೇನೇ ಚೆನ್ನಾಗಿ ಬರುವುದು. ಇಲ್ಲವಾದಲ್ಲಿ ಸರಿಯಾಗಿ ಬರುವುದಿಲ್ಲ. ಉದಾಹರಣೆಗೆ ರವೆ ಇಡ್ಲಿ ಮಿಕ್ಸನ್ನು ಮೊಸರಿನೊಂದಿಗೆ ಕಲೆಸಬೇಕು. ಹೆಪ್ಪು ಹಾಕಿದ ಮೊಸರು ಎಂದು ನಾವು ಹೇಳುತ್ತೇವೆ.

(32ನೇ ಪುಟ ನೋಡಿ)

## ಅತಿಹೆಚ್ಚು ರಾಷ್ಟ್ರೀಯ ಸ್ಪರ್ಧಾ ವಿಜೇತೆ

*ಇಂಡಿಯನ್ ಸ್ಕ್ವಾಷ್‌ನಲ್ಲಿ ಕುಮಾರಿ ಭುವನೇಶ್ವರಿ ಒಂದು ಅಪೂರ್ವ ದಾಖಲೆ. ಈಕೆಯ ತಂದೆ ಯಶವಂತ ಸಿಂಹ ಖ್ಯಾತ ಟೆನ್ನಿಸ್ ಕ್ರೀಡಾಪಟು. ಭುವನೇಶ್ವರಿ ಕಳೆದ 15 ವರ್ಷಗಳಿಂದಲೂ ಸ್ಕ್ವಾಷ್ ಕ್ರೀಡೆಯಲ್ಲಿ ಚಾಂಪಿಯನ್‌ಶಿಪ್ಪನ್ನು ಬೇರೆ ಯಾರಿಗೂ ಬಿಟ್ಟುಕೊಟ್ಟಿಲ್ಲ.*

*1975ರಲ್ಲಿ ಪ್ರಪ್ರಥಮವಾಗಿ ಸ್ಕ್ವಾಷ್ ಕ್ರೀಡೆಯಲ್ಲಿ ರಾಷ್ಟ್ರೀಯ ಚಾಂಪಿಯನ್ ಆದಾಗ ಭುವನೇಶ್ವರಿ ಷೋಡಶಿ. (16 ವರ್ಷ). ಅಲ್ಲಿಂದ ಇಲ್ಲಿಯವರೆಗೂ ಈಕೆ ಸೋಲು ಕಂಡುದಿಲ್ಲ. ಈಕೆ ಮಾಡಿದ ಸಾಧನೆಯನ್ನು ಭಾರತದ ಯಾವುದೇ ಕ್ರೀಡಾಪಟು ಇದುವರೆಗೂ ಮಾಡಿಲ್ಲ. 1982ರಲ್ಲಿ ಅರ್ಜುನ್ ಪ್ರಶಸ್ತಿ ಪಡೆದ ಭುವನೇಶ್ವರಿ ಉತ್ತಮ ಟೆನ್ನಿಸ್ ಆಟಗಾರ್ತಿಯೂ ಕೂಡ.*

# ಅರಳುವ ಪ್ರತಿಭೆಗಳು:



## ಶ್ರೀವಿದ್ಯಾ ರಾಮನ್ "ರಂಗಪ್ರವೇಶ"- ಲಾಲಿತ್ಯಪೂರ್ಣ ಅಭಿನಯ

ಮಡಿಕೇರಿಯ ಸ್ಟೆಂಟ್ ಜೋಸೆಫ್ ಕಾನ್ವೆಂಟಿನಲ್ಲಿ ಓದುತ್ತಿರುವ ಕು. ಶ್ರೀವಿದ್ಯಾ ರಾಮನ್ ಇತ್ತೀಚೆಗೆ ಸ್ಥಳೀಯ ಕಾವೇರಿ ಕಲಾಕ್ಷೇತ್ರದಲ್ಲಿ ಭಾರತೀಯ ಸಂಗೀತ ನೃತ್ಯ ಕಲಾಶಾಲೆಯ ಆಶ್ರಯದಲ್ಲಿ ನೀಡಿದ 'ರಂಗ ಪ್ರವೇಶ' ಕಾರ್ಯಕ್ರಮ ಮುಂದೆ ಆಕೆ ಉತ್ತಮ ನಾಟ್ಯಗಾರ್ತಿಯಾಗುವ ಸಲ್ಲಕ್ಷಣಗಳ ಸೂಚನೆಯನ್ನು ತೋರಿಸಿತು.

ಗಣಪತಿ ಸ್ತುತಿಯನ್ನು ನಾಟರಾಗದಲ್ಲಿ ಆರಂಭಿಸಿ ಪುಷ್ಪಾಂಜಲಿ ನೃತ್ಯವನ್ನು ಲವಲವಿಕೆಯಿಂದ ಅಭಿನಯಿಸಿದಳು.

ತನ್ನ ನಾಟ್ಯಾಚಾರ್ಯರಾದ ದಿ. ಅಂಬಳೆ ಸುಬ್ಬರಾಯರ ರಚನೆಯಾದ 'ಶಬ್ದಂ' ರಾಗ ಮಾಲಿಕೆಯಲ್ಲಿ ಜೋಡಿಸಲ್ಪಟ್ಟಿದ್ದು ಇದರಲ್ಲಿ ಹೊಮ್ಮಿ ಬರುವ ಜತಿ ಮತ್ತು ಸ್ವರಗಳಿಗೆ ತನ್ನ ಹೆಜ್ಜೆಯ ಗತಿಯನ್ನು ಹೊಂದಿಸಿಕೊಂಡು ಒಳ್ಳೆಯ ಅಭಿನಯ ನೀಡಿದ್ದಾರೆ. ಕು. ಶ್ರೀವಿದ್ಯಾ 'ಶಬ್ದಂ'ನಲ್ಲಿ ಮೂಡಿ ಬಂದ ಅಹಲ್ಯೋದ್ಧಾರ, ರಾವಣಗರ್ವಭಂಗ, ಸೀತಾ ಕಲ್ಯಾಣ, ಶೂರ್ಪನಖಿಯ ನಾಸಿಕಚ್ಛೇದ ಹಾಗೂ ಮಾರೀಚವಧೆಯ ಪ್ರಸಂಗಗಳನ್ನು ರಾಮಾಯಣ ದಿಂದ ಆರಿಸಿಕೊಂಡು ಅಭಿನಯಿಸಿದ್ದಾರೆ.

'ರಂಗಪ್ರವೇಶ'ದಲ್ಲಿನ ಅತ್ಯಂತ ಪ್ರಮುಖ ಹಂತವಾದ 'ವರ್ಣ'ವನ್ನು ನಾಟುಕುರಂಜಿ ರಾಗಕ್ಕೆ ಅಳವಡಿಸಲಾಗಿತ್ತು.

'ವಾಸಂತಿ' ರಾಗಕ್ಕೆ ಅಳವಡಿಸಿದ ಜಯದೇವ ಕವಿಯ ಅಷ್ಟಪದಿಯ ಭಾಗವು ಎಲ್ಲ ರೀತಿಯಿಂದಲೂ ಶ್ರೇಷ್ಠ ಮಟ್ಟದಾಗಿತ್ತು. ಕೇಶವನ ವಿರಹದಲ್ಲಿ ಪರಿತಪಿಸುವ ರಾಧಿಕೆಯ ಅಭಿನಯ ಕು. ಶ್ರೀವಿದ್ಯಾಳ ವಯಸ್ಸಿಗೆ ಮೀರಿದ್ದು.

ಪುರಂದರದಾಸರ ದೇವರ ನಾಮವೊಂದನ್ನು ಲೀಲಾಜಾಲವಾಗಿ ಅಭಿನಯಿಸಿ ಹಾಸ್ಯ ಹಾಗೂ ಲೇವಡಿ ಸ್ವರೂಪದ ಸಾಹಿತ್ಯಕ್ಕೆ ಉತ್ತಮ ಸಂಚಾರಿ ಭಾವಗಳನ್ನು ನೀಡಿದ್ದಾಳೆ, ಕು. ಶ್ರೀವಿದ್ಯಾ

ಕು. ಶ್ರೀವಿದ್ಯಾ ಮಡಿಕೇರಿಯಲ್ಲಿ ದೂರವಾಣಿ ಇಲಾಖೆಯಲ್ಲಿರುವ ಕೆ. ರಾಮನ್ ಹಾಗೂ ಸಮಾಜ ಕಲ್ಯಾಣ ಇಲಾಖೆಯಲ್ಲಿ ರುವ ಶಾರದಾ ಅವರ ಮಗಳು. ಮಡಿಕೇರಿಯ ಭಾರತೀಯ ಸಂಗೀತ ನೃತ್ಯಕಲಾಶಾಲೆಯ ವಿದ್ಯಾರ್ಥಿನಿ. ಈಕೆಯ ಗುರು. ದಿ. ಅಂಬಳೆ ಸುಬ್ಬರಾಯರು ಹಾಗೂ ಅವರ ಮಗಳು ಕು. ರಾಜೇಶ್ವರಿ

—**ಅನಸೂಯ ಸತ್ಯ**

ವರ್ಣಚಿತ್ರ: ಅನಿಲ್ ಎಚ್. ಟಿ.

# ನೃತ್ಯ ನಂದಿನಿ

ಖ್ಯಾತ ನೃತ್ಯಗಾರ್ತಿ ಶುಭಾ ನರಸಿಂಹಯ್ಯ ಕಾರ್ಯಕ್ರಮ ಬೆಂಗಳೂರಿನಲ್ಲಿ ನಡೆಯುತ್ತಿತ್ತು. 'ಶುಭಾ' ರವರ ಸೋದರಿ 'ನಂದಿನಿ' ಆಗಿನ್ನೂ ಆರು ವರ್ಷದ ಬಾಲೆ. ಶುಭಾರ ನೃತ್ಯ ನೋಡುತ್ತಿದ್ದಂತೆಯೇ ಅವರಂತ ತಾನೂ ಉತ್ತಮ ಕಲಾವಿದೆಯಾಗಬೇಕೆಂಬ ದೃಢ ನಿರ್ಧಾರ ಆ ಎಳೆಯ ಮನಸ್ಸಿಗೆ ನಾಟಿತ್ತು. ಆಸೆ ಗರಿಗೆದರುತ್ತಿದ್ದಂತೆ ಪುಟ್ಟ ಹೆಜ್ಜೆ ಇಡತೊಡಗಿದಳು. ಅಂದು ಇಟ್ಟ ಪುಟ್ಟ ಹೆಜ್ಜೆ ಇಂದು ಗೆಜ್ಜೆ ಕಟ್ಟಿಕೊಂಡು 'ನೃತ್ಯ ನಂದಿನಿ' ಎಂದು ಹೆಸರು ಪಡೆದಿದ್ದಾಳೆ.



ದಾವಣಗೆರೆ ನಗರಸಭೆಯಲ್ಲಿ ಕಂದಾಯ ಪರೀಕ್ಷಕರಾಗಿರುವ ಶ್ರೀ.ಕೆ.ರಾಮಣ್ಣ ಮತ್ತು ಶ್ರೀಮತಿ ಶಕುಂತಲಾರವರ ಪುತ್ರಿ ನಂದಿನಿಗೆ ಚಿಕ್ಕ ಪ್ರಾಯದಲ್ಲೇ ನೃತ್ಯದಲ್ಲಿ ಆಸಕ್ತಿ. ಆಸಕ್ತಿ ಕಂಡ ತಂದೆ-ತಾಯಿ ನಂದಿನಿಯ ಆಸಕ್ತಿಗೆ ನೀರೆರೆದು ಪೋಷಿಸಿದರು. ಆರಂಭದಲ್ಲಿ ಬೆಂಗಳೂರಿನ ನಾಟ್ಯಾಚಾರ್ಯ ಶ್ರೀನಿವಾಸ ಯಾದವರಲ್ಲಿ ಭರತನಾಟ್ಯ ಅಭ್ಯಾಸ. ನಂತರ ಶ್ರೀಮತಿ ಉಷಾದಾತರ್ ಶಿವಮೊಗ್ಗದಲ್ಲಿ ಆರಂಭಿಸಿದ ಭರತ ಕಲಾ ನಿಕೇತನ ನೃತ್ಯ ಶಾಲೆಯಲ್ಲಿ ಶ್ರೀ ರವಿದಾತರ್‌ರವರಿಂದ ನೃತ್ಯ ಶಿಕ್ಷಣ ಆರಂಭ. 22.5.1988ರಲ್ಲಿ ಶಿವಮೊಗ ನಗರದಲ್ಲಿ ಶ್ರೀ ಜಿ. ನಾರಾಯಣ ರವರ ಸಮ್ಮುಖದಲ್ಲಿ 'ನಂದಿನಿ ಯ ಅಧಿಕೃತ ರಂಗ ಪ್ರವೇಶವಾಯಿತು. ಸತತ ನೃತ್ಯ ಶಿಕ್ಷಣದ ಜೊತೆಗೆ ನಂದಿನಿಯ ಕಲಾಪ್ರತಿಭೆ ಹೊರಹೊಮ್ಮತೊಡಗಿತು. 1988 ರಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿ ನಡೆಸಿದ ನೃತ್ಯ ಪ್ರದರ್ಶನ ನೀಡಿ 3ನೇ ರ್‍ಯಾಂಕ್ ಪಡೆದ ನಂದಿನಿ, ರಾಜ್ಯದ ಅನೇಕ ಕಡೆ ನೃತ್ಯ ಪ್ರದರ್ಶನ ನೀಡಿ ಪೂರ್ಣತೆಯ ಕಡೆಗೆ ಹೋಗುತ್ತಿದ್ದಾಳೆ. ಸದ್ಯಕ್ಕೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ವತಿಯಿಂದ ಶಿಷ್ಯ ವೇತನ ಪಡೆಯುತ್ತಿದ್ದಾಳೆ. ಸ್ವಲ್ಪ ಕಾಲ ಬೆಂಗಳೂರಿನ ಶ್ರೀಮತಿ ಉಷಾದಾತರ್ ಮಾರ್ಗದರ್ಶನ ಮತ್ತು ಚಿತ್ರದುರ್ಗದ ನೃತ್ಯ ಕಲಾವಿದೆ ಶ್ರೀಮತಿ ಲೀಲಾ ದ್ವಾರಕನಾಥ್ ಮಾರ್ಗದರ್ಶನದಲ್ಲಿ ನೃತ್ಯದ ಪಟ್ಟುಗಳು ರೂಪ ಗೊಂಡಿವೆ.

ದಾವಣಗೆರೆ ಸೈಂಟ್ ಜೋಸೆಫ್ ಕಾನ್ವೆಂಟ್ ನಲ್ಲಿ ಹತ್ತನೇ ತರಗತಿ ಓದುತ್ತಿರುವ 'ನಂದಿನಿ'ಗೆ ಕೂಚುಪುಡಿ ಮತ್ತು ಕಥಕ್ ಕಲಿಯುವ ಆಸೆ. ಖ್ಯಾತ ಕಲಾವಿದೆ ರುಕ್ಮಿಣಿ ಆರುಂಡೇಲ್ ಮಟ್ಟಕ್ಕೆ ಏರುವ ಆಸ್ತೆ. ಡಾ। ಬರಬೋಸಾ ಮತ್ತು ಡಾ। ಪದ್ಮಾ ಸುಬ್ರಹ್ಮಣ್ಯರ ನೃತ್ಯ ಗಾಢ ಪ್ರಭಾವ ಬೀರಿವೆ. ತನ್ನ ನೃತ್ಯಕ್ಕೆ ಅನುಕೂಲವಾಗಲು ಪ್ರತಿದಿನ ಎರಡು ಗಂಟೆ ವ್ಯಾಯಾಮ ಮಾಡುವ ನಂದಿನಿಗೆ ಕಸೂತಿ ಪೇಂಟಿಂಗ್‌ನಲ್ಲೂ ಆಸಕ್ತಿಯಿದೆ. ನೃತ್ಯದ ಬಗೆ ಲೇಖನಗಳು, ಚಿತ್ರಗಳ ಸಂಗ್ರಹವೇ ಇದೆ.

—ಆರ್.ಬಿ. ದಾವಣಗೆರೆ

## ಪ್ರತಿಭಾವಂತ ವೀಣಾ ವಿದುಷಿ ಪುಷ್ಪಲತ

ಸಂಗೀತ ಕಲೆಯಲ್ಲಿ ಪಾಂಡಿತ್ಯ ಪಡೆಯಬೇಕೆಂದರೆ ಶ್ರದ್ಧೆ, ಪರಿಶ್ರಮದಿಂದ ಕೂಡಿದ ಸಾಧನೆ ಅತ್ಯವಶ್ಯಕ. ವೀಣಾವಾದನದಲ್ಲಿ ಅಂತಹ ಒಂದು ಪಾಂಡಿತ್ಯ ಪಡೆದು ಎಲೆಮರೆಯ ಕಾಯಿಯಂತೆ ಕಂಗೊಳಿಸುತ್ತಿದ್ದಾರೆ ಕು। ಪುಷ್ಪಲತ. 1991ನೇ ಸಾಲಿನ ವೀಣಾವಾದನದ ವಿದ್ವತ್ ಪರೀಕ್ಷೆಯಲ್ಲಿ ಎರಡನೇ ರ್‍ಯಾಂಕ್ ಪಡೆದಿರುವುದು ಇವರ ಪ್ರತಿಭೆಗೆ ಸಾಕ್ಷಿ.

ಇವರದು ಸಂಗೀತ ಮನೆತನ. ಸಂಗೀತ ಹಾರ್ಮೋನಿಯಂ ವಾದ್ಯಕ್ಕೆ ವಿಶೇಷ ಸ್ಥಾನ, ಗೌರವ ತಂದ, ಆದರಲ್ಲೂ ಕರ್ನಾಟಕ ಸಂಗೀತ ಇತಿಹಾಸದಲ್ಲಿ ಅತ್ಯಂತ ಗೌರವ ಪಡೆದ ಮಹಾನ್ ವಿದ್ವಾಂಸ ಶ್ರೀ ಅರುಣಾಚಲಪ್ಪನವರ ಮೊಮ್ಮಗಳು. ತಾಯಿ ಶ್ರೀಮತಿ ಸರಸ್ವತಿ ವೀಣಾವಾದಕಿ ಹಾಗೂ ಪುಷ್ಪಲತಾರವರ ಮೊದಲ ಗುರು. ತಂದೆ ಹಿರಿಯ ವಯೋಲಿನ್ ವಿದ್ವಾಂಸರಾದ ಶ್ರೀ ಬಿ. ವಿಶ್ವನಾಥ್ ಮತ್ತು ಸೋದರ ಮಾವ ಶ್ರೀ ಎ. ವೀರಭದ್ರಯ್ಯನವರೂ ಸಹ ನುರಿತ ವಯೊಲಿನ್ ವಿದ್ವಾಂಸರು.

ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಸಂಗೀತ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀಮತಿ ಶಾರದಾರವರಲ್ಲಿ ಸಂಗೀತಾಭ್ಯಾಸವನ್ನು ಮುಂದುವರೆಸಿ,



ಈಗ ಶ್ರೀ ಅಯ್ಯನಾರ್ ಕಾಲೇಜ್ ಆಫ್ ಮ್ಯೂಸಿಕ್‌ನ ಪ್ರಾಂಶುಪಾಲರಾದ ಅತ್ಯಂತ ನುರಿತ ವಯೊಲಿನ್ ವಿದ್ವಾಂಸರಾಗಿರುವ ಶ್ರೀ ಆನೂರು ರಾಮಕೃಷ್ಣರವರ ಬಳಿ ಸಂಗೀತ ಅಭ್ಯಾಸ ಮುಂದುವರೆಸಿದ್ದಾರೆ. ಇವರು ಆಕಾಶವಾಣಿಯಲ್ಲಿ ಕಳೆದ ಐದು ವರ್ಷಗಳಿಂದಲೂ ಕಾರ್ಯಕ್ರಮಗಳನ್ನು ನೀಡುತ್ತಿದ್ದಾರೆ. ಮತ್ತು ಹಲವಾರು ಸಭೆ ಸಮಾರಂಭಗಳಲ್ಲಿ ಅಂದರೆ ಶ್ರೀ ರಾಮಸೇವಾ ಮಂಡಳಿ, ಕರ್ನಾಟಕ ಗಾನ ಕಲಾ ಪರಿಷತ್ತು, ಗಾಯನ ಸಮಾಜ ಹೀಗೆ ಅನೇಕ ಕಡೆ ವೀಣಾವಾದನದ ಕಚೇರಿಯನ್ನು ನೀಡಿ ಸಭಿಕರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಮದರಾಸಿನ ಇಂಡಿಯನ್ ಫೈನ್ ಆರ್ಟ್ಸ್ ಹಾಗೂ ಇಂಡಿಯನ್ ಮ್ಯೂಸಿಕ್ ಆಫ್ ಆರ್ಟ್ಸ್ ಅಸೋಸಿಯೇಷನ್ ಇಲ್ಲಿ ವೀಣಾ ಕಾರ್ಯಕ್ರಮವನ್ನು ನೀಡಿರುವುದು ಮತ್ತೊಂದು ವಿಶೇಷ. 1988ರಲ್ಲಿ ಗಾಯನ ಸಮಾಜದವರು ಏರ್ಪಡಿಸಿದ್ದ ಯುವ ಸಂಗೀತ ಕಾರ್ಯಕ್ರಮದಲ್ಲಿ ಮೊದಲನೇ ಸ್ಥಾನ ಗಳಿಸಿದ್ದಾರೆ.

ಕು। ಪುಷ್ಪಲತ ಐ.ಟಿ.ಐ. ಕಾರ್ಖಾನೆಯಲ್ಲಿ ಪರ್ಸನಲ್ ಅಸಿಸ್ಟೆಂಟ್ ಆಗಿ ಕೆಲಸ ಮಾಡುತ್ತಿದ್ದಾರೆ. ಪ್ರತಿ ವರ್ಷ ಕರ್ನಾಟಕ ಕೈಗಾರಿಕೋದ್ಯಮ ಏರ್ಪಡಿಸುವ ಸಂಗೀತ ಸ್ಪರ್ಧೆಯಲ್ಲಿ ಕಳೆದ ಐದು ವರ್ಷಗಳಿಂದಲೂ ಸತತವಾಗಿ ಪ್ರಥಮ ಬಹುಮಾನ ಪಡೆದಿದ್ದಾರೆ. ಇವರನ್ನು ಐ.ಟಿ.ಐ. ಬಸವ ಸೇವಾ ಸಮಿತಿಯವರು, ತಮ್ಮ ಹತ್ತನೇ ವಾರ್ಷಿಕೋತ್ಸವ ಸುದರ್ಭದಲ್ಲಿ, ಕರ್ನಾಟಕ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್. ಆರ್. ಬೊಮ್ಮಾಯಿಯವರ ಸಮ್ಮುಖ ಗೌರವಿಸಿದ್ದಾರೆ. ತಮ್ಮ ಸೊಗಸಾದ ನಿರೂಪಣೆ ತಂತ್ರ, ವೀಣಾವಾದನದ ಮೇಲಿನ ಹಿಡಿತ, ಕೃತಿಗಳಲ್ಲಿನ ಸೂಕ್ಷ್ಮವಾದ ವಿವರಗಳನ್ನು ಪ್ರಸ್ತುತಪಡಿಸುವ ಚಾಕಚಕ್ಯತೆಯನ್ನು ತಮ್ಮ ವಾದನದಲ್ಲಿ ಸಿದ್ದಿಸಿಕೊಂಡಿರುವ ಪುಷ್ಪಲತ ಹಿರಿಯ ವಿದ್ವಾಂಸರಿಂದ ಮತ್ತು ಪತ್ರಿಕೆಗಳಿಂದ ಅಪಾರ ಪ್ರಶಂಸೆ ಹಾಗೂ ಮೆಚ್ಚುಗೆ ಪಡೆದಿದ್ದಾರೆ. ಮತ್ತೊಂದು ವಿಶೇಷವೆಂದರೆ ಇವರು ಹಲವಾರು ದೇವರ ನಾಮಗಳು ಭಕ್ತಿ ಗೀತೆಗಳ ಕ್ಯಾಸೆಟ್ಟುಗಳಿಗೆ ಹಿನ್ನೆಲೆ ಸಂಗೀತವಾಗಿ ವೀಣೆಯನ್ನು ನುಡಿಸಿರುವುದು.

— ಪದ್ಮಪ್ರಭ

(29ನೇ ಪುಟದಿಂದ)

ಆದರೆ ಹಳೆಯ ಅಥವಾ ಹುಳಿ ಮೊಸರು ಉಪಯೋಗಿಸಿ ಮಾಡಿದರೆ ರುಚಿ ಹಾಳಾಗುತ್ತದೆ. ಇಡ್ಲಿ ಅಷ್ಟು ಮೆತ್ತಗೆ ಹೂವಿನಂತಿರುವುದಿಲ್ಲ. ಮಿಶ್ರ ಮಾಡಿದ ನಂತರ 3 ನಿಮಿಷ ಬಿಡಬೇಕು. ಹೀಗೆ ಎಲ್ಲ ನಿಯಮವನ್ನು ಸರಿಯಾಗಿ ಪಾಲಿಸಿದರೇ ಉತ್ತಮ ಫಲಿತಾಂಶ. ಈ ಅಂಶವನ್ನು ಪ್ರಾತ್ಯಕ್ಷಿಕೆ ಮೂಲಕ ಜನರಿಗೆ ಸ್ಪಷ್ಟ ಪಡಿಸಿದ ನಂತರವೇ ಮಾರಾಟ. ಮದರಾಸಿನಲ್ಲಿ ರಾಮೇಶ್ವರಂ ರಸ್ತೆಯಲ್ಲಿ ಒಂದು ಷೋರೂಂ ತೆರೆದಿದ್ದೇವೆ. ಅಲ್ಲಿ ಪ್ರತಿ ಶುಕ್ರವಾರ ಮತ್ತು ಶನಿವಾರ ಜನರ ಎದುರಿಗೇ ಮಿಶ್ರ ಮಾಡಿ ಇಡ್ಲಿ ತಯಾರಿಸಿ ರುಚಿ ನೋಡಲು ಉಚಿತವಾಗಿ ಕೊಡುತ್ತೇವೆ. ದಿನಕ್ಕೆ ಸುಮಾರು 600 ಇಡ್ಲಿಗಳನ್ನು ತಯಾರಿಸಿ ಉಚಿತವಾಗಿ ಹಂಚುತ್ತಿದ್ದೇವೆ. ಜತೆಗೆ ಮಿಶ್ರಣ ಕಲೆಸಿದ ನಂತರ ಮೂರು ನಿಮಿಷಗಳ ಬಳಿಕ ತಕ್ಷಣ ಬೇಯಿಸಬೇಕು. ಮನೆಗಳಲ್ಲಿ ಸಾಮಾನ್ಯವಾಗಿ 10 ನಿಮಿಷಗಳ ನಂತರ ಕುಕ್ಕರ್‌ನಲ್ಲಿಡುತ್ತಾರೆ. ಸ್ಟೀಮ್ ಬರಲು ಮತ್ತೆ 10 ನಿಮಿಷಗಳಾಗುತ್ತವೆ. ಅದರಿಂದ ಇಡ್ಲಿಗಳು ಹಗುರವಾಗಿ ಬರುವುದಿಲ್ಲ. ನಮ್ಮ ಸೂಚನೆಗಳ ಪ್ರಕಾರ ಮಾಡಿದರೆ ಎಂಟಿಆರ್‌ನಲ್ಲಿ ದೊರೆಯುವ ರವಾ ಇಡ್ಲಿಗಿಂತ ಚೆನ್ನಾಗಿರುತ್ತದೆ. ನಾವು ಒಟ್ಟು 32 ಆಹಾರಗಳನ್ನು ತಯಾರಿಸುತ್ತಿದ್ದೇವೆ. ಇದರಲ್ಲೆಲ್ಲಾ ರವೆ ಇಡ್ಲಿ ಅತ್ಯಂತ ಜನಪ್ರಿಯವಾದದ್ದು. ಅದೇ ರೀತಿ ಗುಲಾಬ್ ಜಾಮೂನ್, ಬಿಸಿಬೇಳೆಭಾತ್, ಕಾರಾಭಾತ್ ಮುಂತಾದುವನ್ನು ತಯಾರಿಸುವ ವಿಧಾನವನ್ನು ಪ್ರದರ್ಶಿಸುತ್ತೇವೆ. ಅದರಲ್ಲೂ ವಡೆ ಮಿಕ್ಸ್ ಬಹಳ ಕಮ್ಮಿ ಎಣ್ಣೆಯನ್ನು ಹೀರುವುದರಿಂದ ಆರೋಗ್ಯಕ್ಕೂ ಒಳ್ಳೆಯದು.

*ಇತರ ತಯಾರಕರ ಉತ್ಪನ್ನಗಳ ಪೈಪೋಟಿಯನ್ನು ಯಾವ ರೀತಿ ಎದುರಿಸುವಿರಿ?

–ಇಲ್ಲಿ ಎರಡು ಬಗೆಯಿದೆ. ಒಂದು ಚೀಪ್ ಕಾಂಪಿಟಿಷನ್, ಇನ್ನೊಂದು ಗುಣಮಟ್ಟಕ್ಕೆ ಸಂಬಂಧಿಸಿದ್ದು. ಚೀಪ್ ಕಾಂಪಿಟಿಷನ್ ಬಗ್ಗೆ ನಮಗೆ ಚಿಂತೆಯಿಲ್ಲ. ಅವರದು ಬೆಲೆ ಮಾತ್ರ ಕಡಿಮೆಯಿರುತ್ತದೆ. ಸರಕುಗಳ ಗುಣಮಟ್ಟ ಕಳಪೆಯಾಗಿರುತ್ತದೆ. ಬೆಲೆ ಇಳಿಸುವ ಸಲುವಾಗಿ ನಾವು ಗುಣಮಟ್ಟವನ್ನು ಸ್ಯಾಕ್ರಿಫೈಸ್ ಮಾಡಲು ಸಿದ್ಧರಿಲ್ಲ. ಉದಾಹರಣೆಗೆ ನಾವು ರವೆ ಇಡ್ಲಿಯಲ್ಲಿ ಒಳ್ಳೆಯ ಗುಣಮಟ್ಟದ ಗೇರುಬೀಜ ಉಪಯೋಗಿಸುತ್ತೇವೆ. ಸುಮಾರು 1977ರ ಸಮಯದಲ್ಲಿ ಗೇರುಬೀಜದ ಬೆಲೆ ಟನ್‌ಗೆ 250 ರೂ. ಇತ್ತು. ಕಳೆದ ವರ್ಷ ಅದು 1900 ರೂ. ಆಯಿತು. ಈ ವರ್ಷ 1300–1400 ರೂ. ಗಳಷ್ಟಿದೆ. ಆದರೆ ನಾವು ಮಾತ್ರ ಅದೇ ಗುಣಮಟ್ಟದ, ಅಷ್ಟೇ ಪ್ರಮಾಣದ ಗೇರುಬೀಜ ಉಪಯೋಗಿಸುತ್ತಿದ್ದೇವೆ. ಪ್ರತಿಯೊಂದು ಪ್ಯಾಕೆಟ್ಟಿಗೆ ಗೇರುಬೀಜದ ಅಂಶ ರೂ. 1.70 ಅಥವಾ 1.80ರಷ್ಟಿರುತ್ತದೆ. ಸೋವಿಯತ್ ಒಕ್ಕೂಟ ಗೇರುಬೀಜ ಖರೀದಿಸುವ ಪ್ರಮುಖ ರಾಷ್ಟ್ರವಾಗಿತ್ತು. ಆದ್ದರಿಂದ ಬೆಲೆ ಅಷ್ಟು ಹೆಚ್ಚಾಗಿತ್ತು. ರಶ್ಯನ್ ಕಮ್ಯೂನಿಸಂ ಕುಸಿದಿದ್ದು ಈಗ ಅದು ಗೇರುಬೀಜ ಆಮದು ಮಾಡಿಕೊಳ್ಳುವ ಸ್ಥಿತಿಯಲ್ಲಿಲ್ಲ. ಆದುದರಿಂದ 3–4 ತಿಂಗಳಲ್ಲಿ ಬೆಲೆ ಕಡಿಮೆ ಯಾಗಬಹುದೆಂಬ ನಿರೀಕ್ಷೆ ನಮಗಿತ್ತು. ಆದ್ದರಿಂದ ನಾವು ಬೆಲೆ ಏರಿಸಲು ಹೋಗಲಿಲ್ಲ. ಆ ಅವಧಿಯಲ್ಲಿ ಸುಮಾರು 3–4 ಲಕ್ಷ ರೂ.ಗಳ ನಷ್ಟವಾಯಿತು.

ಇನ್ನೊಂದು ಉದಾಹರಣೆ.ಎಂಟಿಆರ್‌ನಲ್ಲಿ ಚಟ್ನಿ ವರ್ಷವಿಡೀ ಒಂದೇ ಗುಣಮಟ್ಟದಲ್ಲಿರುತ್ತದೆ. ಅದೇ ರುಚಿ. ಅದಕ್ಕೆ ಕಾರಣ ನಾವು ಬಳಸುವ ಕೊತ್ತಂಬರಿ ಸೊಪ್ಪು. ಈಗ ಒಂದು ಕಟ್ಟು ಕೊತ್ತಂಬರಿ ಸೊಪ್ಪಿನ ಬೆಲೆ 30 ಅಥವಾ 40 ಪೈಸೆ ಇದೆ. ಜೂನ್–ಜುಲೈ ತಿಂಗಳಲ್ಲಿ ಒಂದು ಕಟ್ಟಿಗೆ 6 ರೂ. ಬೆಲೆಯಾಗುತ್ತದೆ. ನಮಗೆ ದಿನಕ್ಕೆ 300 ಕಟ್ಟು ಬೇಕು. ಬೇರೆಯವರು ಆ ಸಮಯದಲ್ಲಿ ಕೊತ್ತಂಬರಿ ಸೊಪ್ಪು ಬಳಸುವುದಿಲ್ಲ. ಅದಕ್ಕೆ ಬದಲಾಗಿ ಪುದೀನಾ ಅಥವಾ ಇನ್ನಾವುದನ್ನೋ ಬಳಸುತ್ತಾರೆ. ಆದರೆ ನಾವು ಮಾತ್ರ 365 ದಿನ ಒಂದೇ ಗುಣಮಟ್ಟ ಕಾಪಾಡಿಕೊಂಡು ಬರುತ್ತೇವೆ.

ಮತ್ತೊಂದು ಸಂಗತಿ ಎಂದರೆ ಪ್ಯಾಕಿಂಗ್. ನಾವು ಮಾಡುವ ಪ್ಯಾಕಿಂಗ್ ವಿಧಾನದಲ್ಲಿ ಅದರಲ್ಲಿರುವ ಪದಾರ್ಥಗಳು 9 ತಿಂಗಳ ಕಾಲ ಕೆಡದೆ ಉಳಿಯುತ್ತದೆ. ಅದು ಅಮೆರಿಕದ ಪ್ಯಾಕಿಂಗ್. ಒಳಗಡೆ ಪಾಲಿಥಿನ್ ಹೊರಗೆ ಪಾಲಿಯೆಸ್ಟರ್ ಈ ಎರಡರ ನಡುವೆ ಒಂದು ಲ್ಯಾಮಿನೇಷನ್ ಇರುತ್ತದೆ. ಅದು ಏನೆಂದು ನಾವು ಹೇಳುವುದಿಲ್ಲ. ಅದು ನಮ್ಮ ಟ್ರೇಡ್ ಸೀಕ್ರೆಟ್. ಹೀಗಾಗಿ ಈ ವಿಷಯದಲ್ಲಿ ಯಾರೂ ನಮ್ಮೊಂದಿಗೆ ಪೈಪೋಟಿ ಮಾಡಲು ಸಾಧ್ಯವಿಲ್ಲ. ಜತೆಗೆ ಪ್ಯಾಕಿಂಗ್ ಮೇಲೆ ನಾವು ಎಕ್ಸ್‌ಪೈರೀ ಡೇಟ್ ನಮೂದಿಸಬೇಕು. ಅದು ಕಡ್ಡಾಯ. ಈ ಪ್ಯಾಕ್ ಮೇಲೆ ಪ್ರಿಂಟಿಂಗ್ ಅಷ್ಟು ಸುಲಭವಲ್ಲ. ಅದಕ್ಕೆಂದೇ ಒಂದು ಆಟೋಮ್ಯಾಟಿಕ್ ಯಂತ್ರವನ್ನು ಆಮದು ಮಾಡಿದ್ದೇವೆ.

*ಗ್ರಾಹಕರನ್ನು ಆಕರ್ಷಿಸಲು ಜಾಹೀರಾತುಗಳೇನಾದರೂ...?

–ಇಲ್ಲ, ನಾವು ಗ್ರಾಹಕರನ್ನು ಆಕರ್ಷಿಸುವ ಯಾವುದೇ ವಿಶೇಷ ಜಾಹೀರಾತನ್ನು ಕೈಗೊಳ್ಳುವುದಿಲ್ಲ. ನಮ್ಮ ಉದ್ದೇಶವೆಂದರೆ ಜನರಿಗೆ ನಮ್ಮ ಉತ್ಪನ್ನಗಳ ಬಗೆಗೆ ತಿಳಿಯಬೇಕು ಅಷ್ಟೆ. ನಮ್ಮ ಜಾಹೀರಾತುಗಳು ಬೇರೆ ಯಾವುದೇ ಜಾಹೀರಾತುಗಳಂತಿರುವುದಿಲ್ಲ. ಈ ಆಹಾರಗಳನ್ನು ತಯಾರಿಸುವುದು ಹೇಗೆ ಎಂಬುದನ್ನು ಮಾತ್ರ ನಾವು ತಿಳಿಸುತ್ತೇವೆ. ತಯಾರಿಸಿದ ನಂತರ ಹೇಗಿರುತ್ತದೆ ಎಂದು ಅವರಿಗೇ ತಿಳಿಯುತ್ತದೆ.

* ನಿಮ್ಮ ವಾರ್ಷಿಕ ವಹಿವಾಟಿನ ಬಗೆಗೆ ತಿಳಿಸುವಿರಾ?

–ನಾವು ಫ್ಯಾಕ್ಟರಿಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆ ವರ್ಷಕ್ಕೆ 1–2ಕೋಟಿ ರೂ.ಗಳಷ್ಟು ವ್ಯಾಪಾರವಾಗುತ್ತಿತ್ತು. ಕಳೆದ ವರ್ಷ ಅಂದರೆ ಫ್ಯಾಕ್ಟರಿ ತೆರೆದ ನಂತರ ಅದು 3 ಕೋಟಿ ರೂ. ಗಳಷ್ಟಾಯಿತು. ಈ ವರ್ಷ ಟಿ.ವಿ. ಪ್ರಚಾರದಿಂದಾಗಿ ಅದು 6.5 ಕೋಟಿ ರೂ.ಗಳಷ್ಟಾಗುವ ನಿರೀಕ್ಷೆಯಿದೆ.

*ವಿದೇಶಗಳಿಗೆ ರಫ್ತು ಮಾಡುವ ಬಗೆಗೆ ತಿಳಿಸುವಿರಾ?

–ಈಗ ನಮ್ಮ ಪ್ರಮುಖ ವಿದೇಶೀ ಗಿರಾಕಿ ಅಮೆರಿಕ. ಕಳೆದ ಆರು ತಿಂಗಳುಗಳಲ್ಲಿ ಪ್ರತಿ 40 ದಿನಗಳಿಗೊಮ್ಮೆ ಒಂದು ಕಂಟೈನರ್ ಸರಕನ್ನು ಅಮೆರಿಕಕ್ಕೆ ಕಳುಹಿಸುತ್ತಿದ್ದೇವೆ. ಇದಲ್ಲದೆ ನಮ್ಮ ಉತ್ಪನ್ನಗಳು ಇಂಗ್ಲೆಂಡ್, ಆಸ್ಟ್ರೇಲಿಯಾ, ಆಫ್ರಿಕ, ಸಿಂಗಪೂರ್ ಹಾಗೂ ಗಲ್ಫ್ ರಾಷ್ಟ್ರಗಳಿಗೆ ರಫ್ತಾಗುತ್ತಿವೆ. ಕಳೆದ ವರ್ಷ ಸುಮಾರು 40 ಲಕ್ಷ ರೂ.ಗಳ ಮೊತ್ತದ ವಿದೇಶೀ ವಿನಿಮಯ ಗಳಿಸಿದೆವು. ಈ ವರ್ಷ ಅದು 1.5 ಕೋಟಿ ರೂಪಾಯಿ ಮುಟ್ಟುವ ನಿರೀಕ್ಷೆಯಿದೆ.

*ನಿಮ್ಮ ಉತ್ಪನ್ನಗಳಿಗೆ ಅಗತ್ಯವಾದ ಕಚ್ಚಾ ವಸ್ತುಗಳನ್ನು ಹೇಗೆ ಪಡೆಯುವಿರಿ?

–ನಾವು ಬಹುತೇಕವಾಗಿ ಬೆಳೆಯುವವರಿಂದಲೇ ಕಚ್ಚಾ ವಸ್ತುಗಳನ್ನು ಅಂದರೆ ಆಹಾರ ಧಾನ್ಯಗಳನ್ನು ಪಡೆಯುತ್ತೇವೆ. ಉದಾಹರಣೆಗೆ ನಾವು ಬಹು ಹೆಚ್ಚಾಗಿ ಬಳಸುವ ಜೀರಿಗೆ, ಸಾಸಿವೆ ಮತ್ತು ಮೆಂತ್ಯವನ್ನು ಗುಜರಾತ್‌ನ ಊಂಜಾದಿಂದ ತರಿಸುತ್ತೇವೆ. ಅದು ಬೆಂಗಳೂರಿಗೆ ಬಂದು ಮಾರಾಟವಾದರೆ ಕಲಬೆರಕೆ ಯಾಗುತ್ತದೆ. ಜತೆಗೆ ಜೀರಿಗೆಯ ಮೇಲಿರುವ ಪುಕ್ಕವನ್ನು ಅದರಲ್ಲಿ ಸೇರಿಸಿರುತ್ತದೆ. ಅದೇ ರೀತಿ ಮೆಣಸಿನ

## –ನೌಕರರ ಯೋಗಕ್ಷೇಮ–

*ನಿಮ್ಮಲ್ಲಿ ಒಟ್ಟು ಎಷ್ಟು ಮಂದಿ ನೌಕರರಿದ್ದಾರೆ. ಅವರ ಯೋಗಕ್ಷೇಮದ ಬಗೆಗೆ ನಿಮ್ಮ ಯೋಜನೆಗಳೇನು? ನಿಮಗೆ ಟ್ರೇಡ್ ಯೂನಿಯನ್ ತೊಂದರೆ ಇಲ್ಲವೇ?

–ಹೋಟೆಲ್ ಮತ್ತು ಫ್ಯಾಕ್ಟರಿ ಸೇರಿ ಸುಮಾರು 200 ಮಂದಿ ಇದ್ದಾರೆ. ಈ ಪೈಕಿ 18 ಮಂದಿ ಮಹಿಳೆಯರು. ಕೆಲವು ಕೆಲಸಗಳಿಗೆ ಹೆಂಗಸರೇ ಸರಿ. ಪುರುಷರಿಂದ ಆಗುವುದಿಲ್ಲ. ಇನ್ನು ಅವರ ಯೋಗಕ್ಷೇಮದ ಬಗೆಗೆ ಹೇಳುವುದಾದರೆ ನಮ್ಮಲ್ಲಿರುವಷ್ಟು ಬೇರೆಲ್ಲೂ ಸೌಲಭ್ಯಗಳಿಲ್ಲ. ಹಾಗಾಗಿ ನಮ್ಮಿಂದ ಯಾರೂ ಹೊರ ಹೋಗುವುದಿಲ್ಲ. ಅವರಿಗೆ ಬೇಕಾದ್ದೆಲ್ಲ ಇಲ್ಲೇ ದೊರೆಯುತ್ತದೆ. ಬೆಳಿಗ್ಗೆ ಉಪಾಹಾರ, ಕಾಫಿ, ಮಧ್ಯಾಹ್ನ, ರಾತ್ರಿ ಎರಡು ಹೊತ್ತೂ ಒಳ್ಳೆಯ ಊಟ. ಪ್ರತಿ ಸೋಮವಾರ ಸಿಹಿ ಭಕ್ಷ್ಯದೊಡನೆ ವಿಶೇಷ ಊಟ, ತಿಂಡಿ, ಕಾಫಿ. ಜತೆಗೆ ಇ.ಎಸ್.ಐ. ಮತ್ತು ಪ್ರಾವಿಡೆಂಟ್ ಫಂಡ್ ಸೌಕರ್ಯ ಅಲ್ಲದೆ ಪೆನ್ಷನ್ ಯೋಜನೆ. ಅಲ್ಲದೆ ಸೂಪರ್ ಅನ್ಯುಯೇಷನ್ ಲಿಂಕ್ಡ್ ವಿತ್ ಗ್ರ್ಯಾಚುಯಿಟಿ. ಎಲ್ಲವೂ ನಿಯಮಗಳ ಪ್ರಕಾರ. ಜತೆಗೆ ಅಕಸ್ಮಾತ್ ಒಬ್ಬ ನೌಕರ ನಿಧನರಾದರೆ ತಕ್ಷಣ ಅವರ ಕಡೆಯವರಿಗೆ ಒಂದು ಲಕ್ಷ ರೂ. ದೊರಕುವಂತೆ ವ್ಯವಸ್ಥೆ ಮಾಡಲಾಗಿದೆ. ಇದಕ್ಕೆ ನಾವೇ ಪ್ರೀಮಿಯಂ ಕಟ್ಟುತ್ತೇವೆ. ಇಷ್ಟೆಲ್ಲಾ ಸೌಕರ್ಯ ನಮಗೆ ತಿಳಿದಂತೆ ಬೇರೆಡೆ ಇಲ್ಲ. ಅವರಿಗೆ ಕೊಡುವ ಸಂಬಳವನ್ನು ಅವರು ಹಾಗೇ ಬ್ಯಾಂಕ್‌ನಲ್ಲಿ ಡಿಪಾಜಿಟ್ ಮಾಡಬಹುದು. ವರ್ಷಕ್ಕೊಮ್ಮೆ 30 ದಿನಗಳ ರಜಾ ಹಾಕಿ ತಮ್ಮ ಊರಿಗೆ ಹೋಗಿ ಬರುತ್ತಾರೆ. ಹೆಚ್ಚಿನಂಶ ನೌಕರರು ನಮ್ಮ ಉಡುಪಿಯ ಕಡೆಯವರು. ನಮ್ಮ ಆದಾಯದ ಶೇಕಡಾ 38ರಷ್ಟು ಎಸ್ಟಾಬ್ಲಿಷ್‌ಮೆಂಟಿಗೇ (ನೌಕರರ ಸಂಬಳ ಇತ್ಯಾದಿ) ಹೋಗುತ್ತದೆ.

ನಮ್ಮಲ್ಲಿ ಯಾರೂ ಭಕ್ಷೀಸು ಪಡೆಯುವುದಿಲ್ಲ. ಇದು ಅನಾರೋಗ್ಯಕರ ಪದ್ಧತಿಯ ಬೆಳವಣಿಗೆಗೆ ಕಾರಣವಾಗುತ್ತದೆ. ವ್ಯಕ್ತಿಗಳ ನೈತಿಕ ಶುದ್ಧತೆ ಹಾಗೂ ವ್ಯಾಪಾರದಲ್ಲಿ ಪ್ರಾಮಾಣಿಕತೆ ಇವೇ ಎಂಟಿಆರ್ ಖ್ಯಾತಿಯ ಮೂಲ ಸೂತ್ರಗಳು.

ಕಾಯಿಯನ್ನು ಬ್ಯಾಡಗಿ ಹಾಗೂ ಗುಂಟೂರಿನಿಂದ ತರಿಸಿಕೊಳ್ಳುತ್ತೇವೆ. ಎಣ್ಣೆಯನ್ನು ತಮಿಳುನಾಡು ಈರೋಡ್‌ನಿಂದ ತರಿಸಿಕೊಳ್ಳುತ್ತೇವೆ. ರವೆಯನ್ನು ಮುಂಚೆ ಕೃಷ್ಣಾ ಫ್ಲೋರ್ ಮಿಲ್ಲಿನಿಂದ ತರಿಸಿಕೊಳ್ಳುತ್ತಿದ್ದೆವು. ಈಗ ಹೊಸಕೋಟೆಯಿಂದ ತರಿಸಿಕೊಳ್ಳುತ್ತೇವೆ. ಉಪ್ಪಿನ ಕಾಯಿಗಳಿಗೆ ಬೇಕಾಗುವ ಕಚ್ಚಾ ವಸ್ತುಗಳನ್ನು ನೇರ ರೈತರಿಂದಲೇ ಖರೀದಿಸುತ್ತೇವೆ. ಉದಾಹರಣೆಗೆ ಮಾವಿನ ಕಾಯಿಯನ್ನು ಒಬ್ಬರಿಂದಲೇ ಕೊಳ್ಳುತ್ತೇವೆ. ಅದರಲ್ಲಿ ಪ್ರತಿ ವರ್ಷ ಒಂದೇ ಕ್ವಾಲಿಟಿಯಾಗಿರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ನೀರಿನ ಅಂಶ ಜಾಸ್ತಿಯಿದ್ದು ಅವು ಕೆಟ್ಟು ಹೋಗುತ್ತವೆ. ಈ ವರ್ಷ ಸುಮಾರು ಒಂದು ಲಕ್ಷ ರೂ. ಮೌಲ್ಯದ ಮಾವಿನ ಕಾಯಿಗಳನ್ನು ಬಿಸಾಡಬೇಕಾಯಿತು. ಇನ್ನು ಮಿಡಿ ಮಾವಿನ ಕಾಯಿಗಳನ್ನು ಸಾಗರ ಸುತ್ತುಮುತ್ತಲಿನ ಪ್ರದೇಶದಿಂದ ಕೊಳ್ಳುತ್ತೇವೆ. ಮುಂದಿನ ವರ್ಷಕ್ಕೆ ಈಗಾಗಲೇ ಮರವನ್ನು ಬುಕ್ ಮಾಡಿ ಬಂದಿದ್ದೇವೆ. ಇದೆಲ್ಲಾ ಗುಣಮಟ್ಟವನ್ನು ಕಾಪಾಡುವುದಕ್ಕಾಗಿ. ಇನ್ನು ನಾವು ಬಳಸುವ ಅಪ್ಪಟ ತುಪ್ಪಕ್ಕೆ ಮಂಡ್ಯದಿಂದ ಬೆಣ್ಣೆ ತರಿಸಿಕೊಂಡು ನಾವೇ ತುಪ್ಪ ತಯಾರಿಸುತ್ತೇವೆ. ನಮ್ಮಲ್ಲಿ ಒಬ್ಬರು ಕೆಮಿಸ್ಟ್ ಇದ್ದಾರೆ. ಅವರು ಪ್ರತಿಯೊಂದು ಟನ್ ಬೆಣ್ಣೆಯನ್ನು ಪರೀಕ್ಷಿಸುತ್ತಾರೆ. 57 ವರ್ಷಗಳಿಂದ ಒಬ್ಬರೇ ವ್ಯಕ್ತಿಯಿಂದ ಬೆಣ್ಣೆ ಖರೀದಿಸುತ್ತಿದ್ದೇವೆ. ಒಂದೇ ವ್ಯತ್ಯಾಸವೆಂದರೆ ಮುಂಚೆ ತಂದೆ ತಂದು ಕೊಡುತ್ತಿದ್ದ. ಈಗ ಮಗ ತಂದು ಕೊಡುತ್ತಿದ್ದಾನೆ.

*ಈ ಸಾರಿ ಬಜೆಟ್‌ನಲ್ಲಿ ಹೋಟೆಲ್ ಇಂಡಸ್ಟ್ರಿಗೆ ಏನಾದರೂ ರಿಯಾಯ್ತಿ ಸಿಕ್ಕಿದೆಯೋ?

–ಏನೂ ಇಲ್ಲ. 15% ಮನರಂಜನಾ ತೆರಿಗೆ ವಿಧಿಸಿದ್ದರು. ಈಗ ಅದನ್ನು ತೆಗೆದು ಹಾಕಿದ್ದಾರೆ ಅಷ್ಟೆ.



“ಈಗ ತಾನೇ ಬಂದ ದೀಪಾವಳಿ ವಿಶೇಷಾಂಕ ನೋಡಿ ಹೊಸರುಚಿ ಮಾಡ್ತೀನೀಂದ್ರ ಆಗ್ಲೇ ಊಟಕ್ಕೆ ಕುಳಿತುಬಿಟ್ರೇನ್ರಿ”

* ಸರ್ಕಾರದ ಕಡೆಯಿಂದ ಏನಾದರೂ ಬೆಂಬಲ?

–ಏನೂ ಇಲ್ಲ. ರಾಜ್ಯ ಸರ್ಕಾರ ಸ್ವಲ್ಪ ರಿಯಾಯಿತಿ ನೀಡಿದೆ. ನಮ್ಮ ಫ್ಯಾಕ್ಟರಿಯ 'ಬಿ' ವಲಯದಲ್ಲಿರುವುದರಿಂದ ನಾಲ್ಕು ವರ್ಷಗಳ ಕಾಲ ಮಾರಾಟ ತೆರಿಗೆ ಬರುವುದಿಲ್ಲ. ಈ ಹಣವನ್ನು ನಾವು ಪ್ರಚಾರಕ್ಕೆ ಖರ್ಚು ಮಾಡುತ್ತಿದ್ದೇವೆ. ಈಗ 2% ಪ್ರವೇಶ ತೆರಿಗೆ ಬೇರೆ ಬಂದಿದೆ.

*ಇನ್‌ಸ್ಟಂಟ್ ಫುಡ್ ಅಲ್ಲದೆ ಬೇರೇನಾದರೂ ಹೊಸ ಉತ್ಪನ್ನವನ್ನು ಮಾರುಕಟ್ಟೆಗೆ ತರಲಿರುವಿರಾ?

–ಈಗ ರೆಡೀ ಟು ಈಟ್ (ತಿನ್ನಲಿಕ್ಕೆ ಸಿದ್ಧವಾದ) ಆಹಾರಗಳನ್ನು ಪ್ರಾಯೋಗಿಕವಾಗಿ ತಯಾರಿಸುತ್ತಿದ್ದೇವೆ. ಪ್ರಸ್ತುತ ಪುಳಿಯೋಗರೆ, ನಿಂಬೆ ಹಣ್ಣಿನ ಚಿತ್ರಾನ್ನ ತಯಾರಿಸುತ್ತಿದ್ದೇವೆ. ವೆಜಿಟೇಬಲ್ ಬಿರಿಯಾನಿ ತಯಾರಿಸುವ ಯೋಚನೆ ಇದೆ. ಈಗಲೇ ಇವುಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುತ್ತಿಲ್ಲ. ಸಾಕಷ್ಟು ಸಂಶೋಧನೆ, ಅಭಿವೃದ್ಧಿ (ಆರ್ ಅಂಡ್ ಡಿ) ಆಗಬೇಕಾಗಿದೆ. ಈಗ ತುಮಕೂರು ರಸ್ತೆಯಲ್ಲಿ ಒಬ್ಬರು ಒಂದು ರೈಸ್ ಮೆಷೀನ್ ಅಭಿವೃದ್ಧಿಗೊಳಿಸಿದ್ದಾರೆ. ಅಕ್ಕಿಯನ್ನು ಈ ಯಂತ್ರದ ಮೂಲಕ ಹಾಯಿಸಿದರೆ ಕೆಲವೇ ಸೆಕೆಂಡ್‌ಗಳಲಿ ಅನ್ನ ತಯಾರಾಗುತ್ತದೆ. ಆ ಅನ್ನವನ್ನು ಇನ್ನೊಂದು ಆವಿ ಯಂತ್ರದ ಮೂಲಕ ಹಾಯಿಸಿದರೆ ಅನ್ನದ ನೀರಿನಂಶ ಎಲ್ಲ ಹೋಗಿ 100% ಡ್ರೈ ಆಗುತ್ತದೆ. ಅದನ್ನು ಚಿತ್ರಾನ್ನ ಮತ್ತಿತರ ಆಹಾರ ತಯಾರಿಕೆಗೆ ಬಳಸಬಹುದು. ಶ್ಯಾವಿಗೆಯಂತಹ ಇದಕ್ಕೆ ಸ್ವಲ್ಪ ನೀರು ಸೇರಿಸಿದರೆ ಅನ್ನ ಒರಿಜಿನಲ್ ಆಕಾರಕ್ಕೆ ಬರುತ್ತದೆ. ಈ ಹೊಸ ಉತ್ಪನ್ನವನ್ನು ನಾವು ಮೊದಲು ರುಚಿ ನೋಡಿ, ಇತರರಿಗೂ ನೀಡಿ ತೃಪ್ತಿಯಾದ ನಂತರ 1994ರಲ್ಲಿ ಮಾರುಕಟ್ಟೆಗೆ ಬಿಡುಗಡೆ ಮಾಡಲು ಯೋಜಿಸಿದ್ದೇವೆ.

*ನಿಮ್ಮ ಮುಂದಿನ ಯೋಜನೆಗಳ ಬಗೆಗೆ ತಿಳಿಸುವಿರಾ?

–ನನ್ನ ಅಭಿಪ್ರಾಯದಲ್ಲಿ ಈ ಇನ್ಸಟಂಟ್ ಫುಡ್‌ಗಳ (ದಿಢೀರ್ ಆಹಾರಗಳ) ಆಯುಃ ಪರಿಮಿತಿ ಇನ್ನು 10–15 ವರ್ಷಗಳು ಮಾತ್ರ. ಅನಂತರ ಅವುಗಳಿಗೆ ಬೇಡಿಕೆ ಕಡಿಮೆಯಾಗುತ್ತದೆ. ಈಗಾಗಲೇ ಅಮೆರಿಕದಲ್ಲಿ ಈ ಆಹಾರಗಳಿಗೆ ಬೇಡಿಕೆ ಕಡಿಮೆಯಾಗಿದ್ದು ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ Frozen foods ತಯಾರಿಸಲಾರಂಭಿಸಿದ್ದಾರೆ. ಅದನ್ನು ಫ್ರಿಜ್‌ನಲ್ಲಿಟ್ಟು ಮರುದಿನ ಮೈಕ್ರೋ ಓವನ್‌ನಲ್ಲಿ ಬಿಸಿ ಮಾಡಿ ತಿನ್ನುತ್ತಾರೆ. ಅದೇ ರೀತಿ ನಾವು ಬೇರೆ ಏನಾದರೂ ಯೋಚನೆ ಮಾಡಬೇಕಾಗುವುದು.

*ನಮ್ಮ ಸ್ಟ್ಯಾಂಡರ್ಡ್‌ಗಳ ಪ್ರಕಾರ ಅದು ಎಷ್ಟರ ಮಟ್ಟಿಗೆ ಆರೋಗ್ಯಕರ?

–ಭಾರತದಲ್ಲಿ ಅದು ಪ್ರಯೋಜನಕ್ಕೆ ಬರದಿರಬಹುದು. ಆದರೆ ನಾವು 10–15 ವರ್ಷಗಳಲ್ಲಿ ಇನ್‌ಸ್ಟಂಟ್ ಫುಡ್‌ಗಳಿಗೆ ಪರ್ಯಾಯವಾಗಿ ಏನಾದರೂ ಯೋಚನೆ ಮಾಡಬೇಕಾಗಿರುವುದು.

ಮಯ್ಯ ಅವರು ನಮ್ಮನ್ನು ಫ್ಯಾಕ್ಟರಿಗಳಿಗೆ ಕರೆದೊಯ್ದು ಅಲ್ಲಿನ ಕಾರ್ಯಗಳನ್ನು ಪ್ರತ್ಯಕ್ಷವಾಗಿ ತೋರಿಸಿದರು. ಅಲ್ಲಿನ ಶುದ್ಧ ಹವಾ, ಆರೋಗ್ಯ ನಿಯಮಗಳಿಗನುಸಾರವಾಗಿ ಉತ್ಪನ್ನಗಳ ತಯಾರಿಕೆ, ಆಟೋಮ್ಯಾಟಿಕ್ ಪ್ಯಾಕಿಂಗ್, ಪ್ರಿಂಟಿಂಗ್ ಇವುಗಳನ್ನೆಲ್ಲಾ ನೋಡಿದಾಗ ಎಂಟಿಆರ್ ಗುಣಮಟ್ಟಕ್ಕೆ ಪ್ರಥಮ ಪ್ರಾಶಸ್ತ್ಯ ನೀಡುತ್ತದೆ ಎಂಬ ಮಾತು 100ಕ್ಕೆ 100ರಷ್ಟು ಸತ್ಯ ಎಂದು ನಮಗೆ ಮನದಟ್ಟಾಯಿತು.



## –ಮಾರ್ಕೆಟಿಂಗ್–

*ಬೇಡಿಕೆಗಳನ್ನು ಪೂರೈಸಲು ನಿಮಗೆ ಸಾಧ್ಯವಾಗುತ್ತಿದೆಯೇ? ಮಾರ್ಕೆಟಿಂಗ್ ವಿಭಾಗ ಅಭಿವೃದ್ಧಿಪಡಿಸಲು ಏನು ಕ್ರಮ ಕೈಗೊಂಡಿರುವಿರಿ?

–ಮೊದಲು ಮ್ಯಾನುಫ್ಯಾಕ್ಚರಿಂಗ್ ವಿಭಾಗ ಅಭಿವೃದ್ಧಿಗೊಳಿಸಲು ಕ್ರಮ ಕೈಗೊಂಡಿದ್ದೇವೆ. ಬೆಂಗಳೂರಿನಿಂದ ಹೊಸೂರು ಮಾರ್ಗ 20 ಕಿಲೋಮೀಟರ್‌ಗಳ ದೂರದಲ್ಲಿರುವ ಬೊಮ್ಮಸಂದ್ರದಲ್ಲಿ ಎರಡು ಸುಸಜ್ಜಿತ ಫ್ಯಾಕ್ಟರಿಗಳನ್ನು ಪ್ರಾರಂಭಿಸಿದ್ದೇವೆ. ಅಲ್ಲಿ ವಿವಿಧ ಪುಡಿಗಳು ಹಾಗೂ ಮಿಕ್ಸ್‌ಗಳ ತಯಾರಿಕೆ, ಪ್ಯಾಕಿಂಗ್ ಮತ್ತು ಪ್ರಿಂಟಿಂಗ್ ಕಾರ್ಯಗಳು ನಡೆಯುತ್ತಿವೆ. ಎಲ್ಲಾ ಆಟೋಮ್ಯಾಟಿಕ್. ಸದ್ಯದಲ್ಲಿಯೇ ಕಾರ್ಖಾನೆಗಳನ್ನು ಬಡಾಯಿಸಿ ಕಾಂಡಿಮೆಂಟ್ಸ್ ವಿಭಾಗವನ್ನು ಅಲ್ಲಿಗೇ ವರ್ಗಾಯಿಸಲು ಯೋಚಿಸಿದ್ದೇವೆ.

ಇನ್ನು ಮಾರ್ಕೆಟಿಂಗ್ ಬಗ್ಗೆ ಹೇಳುವುದಾದರೆ ನಾನು ಈ ಮುಂಚೆ ಹೇಳಿದಂತೆ ರಾಷ್ಟ್ರದ ನಾನಾ ಕೇಂದ್ರಗಳಲ್ಲಿ ಷೋರೂಂಗಳನ್ನು ತೆರೆದಿದ್ದು ಅಲ್ಲಿ ಪ್ರತ್ಯಕ್ಷ ಡೆಮಾನ್‌ಸ್ಟ್ರೇಷನ್ ನೀಡಿ, ಗ್ರಾಹಕರಿಗೆ ರುಚಿ ನೋಡಲು ಉಚಿತವಾಗಿ ನೀಡುತ್ತಿದ್ದೇವೆ. ಅವರಿಗೆ ತೃಪ್ತಿಯಾದ ನಂತರ ಅವರೇ ಕೊಳ್ಳುತ್ತಿದ್ದಾರೆ. ಅಲ್ಲಿಂದ ಮೆಟ್ರೋಪಾಲಿಟನ್ ನಗರಗಳಾದ ಮುಂಬೈ, ಮದ್ರಾಸ್, ಕಲ್ಕತ್ತಾ, ದೆಹಲಿಗಳಲ್ಲಿ ಡಿಸ್ಟ್ರಿಬ್ಯೂಟರ್‌ಗಳನ್ನು ನೇಮಕ ಮಾಡಿದ್ದೇವೆ. ಅಲ್ಲದೆ ಆಯಾ ಕೇಂದ್ರಗಳಲ್ಲಿ ನಡೆಯುವ ಎಕ್ಸಿಬಿಷನ್‌ಗಳಲ್ಲಿ ಭಾಗವಹಿಸಿ ಡೆಮಾನ್‌ಸ್ಟ್ರೇಷನ್‌ಗಳನ್ನು ನೀಡುತ್ತಿದ್ದೇವೆ. ಕಳೆದ ವರ್ಷ ಮದರಾಸಿನಲ್ಲಿ ನಡೆದ ಎಲ್ಲ ವಸ್ತು ಪ್ರದರ್ಶನಗಳಲ್ಲಿ ಭಾಗವಹಿಸಿದ್ದೇವೆ. ಜತೆಗೆ ಟಿ.ವಿ. ಕ್ಯಾಂಪೇನ್‌ನಿಂದಾಗಿ ತಮಿಳುನಾಡಿನಾದ್ಯಂತ ನಮ್ಮ ಉತ್ಪನ್ನಗಳಿಗೆ ಭಾರೀ ಬೇಡಿಕೆಯುಂಟಾಗಿದೆ. ಕೇರಳ ಒಂದರಲ್ಲಿ ಬಿಟ್ಟು ಉಳಿದ ದಕ್ಷಿಣ ಮೂರು ರಾಜ್ಯಗಳಲ್ಲಿ ನಮ್ಮ ಉತ್ಪನ್ನಗಳು ಜನಪ್ರಿಯವಾಗಿವೆ. ಕೇರಳದವರ ಆಹಾರಾಭ್ಯಾಸಗಳೇ ಬೇರೆ. ಆದರೆ ಆಂಧ್ರದಲ್ಲಿ ಸಾಂಬಾರ್ ಪುಡಿ, ಸಾರಿನ ಪುಡಿ, ರವೆ ಇಡ್ಲಿಗಳಿಗೆ ಒಳ್ಳೆಯ ಡಿಮ್ಯಾಂಡ್ ಇದೆ.

ಸೇಲ್ಸ್ ಪ್ರಮೋಷನ್‌ನಲ್ಲಿ ನಾವು ಇನ್ನೊಂದು ವಿಧಾನ ಅನುಸರಿಸುತ್ತಿದ್ದೇವೆ. ಸಾಧಾರಣವಾಗಿ ತಯಾರಕರು ತಮ್ಮ ಉತ್ಪನ್ನಗಳನ್ನು ಜನಪ್ರಿಯಗೊಳಿಸಲು ಒಂದು ಸ್ಪೂನ್ ಅಥವಾ ಇನ್ನಾವುದೇ ಒಂದು ಗಿಫ್ಟ್ ಉಚಿತವಾಗಿ ಕೊಡುತ್ತಾರೆ. ಆದರೆ ನಾವು ನಮ್ಮ ಒಂದು ಉತ್ಪನ್ನವನ್ನೇ ಕೊಡುತ್ತಿದ್ದೇವೆ. ಉದಾಹರಣೆಗೆ ಜಾಮೂನ್ ಮಿಕ್ಸ್ ಕೊಳ್ಳುವವರಿಗೆ 100 ಗ್ರಾಂ ರವಾದೋಸೆ ಮಿಕ್ಸ್ ಉಚಿತವಾಗಿ ಕೊಡುತ್ತಿದ್ದೇವೆ. ಇದನ್ನು ಟ್ರಯಲ್ ಪ್ಯಾಕ್ ಎನ್ನುತ್ತೇವೆ. ನಮ್ಮ ಸೂಚನೆಗಳ ಪ್ರಕಾರ ಅವರು ಅದನ್ನು ತಯಾರಿಸಿ, ರುಚಿ ನೋಡಿ, ತೃಪ್ತಿಯಾದರೆ ಆ ಉತ್ಪನ್ನವನ್ನು ಕೊಳ್ಳುತ್ತಾರೆ. ಮೊದಲು ಗ್ರಾಹಕನಿಗೆ ತೃಪ್ತಿಯಾಗಬೇಕು. ಆಗ ಮಾರಾಟ ತಂತಾನೇ ಅಭಿವೃದ್ಧಿಯಾಗುತ್ತದೆ. ಇದು ನಮ್ಮ ಸ್ಟ್ರಾಟೆಜಿ.

# ದೇವಾಲಯಗಳ ಬೀಡು ತಮಿಳುನಾಡು

—ಸುವರ್ಣ ಚಂದ್ರಶೇಖರ್


ಶ್ರೀರಂಗಂ ಗೋಪುರಗಳು


ಮಧುರೈ ಮೀನಾಕ್ಷಿ ದೇವಸ್ಥಾನ


ರಾಕ್‌ಫೋರ್ಟ್ ದೇವಸ್ಥಾನ (ತಿರುಚ್ಚಿ)

"ಬಾಗಿಲೊಳು ಕೈ ಮುಗಿದು
ಒಳಗೆ ಬಾ ಯಾತ್ರಿಕನೆ
ಶಿಲೆಯಲ್ಲವೀ ಗುಡಿಯು
ಕಲೆಯ ಬಲೆಯು!

ದೇವನಿರುವ ದೇವಾಲಯಗಳು ಮಾನವ ದೇಹದ ಪ್ರತೀಕಗಳಂತೆ . ದೇವಾಲಯಗಳು ಧಾರ್ಮಿಕ ಗುಡಿಗಳು ಮಾತ್ರವಲ್ಲ. ಅವು ಗತದ ಗರ್ಭದಲ್ಲಡಗಿದ ಇತಿಹಾಸದ ಕುರುಹುಗಳು. ಹಿಂದಿನ ಜನರ, ಆಳಿದ ರಾಜ ಮಹಾರಾಜರ, ಕಲಾಭಿಮಾನವನ್ನು, ಸಂಸ್ಕೃತಿ ಪರಂಪರೆಯ ಬಗ್ಗೆ ಅವರಿಗಿದ್ದ ಒಲುಮೆಯನ್ನು ಸಾರುವ ಸಂಕೇತಗಳು. ಭಕ್ತರಿಗೆ ದೇವರಿರುವ ಮಂದಿರವಾಗಿ, ಪ್ರವಾಸಿಗರಿಗೆ ಪ್ರೇಕ್ಷಣೀಯ ಸ್ಥಳಗಳಾಗಿ ತೋರುವ ದೇವಾಲಯಗಳು, ಹಿಂದಿನ ಇತಿಹಾಸ, ಕಲೆ ಸಂಸ್ಕೃತಿಯ ಬಗ್ಗೆ ಅಭಿಮಾನವುಳ್ಳ, ಅವುಗಳ ವಿಷಯವನ್ನು' ಇನ್ನೂ ತಿಳಿಯ ಬಯಸುವ ಕಲಾಪ್ರೇಮಿಗಳ ಆಸಕ್ತಿಯನ್ನು ಕೆರಳಿಸಿ, ಮನ ತಣಿಸುವ ಕಲೆಯ ಆಗರಗಳು.

'ತಮಿಳುನಾಡು– ದೇವಾಲಯಗಳ ನಾಡು' ಎಂದ ಗಾಂಧೀಜಿಯವರ ಮಾತನ್ನು ಪುಷ್ಟೀಕರಿಸುತ್ತವೆ ಭವ್ಯವಾಗಿ ನಿಂತಿರುವ ಅಲ್ಲಿನ ದೇವಾಲಯಗಳು. ದ್ರಾವಿಡ ಕಲೆ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಇವು ಪ್ರಮುಖವಾಗಿ ಪಾಂಡ್ಯ, ಪಲ್ಲವ, ಚೋಳ, ವಿಜಯನಗರದರಸರು ಮತ್ತು ನಾಯಕರುಗಳು – ಈ ವಂಶಗಳ ಆಳ್ವಿಕೆಯ ಕಾಲದಲ್ಲಿ ವೈವಿಧ್ಯಮಯವಾಗಿ ಕಟ್ಟಲ್ಪಟ್ಟವು. ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಮಾನವಾಕಾರಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದವರು


ರಾಮನಾಥ ಸ್ವಾಮಿ ದೇವಸ್ಥಾನ (ರಾಮೇಶ್ವರ)

ಪಾಂಡ್ಯರು, ಪಲ್ಲವರು. ಈ ಮಾನವಾಕಾರಗಳಲ್ಲಿ ಮತ್ತಷ್ಟು ಸೌಂದರ್ಯವನ್ನು ತುಂಬಿ, ನಯಗಾರಿಕೆ, ನೈಸರ್ಗಿಕವಾದ ಶೈಲಿ, ಅಲಂಕಾರಗಳಿಗೆ, ಚೋಳರು ಹೆಚ್ಚು ಗಮನ ನೀಡಿದರು. ಮಾನವಾಕಾರಗಳ ಜತೆಗೆ ವಿವಿಧ ರೀತಿಯ ವಿವರಗಳಿಗೆ ಒತ್ತು ನೀಡಿದ ವಿಜಯನಗರದರಸರ ಕಾಲದಲ್ಲಿ ನಡೆದ ನಿರ್ಮಾಣಗಳಲ್ಲಿ, ಮೂರ್ತಿಗಳ ಹಣೆಯಲ್ಲಿ ತಿಲಕ, ಎತ್ತರ ಹೆಚ್ಚಿಸಿಕೊಂಡ ಗೋಪುರಗಳು, ಪ್ರವೇಶ ದ್ವಾರದಲ್ಲಿ ಗೋಪುರಗಳ ಕೆಳಗೆ ಇಕ್ಕೆಲಗಳಲ್ಲಿ ನಿಂತ ಗಂಗಾ ಜಮುನಾ ನದಿಗಳ ಮಾನವಾಕಾರಗಳು... ಗಣನೀಯವಾದ ಅಂಶಗಳು. ಹೀಗೆ ಆಯಾಕಾಲದ ಸಂಸ್ಕೃತಿ, ಪರಂಪರೆ, ವಾಸ್ತುಶಿಲ್ಪ ಜ್ಞಾನವನ್ನು ಮೆರೆಯಿಸಿದ ಇಲ್ಲಿನ ದೇವಾಲಯಗಳು, ಅಂದಿನ ರಾಜರುಗಳ ಸಮರ ವಿಜಯಗಳ ಸ್ಮಾರಕಗಳಾಗಿ, ಅವರ ವೈಭವ ಕಲಾಭಿಮಾನದ ಸಂಕೇತಗಳಾಗಿ, ಎಲ್ಲಕ್ಕೂ ಮಿಗಿಲಾಗಿ, ಶಿಲೆಯಲ್ಲಿ ಕಲೆಯನ್ನು ಅರಳಿಸಿದ ಅಂದಿನ ರೂವಾರಿಗಳ ಕೈ ಚಳಕದ, ಕಲಾ ನೈಪುಣ್ಯದ ಪ್ರತೀಕವಾಗಿ ನಿಂತಿವೆ. ತಮ್ಮ ಬೃಹತ್ ಗಾತ್ರ, ಕಲ್ಲಿನಲ್ಲಿ ಮಾಡಿರುವ ಕಲಾ ಕೌಶಲ್ಯಗಳಿಂದ ಮನಸೆಳೆಯುವ ಈ ದೇವಾಲಯಗಳಲ್ಲಿ, ಶಿಲೆಗಳು–ಗುಡಿಗಳಾಗಿ, ಗೋಪುರಗಳಾಗಿ, ಆಧರಿಸುವ ಕಂಭಗಳಾಗಿ, ಮೇಲ್ಛಾವಣಿಗಳಾಗಿ, ಹಾಸುಗಲ್ಲಾಗಿ, ಸುಂದರ ವಿಗ್ರಹಗಳಾಗಿ, ಗರ್ಭಗುಡಿಯೊಳಗಿನ ದೇವರ ಮೂರ್ತಿಗಳಾಗಿ, ಹಲವು ರೂಪಗಳನ್ನು ತಳೆದು ನಾಟ್ಯವಾಡುತ್ತವೆ, ಹಾಡುತ್ತವೆ. ಕೇಳಬಯಸುವ ಕಿವಿಗಳಿಗೆ, ನೋಡಬಯಸುವ ಕಣ್ಣುಗಳಿಗೆ ತಮ್ಮ ಒಳ ಹೊರಗನ್ನು ಮುಚ್ಚು ಮರೆಯಿಲ್ಲದೆ ತೋರಿ, ಅಂದಿನ ಇತಿಹಾಸ, ಕತೆಗಳನ್ನು ಉಸುರುತ್ತವೆ, ಮತ್ತೆ ಜೀವಂತವಾಗಿಸಿ ಎದುರು ನಿಲ್ಲಿಸುತ್ತವೆ; ವಿಸ್ಮಯಗೊಳಿಸಿ ಮನಗಳನ್ನು ಮೂಕವಾಗಿಸುತ್ತವೆ.

ತಮ್ಮದೇ ಆದ ಸ್ಥಳ ಪುರಾಣ, ವೈಶಿಷ್ಟ್ಯಗಳನ್ನು ಹೊಂದಿರುವ ನೆನಪಿನಲ್ಲುಳಿಯುವ ಕೆಲ ದೇವಾಲಯಗಳ ವಿವರಗಳು ಇಂತಿವೆ.

## ಮಧುರೈ

ತಮಿಳ್ನಾಡಿನ ಸಂಸ್ಕೃತಿಯ ತವರೂರಾದ ಮಧುರೈ ಮದ್ರಾಸಿನ ದಕ್ಷಿಣ ದಿಕ್ಕಿಗೆ 552 ಕಿ.ಮೀ. ದೂರದಲ್ಲಿ, ವೈಗೈ ನದಿಯ ದಂಡೆಯ ಮೇಲಿದೆ. ತಮಿಳ್ನಾಡಿನ ಎರಡನೇ ದೊಡ್ಡ ನಗರವಾದ ಮಧುರೆಯ ಇತಿಹಾಸ ಕ್ರಿ.ಶ. 6ನೇ ಶತಮಾನದಷ್ಟು ಹಿಂದಿನದು. ಇದು ಕ್ರಿ.ಶ. 14ನೇ ಶತಮಾನದ ವರೆಗೆ ಪಾಂಡ್ಯರ ರಾಜಧಾನಿಯಾಗಿತ್ತು. ತನ್ನದೇ ಆದ ಸ್ಥಳ ಪುರಾಣವನ್ನು ಹೊಂದಿರುವ ಮಧುರೆಯ ಹಿಂದಿರುವ ಕತೆ ಇಂತಿದೆ – ಒಂದು ಬಾರಿ ಬ್ರಹ್ಮಹತ್ಯೆಯ ದೋಷದಿಂದ ಪರಿತಪಿಸುತ್ತಿದ್ದ ಇಂದ್ರನು ಹಲವು ದೇವಾಲಯಗಳಲ್ಲಿ ತಪ್ಪು ಕಾಣಿಕೆಗಳನ್ನು ಸಲ್ಲಿಸುತ್ತಾ ಮಧುರೆಯ ಪಕ್ಕದಲ್ಲಿರುವ ಕದಂಬವನದ ಮೂಲಕ ಹಾದು ಹೋಗುತ್ತಿದ್ದಾಗ ತಟ್ಟನೆ ಅವನ ಶಾಪ ವಿಮೋಚನೆಯಾಯಿತಂತೆ. ಅಲ್ಲೇ ಇದ್ದ ಕದಂಬ ವೃಕ್ಷದ ಕೆಳಗೆ ಕಂಡ ಶಿವಲಿಂಗವನ್ನು ಅವನು ಚನ್ನದ ತಾವರೆ ಹೂಗಳಿಂದ ಪೂಜಿಸಿ ಅಲ್ಲೊಂದು ಶಿವಗುಡಿಯನ್ನು ನಿರ್ಮಿಸಿ ದೇವಲೋಕಕ್ಕೆ ತೆರಳಿದನಂತೆ. ಕೆಲ ಕಾಲದ ಬಳಿಕ, ಆ ದಾರಿಯಾಗಿ ಸಾಗುತ್ತಿದ್ದ ಧನಂಜಯನೆಂಬ ಓರ್ವ ವರ್ತಕನು ವಿಶ್ರಾಂತಿಗೆಂದು ಗುಡಿಯ ಬಳಿ ತಂಗಿದ್ದಾಗ, ರಾತ್ರಿ ಹೊತ್ತಿನಲ್ಲಿ ಶಿವಲಿಂಗಕ್ಕೆ ನಡೆಯುತ್ತಿದ್ದ ದೇವಪೂಜೆಯನ್ನು ಕಂಡು, ಈ ವಿಸ್ಮಯವನ್ನು, ಆಗ ಮನಾವೂರನ್ನು ಆಳುತ್ತಿದ್ದ ರಾಜ ಕುಲಶೇಖರ ಪಾಂಡ್ಯನಿಗೆ ತಿಳಿಸಿದನು. ಹೀಗೆ, ಅಲ್ಲಿಗೆ ಬಂದ ರಾಜನು ದೇವಾಲಯವೊಂದನ್ನು ನಿರ್ಮಿಸಿದನಲ್ಲದೆ, ಮಧುರೆ ನಗರವನ್ನು ನಿರ್ಮಿಸಿದನಂತೆ. ಈ ನಗರಕ್ಕೆ ಹೆಸರಿಡುವ ಸಂದರ್ಭದಲ್ಲಿ ಪ್ರತ್ಯಕ್ಷನಾದ ಶಿವನ ಜಟೆಯಿಂದ ಜೇನು ಸುರಿದುದರಿಂದ, ಇದು 'ಜೇನಿನ ನಗರ' ಅಥವಾ "ಮಧುರಂ" ಎಂಬ ಹೆಸರು ಪಡೆಯಿತಂತೆ.

ಕುಲಶೇಖರ ಪಾಂಡ್ಯನ ನಂತರ ಗದ್ದುಗೆಯನ್ನೇರಿದ ಮಲಯಧ್ವಜ ಪಾಂಡ್ಯ ತನಗೆ ಮಕ್ಕಳಿಲ್ಲದುದರಿಂದ ರಾಣಿ ಕಾಂಚನಮಾಲೆಯೊಂದಿಗೆ ಯಜ್ಞವೊಂದನ್ನು ನಡೆಸಿದಾಗ, ಯಜ್ಞಕುಂಡದಿಂದ ಉದ್ಭವವಾದ 3 ಸ್ತನಗಳಿದ್ದ ಮೂರು ವರ್ಷದ ಹೆಣ್ಣು ಮಗುವನ್ನು ಕಂಡು ವ್ಯಾಕುಲನಾದ. ಅಷ್ಟರಲ್ಲಿ ಕೇಳಿ ಬಂದ ಅಶರೀರವಾಣಿಯೊಂದು 'ಈ ಬಾಲೆ, ಅವಳ ಗಂಡನನ್ನು ಸಂಧಿಸುವಾಗ ಅವಳ ಮೂರನೇ ಸ್ತನ ಮಾಯವಾಗುವುದು' ಎಂದು ಸಾಂತ್ವನ ನೀಡಿತು. ಆದಿ ಶಕ್ತಿಯ ಅವತಾರವಾದ ಈ ಬಾಲೆ 'ತಡಾತಗೈ'ಯು ರಾಜಕುಮಾರನಂತೆ ಬೆಳೆದು ಎಲ್ಲ ಯುದ್ಧವಿದ್ಯೆಗಳಲ್ಲಿ ಪರಿಣತಳಾಗಿ ರಾಜನ ನಂತರ ಗದ್ದುಗೆಯನ್ನೇರಿ ನೆರೆರಾಜ್ಯಗಳನ್ನೆಲ್ಲ ವಶಪಡಿಸಿ ಕೊಂಡು ಕೈಲಾಸವನ್ನು ತಲುಪಿದಾಗ, ಶಿವನ ತೀಕ್ಷ್ಣನೋಟವನ್ನೆದುರಿಸಿದವಳ ಮೂರನೇ ಸ್ತನ ಮಾಯವಾಗಲು, 'ಶಿವನೇ ತನ್ನ ಗಂಡ' ಎಂದು ಅವಳರಿತಳು. ಹೀಗೆ ಶಿವನು ಕೈಲಾಸದಿಂದ ಬಂದು 'ತಡಾತಗೈ'ಯನ್ನು ಮದುವೆಯಾಗಿ ಮಧುರೆಯನ್ನು ಕೆಲಕಾಲ ಆಳಿದ ನಂತರ ತಮ್ಮ ಸುಪುತ್ರನಾದ ಉಗ್ರಪಾಂಡ್ಯನ್ (ಮುರುಗನ ಅವತಾರ)ನಿಗೆ ಪಟ್ಟಾಭಿಷೇಕ ಮಾಡಿ, ತಾನು ಮತ್ತು 'ತಡಾತಗೈ', "ಸುಂದರೇಶ್ವರ" ಹಾಗೂ "ಮೀನಾಕ್ಷಿ" ಎಂಬ ದೈವೀರೂಪವನ್ನು ತಳೆದರಂತೆ.

ಮಧುರೆಯಲ್ಲಿರುವ ಸುಂದರೇಶ್ವರ ಹಾಗೂ ಮೀನಾಕ್ಷಿಯ ಗುಡಿಗಳನ್ನು ಹೊಂದಿರುವ ದೇವಾಲಯ, ತಮಿಳ್ನಾಡಿನ ಅತೀ ಪುರಾತನ ದೇವಾಲಯಗಳಲ್ಲೊಂದು. ಈಗಿರುವ ದೇವಾಲಯವು ಸುಮಾರು 64 ರಾಜರುಗಳ ಕಾಲದಲ್ಲಿ ಹಂತ ಹಂತವಾಗಿ ನಿರ್ಮಾಣಗೊಂಡಿದ್ದು, ಇದನ್ನು ನಿರ್ಮಿಸಲು ಸುಮಾರು 700 ವರ್ಷಗಳಷ್ಟು ಕಾಲ ತಗಲಿದೆ ಎಂಬುದು ಗಣನೀಯ ಅಂಶ. ಕ್ರಿ.ಶ. 7ನೇ ಶತಮಾನದಲ್ಲಿ ಇಲ್ಲಿ ಬರೀ ಶಿವನ ದೇವಾಲಯ ಮತ್ತು ಅದರ ಸುತ್ತಿನ ಗೋಡೆಯಿತ್ತು. ಮೀನಾಕ್ಷಿಯ ಮಂದಿರವು ಕ್ರಿ.ಶ. 12ನೇ ಶತಮಾನದಲ್ಲಿ ಚಂಡವರ್ಮನ್ ಸುಂದರ ಪಾಂಡ್ಯನ್‌ನ ಆಳ್ವಿಕೆಯ ಕಾಲದಲ್ಲಿ ನಿರ್ಮಿಸಲ್ಪಟ್ಟಿತು. ಕ್ರಿ.ಶ. 13 –16ನೇ ಶತಮಾನಗಳ



ಮೀನಾಕ್ಷಿ ದೇವಸ್ಥಾನದ ಪುಷ್ಕರಿಣಿ



ಮೀನಾಕ್ಷಿ ಕಲ್ಯಾಣ

ನಡುವೆ 9 ಅಂತಸ್ತುಗಳುಳ್ಳ ಗೋಪುರಗಳು ಕಟ್ಟಲ್ಪಟ್ಟುವು. ಆ ಬಳಿಕ, ನಾಯಕರ ಆಳ್ವಿಕೆಯ 200 ವರ್ಷಗಳಲ್ಲಿ, ಸಾವಿರ ಕಂಭದ ಭವನ, ಅಷ್ಟಶಕ್ತಿ ಮಂಟಪ, ಪುದುಮಂಟಪ, ವಂಡಿಯೂರು ತೆಪ್ಪಕೊಳ, ನಾಯಕರ್ ಮಹಲ್... ಹೀಗೆ ಹಲವಾರು ರಚನೆಗಳ ಸೇರ್ಪಡೆಯಾಯಿತು. ಮಾತ್ರವಲ್ಲದೆ ಅಪೂರ್ಣವಾಗಿದ್ದ ಉತ್ತರದ ಗೋಪುರವನ್ನು ಪೂರ್ಣಗೊಳಿಸಲಾಯಿತು. ಕ್ರಿ.ಶ. 1960–63ರಲ್ಲಿ ಗೋಪುರಗಳಿಗೆ ಬಣ್ಣ ಹಾಗೂ ದೇವಾಲಯದ ಒಳಗಿನ ಮಾಸಿದ ಚಿತ್ರಗಳಿಗೆ ಮತ್ತೆ ಬಣ್ಣ ಬಳಿಯಲಾಯಿತು.

ಭಾರತದಲ್ಲಿಯೇ ಅತೀ ದೊಡ್ಡದಾದ ಪ್ರಾಕಾರವನ್ನು ಹೊಂದಿರುವ ಈ ದೇವಾಲಯವು 850 ಅಡಿ ಉದ್ದ, ಹಾಗೂ 796 ಅಡಿ ಅಗಲವಿದ್ದು, 15 ಎಕರೆ ವಿಸ್ತೀರ್ಣವನ್ನು ಹೊಂದಿದೆ. ಸುಮಾರು 9,000 ಕಂಭಗಳನ್ನು ಹೊಂದಿರುವ ಈ ದೇವಾಲಯಕ್ಕೆ ಒಟ್ಟು 24 ದ್ವಾರಗಳಿವೆ. ದೇವಾಲಯದ ಮುಖ್ಯ ದ್ವಾರ ಪೂರ್ವ ದಿಕ್ಕಿನಲ್ಲಿದೆ. ಮುಖ್ಯ ಮಂದಿರಗಳ ಸುತ್ತಲೂ ಇರುವ ರಸ್ತೆ ಆದಿವೀಥಿಯಲ್ಲಿ ಬೃಹದಾಕಾರದ, 9 ಅಂತಸ್ತುಗಳನ್ನು ಹೊಂದಿರುವ ನಾಲ್ಕು ಗೋಪುರಗಳಿವೆ. ಅರ್ಧದಲ್ಲಿಯೇ ನಿರ್ಮಾಣ ಕಾರ್ಯ ಸ್ಥಗಿತವಾಗಿರುವ "ರಾಯಗೋಪುರ" ಸಂಪೂರ್ಣಗೊಂಡಿದ್ದರೆ ಅದು ಇಂದು ದೇಶದಲ್ಲಿಯೇ



ತಿರುಮಲೈ ನಾಯಕ ಮಹಲ್

ಅತ್ಯುನ್ನತವಾದ ಗೋಪುರ ಎನಿಸುತ್ತಿತ್ತು. ಎಲ್ಲಕ್ಕಿಂತಲೂ ಹಳೆಯದಾದ ಮುಖ್ಯ ಗೋಪುರ ಪೂರ್ವ ದಿಕ್ಕಿನಲ್ಲಿದ್ದು, ಇದನ್ನು ಕ್ರಿ.ಶ. 13ನೇ ಶತಮಾನದಲ್ಲಿ ಮಾರವರ್ಮನ್ ಸುಂದರ ಪಾಂಡ್ಯನ್‌ನಿಂದ ನಿರ್ಮಿಸಲ್ಪಟ್ಟಿತು. "ಮೊಟ್ಟಾಯ್ ಗೋಪುರ" ವೆಂದು ಕರೆಯಲ್ಪಡುವ ಉತ್ತರದ ಗೋಪುರದಲ್ಲಿ ಗಣನೀಯವಾದ ಕೆತ್ತನೆಗಳಿಲ್ಲದಿದ್ದರೂ, ಈ ಗೋಪುರದ ಬದಿಯಲ್ಲಿರುವ 5 ಸಂಗೀತ ಕಂಭಗಳು, ಪ್ರತಿಯೊಂದು ಏಕಶಿಲೆಯಿಂದ ನಿರ್ಮಿತವಾಗಿದ್ದು, ಒಂದೊಂದರಲ್ಲೂ 22 ಸಣ್ಣ ಕಂಭಗಳಿವೆ. ಇವು ಗಳನ್ನು ತಟ್ಟಿದಾಗ ಸಂಗೀತದ ವಿವಿಧ ನಾದಗಳು ಹೊಮ್ಮುತ್ತವೆ. ಈಗಿರುವ ಗೋಪುರಗಳಲ್ಲಿ ಎಲ್ಲಕ್ಕಿಂತಲೂ ಎತ್ತರವಾದುದು 'ದಕ್ಷಿಣ ಗೋಪುರ'. ಇದು 160 ಅಡಿ ಎತ್ತರವಿದ್ದು, ಕ್ರಿ.ಶ. 16ನೇ ಶತಮಾನದಲ್ಲಿ, ಸೆವ್ವಂತಿ ಚೆಟ್ಟಿಯಾರಿಂದ ನಿರ್ಮಿಸಲ್ಪಟ್ಟಿತು. ಈ ಬೃಹತ್ ಗೋಪುರಗಳ ಜತೆ ಚಿಕ್ಕ ಪುಟ್ಟ ಗೋಪುರಗಳೂ ಸೇರಿ, ಒಟ್ಟು ಇರುವ 14 ಗೋಪುರಗಳು ದೇವಾಲಯದ ಶೋಭೆಯನ್ನು ಹೆಚ್ಚಿಸಿವೆ.

ದೇವಿ ಮೀನಾಕ್ಷಿಯ ದರ್ಶನ ಮಾಡಲು, ಮೊದಲು ಪೂರ್ವ ದಿಕ್ಕಿನಿಂದ 'ಅಷ್ಟ ಶಕ್ತಿ ಮಂಟಪ'ವನ್ನು ಪ್ರವೇಶಿಸಬೇಕಾಗುತ್ತದೆ. ಈ ಮಂಟಪದ ಮುಖ್ಯ ದ್ವಾರದಲ್ಲಿ, ಮೀನಾಕ್ಷಿ–ಸುಂದರೇಶ್ವರರ ವಿವಾಹದ ಚಿತ್ರಣವು ಕಲ್ಲಿನಲ್ಲಿ ಸುಂದರವಾಗಿ ಮೂಡಿ ನಿಂತಿದೆ. ಗಣೇಶ ಮತ್ತು ಸುಬ್ರಹ್ಮಣ್ಯರ ವಿಗ್ರಹಗಳು ಇಕ್ಕೆಲಗಳಲ್ಲಿವೆ. ಮಂಟಪದ ಎರಡೂ ಬದಿಯ ಕಂಬಗಳಲ್ಲಿ ಅಷ್ಟ ಶಕ್ತಿಯನ್ನು ಕೆತ್ತನೆಯಲ್ಲಿ ರೂಪಿಸಿರುವುದರಿಂದ ಇದಕ್ಕೆ "ಅಷ್ಟಶಕ್ತಿ ಮಂಟಪ" ಎಂಬ ಹೆಸರು ಬಂದಿದೆ. ಮಂಟಪದ ಗೋಡೆಗಳಲ್ಲಿರುವ ಕೆತ್ತನೆಗಳು ಹಾಗೂ ಚಿತ್ರಗಳು ಮನಸೆಳೆಯುತ್ತವೆ. ಈ ಮಂಟಪವನ್ನು ದಾಟಿ ಮುಂದೆ ನಡೆದಾಗ ಇರುವ "ಮೀನಾಕ್ಷಿ ನಾಯಕನ್ ಮಂಟಪ"ದಲ್ಲಿ ಹಲವಾರು ಕೆತ್ತನೆಯ ರೂಪಗಳನ್ನು ಹೊತ್ತು ಸಮಾನಾಂತರದಲ್ಲಿ ನಿಂತಿರುವ 6 ಸಾಲು ಕಂಭಗಳಿವೆ. ಅಷ್ಟ ಶಕ್ತಿ ಮಂಟಪ ಹಾಗೂ ಈ ಮಂಟಪಗಳ ನಡುವೆ ಇರುವ ಚಾವಡಿಯಲ್ಲಿ ವ್ಯಾಧರೂಪ ಹೊತ್ತ ಶಿವ ಹಾಗೂ ಪಾರ್ವತಿಯರ ಸುಂದರ ವಿಗ್ರಹಗಳಿವೆ. 'ಮೀನಾಕ್ಷಿ ನಾಯಕನ್

ಮಂಟಪ'ದ ನಂತರ ಅಮೋಘವಾದ ಚಿತ್ರ ಗೋಪುರವನ್ನು ಹಾದು ನಡೆದರೆ ಸಿಗುತ್ತದೆ "ಕತ್ತಲು ಮಂಟಪ"ವೆಂದೂ ಕರೆಯಲ್ಪಡುವ "ಮೂಡಲಿ ಪಿಳ್ಳೈ ಮಂಟಪ". ಹಲವಾರು ಸುಂದರ ಕೆತ್ತನೆಗಳಿರುವ ಇಲ್ಲಿ, ಮುರುಗ, ವಿನಾಯಕ ಹಾಗೂ ಈ ಮಂಟಪವನ್ನು ಕಟ್ಟಿದ 'ಕಡಂಥ್ಯಾ ಮೊದಲಿಯಾರ್'ರ ವಿಗ್ರಹಗಳಿವೆ. ಕತ್ತಲ ಮಂಟಪದಿಂದ ಮುನ್ನಡೆದಾಗ ಕಾಣುವುದು ಸುಂದರ ಹಾಗೂ ಪವಿತ್ರವಾದ "ಪೊಟ್ರೈಮಾರೈ ಕುಳಂ" (ಚಿನ್ನದ ತಾವರೆ ಕೊಳ). ಶಾಪಗ್ರಸ್ತನಾಗಿದ್ದ ಇಂದ್ರನು, ಈ ಕೊಳದಲ್ಲಿ ಸ್ನಾನ ಮಾಡಿ, ಪಾಪ ವಿಮೋಚನೆ ಮಾಡಿಕೊಂಡು, ಈ ಕೊಳದಿಂದ ಕಿತ್ತ ಚಿನ್ನದ ತಾವರೆ ಹೂಗಳಿಂದ ಶಿವನ ಲಿಂಗವನ್ನು ಪೂಜಿಸಿದನೆಂಬ ಕತೆ ಇದೆ. ಈ ಕೊಳದ ಸುತ್ತ ವಿಶಾಲವಾದ ಚಾವಡಿಗಳಿವೆ. ಉತ್ತರದ ಚಾವಡಿಯಲ್ಲಿರುವ ಕಂಭಗಳಲ್ಲಿ 3ನೇ ತಮಿಳುಸಂಗಂನ 24 ಕವಿಗಳ ವಿಗ್ರಹಗಳಿವೆ. ಅಲ್ಲದೆ ಮೂಲದೇವರನ್ನು ಕದಂಬವನದಲ್ಲಿ ಕಂಡ ವ್ಯಾಪಾರಿ ಧನಂಜಯ ಮತ್ತು ಈ ದೇವಾಲಯವನ್ನು ಕಟ್ಟಿದ ಕುಲಶೇಖರ ಪಾಂಡ್ಯನ್‌ರ ವಿಗ್ರಹಗಳು ಎರಡು ಕಂಭಗಳಲ್ಲಿ ಕೆತ್ತಲ್ಪಟ್ಟಿವೆ. ಉತ್ತರದ ಹಾಗೂ ಪೂರ್ವದ ಚಾವಡಿಗಳ ಗೋಡೆಗಳ ಮೇಲೆ, ಚಿತ್ರ ಪೂರ್ಣಿಮೆಯ ದಿನ ನಡೆದಿದ್ದ ಮೀನಾಕ್ಷಿ–ಸುಂದರೇಶರ ಮದುವೆಯ ದಿನದ ನೆನಪಿನಲ್ಲಿ ಆಚರಿಸುವ "ತಿರುವಿಳೈಯಾಡಲ್ ಪೂರಣಂ" ಹಬ್ಬದ ಸುಂದರ ವರ್ಣಚಿತ್ರಗಳಿವೆ. ಪೂರ್ವದ ಚಾವಡಿಯಿಂದ, ಮೀನಾಕ್ಷಿ ಹಾಗೂ ಸುಂದರೇಶ್ವರರ ಗರ್ಭಗುಡಿಗಳ ಮೇಲಿರುವ ಚಿನ್ನದ ಗೋಪುರಗಳನ್ನು ಕಾಣಬಹುದು. ದಕ್ಷಿಣದ ಚಾವಡಿಯ ಗೋಡೆಗಳಲ್ಲಿ ಅಳವಡಿಸಿರುವ ಅಮೃತಶಿಲೆಯ ಹಾಸುಗಳ ಮೇಲೆ ತಮಿಳಿನ ಪ್ರಸಿದ್ಧ 'ತಿರುಕ್ಕುರಳ್'ನ ಹಿತೋಕ್ತಿಗಳು ಬರೆಯಲ್ಪಟ್ಟಿವೆ.

ಚಿನ್ನದ ತಾವರೆ ಕೊಳದ ಪಕ್ಕದಲ್ಲೆ ಪಶ್ಚಿಮದ ದಿಕ್ಕಿನಲ್ಲಿ "ಅಂಜಲ್ ಮಂಟಪ"ವಿದೆ. ಇಲ್ಲಿ, ಅಮೃತಶಿಲೆಯ ಪೀಠದ ಮೇಲಿಟ್ಟಿರುವ ಮೀನಾಕ್ಷಿ–ಸುಂದರೇಶ್ವರ ಚಿನ್ನದ ಮೂರ್ತಿಗಳನ್ನು ಶುಕ್ರವಾರದಂದು ಪೂಜಿಸುತ್ತಾರೆ. ಈ ಮಂಟಪದಲ್ಲಿ ಸುಬ್ರಹ್ಮಣ್ಯನ ಆರು ಪ್ರಸಿದ್ಧ ದೇವಾಲಯಗಳ (ಅರುಪಡೈವೀಡು) ಸುಂದರ ವರ್ಣಚಿತ್ರಗಳಿವೆ. ಅಂಜಲ್ ಮಂಟಪದ ಪಕ್ಕದಲ್ಲಿ ಹಿಂದೆ ಪಂಜರದಲ್ಲಿ ಗಿಳಿಗಳನ್ನು ಕೂಡಿಟ್ಟಿರುತ್ತಿದ್ದರೆಂದು "ಕಿಳಿಕೂಟ್ಟು ಮಂಟಪ"ವಿದೆ. ಇಲ್ಲಿರುವ ಉದ್ದನೆಯ ಕಂಬಗಳ ಸಾಲು, ಹಾಗೂ ಅದರಲ್ಲಿ ಕೆತ್ತಿರುವ ವಿಗ್ರಹಗಳಲ್ಲಿ ಕಾಣುವ ಕುಸುರಿ ಕಲಾ ಕೌಶಲತೆಗಳು ಈ ಮಂಟಪದ ಭವ್ಯತೆಯನ್ನು ಹೆಚ್ಚಿಸಿವೆ. ಪಂಚ ಪಾಂಡವರು ಹಾಗೂ ದ್ರೌಪದಿಯ ಸುಂದರ ವಿಗ್ರಹಗಳು, ಮೇಲ್ಛಾವಣಿಯಲ್ಲಿ ಶೋಭಿಸುವ ಚಿತ್ರಗಳು, ಗೋಡೆಯ ಮೇಲಿರುವ ಮೀನಾಕ್ಷಿ



ಮೀನಾಕ್ಷಿ–ಸುಂದರೇಶ್ವರ್ ದೇವಸ್ಥಾನ

ಮದುವೆಯ ಚಿತ್ರಗಳು ಮನಸೆಳೆಯುತ್ತವೆ.

ಕಿಳಿಕೂಟ್ಟು ಮಂಟಪವನ್ನು ದಾಟಿ ಮುನ್ನಡೆದಾಗ ಸಿಗುವುದು "ದೇವಿ ಮೀನಾಕ್ಷಿಯ ಮಂದಿರ". ಪ್ರವೇಶ ದ್ವಾರದಲ್ಲಿ ಮೂರು ಅಂತಸ್ತುಗಳ ಗೋಪುರವಿದೆ. ಹೊರಗಿನ ಪ್ರಾಂಗಣದಲ್ಲಿ ಚಿನ್ನದ ಹೊದಿಕೆ ಹೊದ್ದ ಧ್ವಜಸ್ತಂಭ, ತಿರುಮಲೈ ನಾಯಕರ ಮಂಟಪ, ವಿನಾಯಕ, ಕೂಡಲ್ ಕುಮಾರರ ಗುಡಿಗಳಿವೆ. ಕೂಡಲ್ ಕುಮಾರರ ಗುಡಿಯ ಗೋಡೆಗಳ ಮೇಲೆ "ಅರುಣಗಿರಿನಾಥ'ರು ಹಾಡಿದ "ತಿರುಪ್ಪಿಗಳು" ಪದ್ಯಗಳು ಕೆತ್ತಲ್ಪಟ್ಟಿವೆ. ಒಳಗಿನ ಪ್ರಾಂಗಣವಾದ "ಮಹಾ ಮಂಟಪ"ದಲ್ಲಿ 'ಐರಾವತ ವಿನಾಯಕನ ಗುಡಿ', ಹಾಗೂ 'ದೇವರ ಶಯನ ಗೃಹ'ಗಳಿವೆ. ಪಶ್ಚಿಮದ ದಿಕ್ಕಿನಲ್ಲಿ "ಅರ್ಧ ಮಂಟಪ" ಮತ್ತು ಮೀನಾಕ್ಷಿ ದೇವಿಯ ಗರ್ಭಗುಡಿಗಳಿವೆ. ಗರ್ಭಗುಡಿಯೊಳಗೆ ಕೈಗಳಲ್ಲಿ ಹೂವಿನ ಗುಚ್ಛ ಹಾಗೂ ಗಿಣಿಯನ್ನು ಹಿಡಿದು ನಿಂತಿರುವ ಮೀನಿನಾಕಾರದ ಕಂಗಳ ಮೀನಾಕ್ಷಿ ದೇವಿಯ ಮೂರ್ತಿಯ ಸೊಬಗು ಅವರ್ಣನೀಯ. ಈ ಗುಡಿಯಿಂದ ಹಿಂತಿರುಗಿ ಕಿಳಿಕೂಟ್ಟು ಮಂಟಪಕ್ಕೆ ಬಂದಾಗ ಉತ್ತರ ದಿಕ್ಕಿನಲ್ಲಿರುವ 8 ಅಡಿ ಎತ್ತರದ "ಮುಕ್ಕುರುಣಿ ವಿನಾಯಕ"ನ ಮೂರ್ತಿ ಬಹುವಾಗಿ ಆಕರ್ಷಿಸುತ್ತದೆ. ತಿರುಮಲೈನಾಯಕ ವಂಡಿಯೂರು ತೆಪ್ಪ ಕೊಳವನ್ನು ಅಗೆಯುತ್ತಿದ್ದಾಗ ಈ ಮೂರ್ತಿ ಸಿಕ್ಕಿತಂತೆ.

ಸುಂದರೇಶ್ವರ ಸ್ವಾಮಿಯ ಮಂದಿರದ ಮುಂಭಾಗದಲ್ಲಿ ಪ್ರಸಿದ್ಧವಾದ "ಕಂಬತ್ತಾಡಿ ಮಂಟಪ"ವಿದೆ. ಈ ಮಂಟಪದಲ್ಲಿರುವ ಕುಸುರಿ, ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ ವಿಗ್ರಹಗಳ ಸೌಂದರ್ಯ ಅವರ್ಣನೀಯ. ಇಲ್ಲಿ ಮಧ್ಯದಲ್ಲಿ,

ಚಿನ್ನದ ತಗಡು ಹೊದ್ದ ಧ್ವಜಸ್ತಂಭ, ಬಲಿಪೀಠ ಮತ್ತು ನಂದಿ ಮಂಟಪಗಳಿವೆ. ಒಂದೇ ಕಲ್ಲಿನಲ್ಲಿ, ನಡುವಿನಲ್ಲಿ ನಂದಿ ಅದರ ಸುತ್ತಲೂ ಮಂಟಪವನ್ನು ಕೆತ್ತಿರುವ ಅದ್ಭುತ ರಚನೆಯೆನ್ನಿಸುವ ಈ "ನಂದಿ ಮಂಟಪ"ದ ಕೆತ್ತನೆ ಶ್ಲಾಘನೀಯ. ಕಂಬತ್ತಾಡಿ ಮಂಟಪದ ಎಂಟು ಅಲಂಕೃತ ಕಂಭಗಳಲ್ಲಿ

### ಹೆಚ್ಚು ಮಹಿಳಾ ನ್ಯಾಯಾಧೀಶರನ್ನೊಳಗೊಂಡ ಉಚ್ಚ ನ್ಯಾಯಾಲಯ

*1978ರ ಜನವರಿ 10ರಂದು ಪ್ರತಿಭಾ ಬ್ಯಾನರ್ಜಿ ಕಲ್ಕತ್ತಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಪ್ರಮಾಣ ವಚನ ಸ್ವೀಕರಿಸಿರುವುದರಿಂದ ಇದು ರಾಷ್ಟ್ರದಲ್ಲೇ ಹೆಚ್ಚು ಮಹಿಳಾ ನ್ಯಾಯಾಧೀಶರನ್ನೊಳಗೊಂಡ ನ್ಯಾಯಾಲಯ ಎಂಬ ಕೀರ್ತಿಗೆ ಪಾತ್ರವಾಯಿತು. ಇವರು ಅಲ್ಲಿ ನಾಲ್ಕನೆಯ ಮಹಿಳಾ ನ್ಯಾಯಾಧೀಶರಾಗಿ ನಿಯಮನಗೊಂಡರು. ಅಲ್ಲಿನ ಇನ್ನುಳಿದ ಮಹಿಳಾ ನ್ಯಾಯಾಧೀಶರೆಂದರೆ ಪದ್ಮಾ ಖಸ್ತಗೀರ್ (ಜೂನ್ 17, 1977) ಮಂಜುಳಾ ಬೋಸ್ ಮತ್ತು ಜ್ಯೋತಿರ್ಮಯಿ ನಾಗ್ (ಡಿಸೆಂಬರ್ 8, 1977)*

ಶಿವನ ವಿವಿಧ ರೂಪಗಳನ್ನು ಕೆತ್ತಲಾಗಿದೆ. ಅಲ್ಲದೆ ಇಲ್ಲಿ ವಿಷ್ಣುವಿನ ಹಲವು ಅವತಾರಗಳನ್ನು ಕೆತ್ತಿದ್ದು, ಇದರಲ್ಲಿ ಮೀನಾಕ್ಷಿ–ಸುಂದರೇಶ್ವರರ ಮದುವೆಯ ದೃಶ್ಯವು ಸುಂದರ ಸೂಕ್ಷ್ಮ ಕೆಲಸದಿಂದ ಕೂಡಿದ್ದು, ದ್ರಾವಿಡ ಕಲೆಯ ಶ್ರೇಷ್ಠತೆಗೊಂದು ನಿದರ್ಶನವಾಗಿದೆ ಮಾತ್ರವಲ್ಲದೆ ಕಲ್ಲಲ್ಲಿ ಜೀವಂತಿಕೆಯನ್ನು ಛಟ್ಟಿ ಇಳಿಸಿದ ಶಿಲ್ಪಿಯ ಅದ್ಭುತ ಕೈಚಳಕಕ್ಕೂ ಒಂದು ಸಾಕ್ಷಿಯಾಗಿದೆ. ಮಂಟಪದ ಹತ್ತಿರವೇ ಅಗ್ನಿ ವೀರಭದ್ರ, ಅಘೋರ ವೀರಭದ್ರ, ಕಾಳಿ ಹಾಗೂ ಊರ್ಧ್ವ ತಾಂಡವ ನೃತ್ಯ ಭಂಗಿಯಲ್ಲಿ ನಿಂತಿರುವ ಶಿವನ ಬೃಹತ್ ಮೂರ್ತಿಗಳಿವೆ. ಒಂದೇ ಕಲ್ಲಿನಲ್ಲಿ ಕಂಬ ಹಾಗೂ ವಿಗ್ರಹಗಳನ್ನು ಕೆತ್ತಿದ ಕುಶಲತೆ, ಈ ಮಂಟಪದಲ್ಲಿನ ಕೆತ್ತನೆಗಳಲ್ಲಿ ಮೂಡಿ ನಿಂತಿರುವ ಅಂದಿನ ಕಲಾಪ್ರೌಢಿಮೆ ನಮ್ಮನ್ನು (ವೀಕ್ಷಕರನ್ನು) ಮೂಕವಾಗಿಸುತ್ತದೆ.

ಸುಂದರೇಶ್ವರ ಸ್ವಾಮಿಯ ಮಂದಿರದ ಪ್ರವೇಶ ದ್ವಾರದಲ್ಲಿ 12 ಅಡಿ ಎತ್ತರದ ಎರಡು ದ್ವಾರಪಾಲಕರ ವಿಗ್ರಹಗಳಿವೆ. ಮೊದಲನೆಯ ಪ್ರಾಂಗಣದಲ್ಲಿ, 6 ಕಂಭಗಳಿರುವ ಪೀಠ (ಆರುಕಾಲ್ ಪೀಠ)ವಿದೆ. ಇಲ್ಲಿಂದಲೇ "ತಿರುವಿಳೈಯಾಡಲ್ ಪುರಾಣಂ" ಉತ್ಸವವು ಆರಂಭಗೊಳ್ಳುತ್ತದೆ. ಅಲ್ಲದೆ ಸರಸ್ವತಿ, ಕಾಶಿ ವಿಶ್ವನಾಥ, ದುರ್ಗೆಯರ ಗುಡಿಗಳಿವೆ. ಈ ಪ್ರಾಂಗಣದ ಉತ್ತರಕ್ಕೆ ಪವಿತ್ರವಾದ, 1600 ವರ್ಷಗಳಷ್ಟು ಹಳೆಯದಾದ ಕದಂಬ ವೃಕ್ಷದ ಕಾಂಡ, ಕನಕಸಭೆ, ಯಾಗಶಾಲೆಗಳಿವೆ. "ವೆಲ್ಲ ಅಂಬಲಂ" ಎಂದು ಕರೆಯಲ್ಪಡುವ ನಟರಾಜ ಸ್ವಾಮಿಯ ಗುಡಿಯಲ್ಲಿ ಬಲಗಾಲನ್ನೆತ್ತಿ ನಾಟ್ಯ ಭಂಗಿಯಲ್ಲಿ ನಿಂತಿರುವ ಶಿವನನ್ನು ಆರಾಧಿಸುತ್ತಾರೆ. ಇಲ್ಲಿಂದ ಸಣ್ಣ ದ್ವಾರದ ಮೂಲಕ ಪ್ರವೇಶಿಸಿದರೆ "ಸುಂದರೇಶ್ವರ ಸ್ವಾಮಿ"ಯ ಗರ್ಭಗುಡಿಯಿದೆ. "ಚೊಕ್ಕನಾಥ" "ಕರ್ಪೂರಚೋಕ" ಎಂಬೆಲ್ಲ ನಾಮಗಳಿಂದ ಕರೆಯಲ್ಪಡುವ ಶಿವಲಿಂಗವಿರುವ, ಈ ಗರ್ಭಗುಡಿಯನ್ನು ಕಲ್ಲಲ್ಲಿ ಕೆತ್ತಿರುವ 64 ಭೂತಗಣಗಳು, 8 ಆನೆಗಳು, ಮತ್ತು 32 ಸಿಂಹಗಳು ಆಧರಿಸಿ ನಿಂತಿವೆ. ಗುಡಿಯ ಹೊರ ಭಾಗದ, ಮೇಲ್ಭಾಗಕ್ಕೆ 100 ಕಿಲೋ ತೂಕ ಇರುವ ಚಿನ್ನದ ತಗಡನ್ನು ಹೊದಿಸಲಾಗಿದೆ. ಸುಂದರೇಶ್ವರನ ಸನ್ನಿಧಿಯಿಂದ ಹಿಂತಿರುಗಿ ಕಂಬತ್ತಾಡಿ ಮಂಟಪವನ್ನು ದಾಟಿ "ಸಾವಿರ ಕಂಬದ ಚಾವಡಿ"ಗೆ ಬಂದಾಗ, ದ್ವಾರದಲ್ಲಿಯೇ ಇದನ್ನು ಕಟ್ಟಿದ "ಅರಿಯನಾಥ ಮುದಲಿಯಾರ"ರ ವಿಗ್ರಹವು ಸ್ವಾಗತಿಸುತ್ತದೆ. ಚಾವಡಿಯ ಒಂದು ಕೊನೆಯಲ್ಲಿರುವ ಮಂಟಪದಲ್ಲಿ ನಟರಾಜನ ಸುಂದರವಾದ ವಿಗ್ರಹವಿದೆ. ಈ ಚಾವಡಿಯಲ್ಲಿರುವ ಕಂಬಗಳು ಯಾವ ಕೋನದಿಂದ ನೋಡಿದರೂ ನೇರವಾದ ರೇಖೆಯಲ್ಲಿ ನಿಂತಿರುವ ರೀತಿ, ಅಮೋಘವೇ ಸರಿ. ಇಲ್ಲಿನ ಮೇಲ್ಛಾವಣಿಯಲ್ಲಿ ಅರವತ್ತು ಸಂವತ್ಸರಗಳನ್ನು ಸೂಚಿಸುವ ಚಕ್ರವನ್ನು ಕೆತ್ತಿದ್ದಾರೆ. ಇಲ್ಲಿರುವ ಮನ್ಮಥ, ಮೋಹಿನಿ,



ಅಳಗರ್ ಕೋಯಿಲ್

ಕಾಳಿ–ಪುರುಷ, ಕೊಳಲು ಹಿಡಿದ ಸುಂದರಿಯರ ಸುಂದರ ವಿಗ್ರಹಗಳು, ಜೋಡಿಸಿಟ್ಟಿರುವ ಹಲವು ರೀತಿಯ ಪುರಾತನ–ನವೀನ ಕಲೆಯ ಮಾದರಿಗಳು ಆಕರ್ಷಣೀಯವಾಗಿವೆ.

ದೇವಾಲಯದ ಪೂರ್ವ ಗೋಪುರದ ಎದುರು "ವಸಂತ ಮಂಟಪ"ವೆಂದೂ ಕರೆಯಲ್ಪಡುವ "ಪುದು ಮಂಟಪ"ವು ತಿರುಮಲೈ ನಾಯಕನ ಕಾಲದಲ್ಲಿ ನಿರ್ಮಿಸಲ್ಪಟ್ಟಿತು. ಇದು ಮೀನಾಕ್ಷಿ–ಸುಂದರೇಶ್ವರರ ಬೇಸಿಗೆಯ ವಿಶ್ರಾಂತಿ ಧಾಮ. ಈ ಮಂಟಪದ ಒಳಚಾವಡಿಯ ಮಧ್ಯದಲ್ಲಿರುವ ಗ್ರಾನೈಟ್‌ನಿಂದ ನಿರ್ಮಿಸಿರುವ ಪೀಠದಲ್ಲಿ, ಹಬ್ಬಗಳ ಸಮಯದಲ್ಲೂ ದೇವರ ವಿಗ್ರಹಗಳನ್ನಿಡುತ್ತಾರೆ. 'ತಡಾತಗೈ' (ಯಜ್ಞಕುಂಡದಿಂದ ಎದ್ದು ಬಂದ ಬಾಲೆ) ಮೀನಾಕ್ಷಿ ಮದುವೆ, ಕೈಲಾಸ ಪರ್ವತವನ್ನೆತ್ತುತ್ತಿರುವ ರಾವಣ ರ ಕಲ್ಲಿನ ವಿಗ್ರಹಗಳು, ಕಲ್ಲಿನಲ್ಲಿ ಮೂಡಿಸಿರುವ ಕಬ್ಬನ್ನು ತಿನ್ನುತ್ತಿರುವ ಆನೆ, ಈ ಮಂಟಪವನ್ನು ಸುಂದರಗೊಳಿಸಿವೆ. ನಾಯಕ ರಾಜರ ವಿಗ್ರಹಗಳೂ ಇಲ್ಲಿವೆ. ಪುದು ಮಂಟಪದಿಂದ ಹೊರ ಬಂದಾಗ ಅಪೂರ್ಣವಾಗಿ ನಿಂತಿರುವ 'ರಾಯಗೋಪುರ' ಎದುರಾಗುತ್ತದೆ.

ಮಧುರೆಯಲ್ಲಿರುವ, "ಮಾರಿಯಮ್ಮನ್ ತೆಪ್ಪಕೊಳ" ಎಂದೂ ಕರೆಯಲ್ಪಡುವ "ವಂಡಿಯೂರು ತೆಪ್ಪಕೊಳ"ವನ್ನು ತಿರುಮಲ ನಾಯಕ ಕಟ್ಟಿಸಿದನು. 1,000 ಅಡಿ ಉದ್ದ ಹಾಗೂ 950 ಅಡಿ ಅಗಲವಿದ್ದು ಮಧುರೆಯ ದೇವಾಲಯದಷ್ಟೇ ವಿಸ್ತೀರ್ಣವನ್ನು ಹೊಂದಿರುವ ಈ ಕೊಳವು, ದಕ್ಷಿಣ ಭಾರತದಲ್ಲಿಯೇ ದೊಡ್ಡದಾದ, ಕಲ್ಲಿನಲ್ಲಿ ಕಟ್ಟಿದ ಕೊಳವಾಗಿದೆ. ಕೊಳದ ಮಧ್ಯಭಾಗದಲ್ಲಿರುವ ಸುಂದರವಾದ ಮಂಟಪದ ಸುತ್ತಲೂ ನಾಲ್ಕು ಸಣ್ಣ ಮಂಟಪಗಳಿವೆ. ಈ ಕೊಳದಲ್ಲಿ ನಡೆಯುವ ದೀಪ ತೆಪ್ಪೋತ್ಸವವು ಬಹಳ ಸುಂದರ. ಅವಿಸ್ಮರಣೀಯ ದೃಶ್ಯವೆನಿಸಿದೆ.

ಹೀಗೆ, ಈ ಪ್ರಸಿದ್ಧ ದೇವಾಲಯದಿಂದಲೂ ಹೆಸರುವಾಸಿಯಾಗಿರುವ ಮಧುರೆಯು ಸುಮಾರು 2,000 ವರ್ಷಗಳ ಹಿಂದಿನಿಂದಲೂ ಅಗ್ರಸ್ಥಾನ ಪಡೆದ ತಮಿಳು ನಗರವಾಗಿದ್ದು ಈಗಲೂ, ತಮಿಳು ಸಂಸ್ಕೃತಿ, ಕಲೆಗಳ ಕೇಂದ್ರವಾಗಿ ಪ್ರವಾಸಿಗರನ್ನು ಆಕರ್ಷಿಸುತ್ತಿದೆ.

**'ಅಳಗರ್ ಕೋಯಿಲ್':** ಮಧುರೆಯ ಪೂರ್ವಕ್ಕೆ 21 ಕಿ.ಮೀ. ದೂರದಲ್ಲಿ ಬೆಟ್ಟದ ಬುಡದಲ್ಲಿ ಸುಂದರವಾದ ವಿಷ್ಣುವಿನ ದೇವಾಲಯವಿದೆ. ಅಳಗರ್ ಕೋಯಿಲ್ ವೈಷ್ಣವರಿಗೆ ಪವಿತ್ರ ಕ್ಷೇತ್ರವಾಗಿದೆ. ಇಲ್ಲಿನ ಗುಡಿಯಲ್ಲಿರುವ, ಸುಂದರ ರಾಜ ಪೆರುಮಾಳ್‌ನ ಕಂಚಿನ ವಿಗ್ರಹ ಬಹಳ ಸುಂದರವಾಗಿದೆ. ಈ ಮೂರ್ತಿಯ ದಿನನಿತ್ಯದ ಅಭಿಷೇಕಕ್ಕೆ, ಬೆಟ್ಟದ ಮೇಲೆ 3 ಕಿ.ಮೀ.ನಷ್ಟು ಎತ್ತರದಲ್ಲಿರುವ ಝರಿಯ ನೀರನ್ನು ಉಪಯೋಗಿಸುತ್ತಾರೆ. ಬೇರೆ ನೀರನ್ನು ಉಪಯೋಗಿಸಿದರೆ ಮೂರ್ತಿ ಕಪ್ಪಾಗುತ್ತದೆಯಂತೆ. ಈ ದೇವಾಲಯದಲ್ಲಿ ಸುಂದರವಾದ ಕೆತ್ತನೆ ಕಲೆಗಳಿವೆ. ಶ್ರೀ ಶಂಕರಾ ಚಾರ್ಯರು, ಶ್ರೀರಾಮಾನುಜಾಚಾರ್ಯರು ಈ ದೇವರ ಮಹಿಮೆಯನ್ನು ಹಾಡಿ ಹೊಗಳಿದ್ದಾರೆ.

(ಮುಂದಿನ ಸಂಚಿಕೆಯಲ್ಲಿ)

## ಅಲ್ಪಾವಧಿಯಲ್ಲಿ ಬಹು ಮುಖ್ಯ ಮುಖ್ಯಮಂತ್ರಿಗಳಿಂದ ಆಳಿಸಿಕೊಂಡ ರಾಜ್ಯ

*ಎಂಟು ತಿಂಗಳ ಅವಧಿಯೊಳಗೆ (ನವೆಂಬರ್ 1989ರಿಂದ ಜುಲೈ 18, 1990ರವರೆಗೆ) ಹರಿಯಾನಾ ನಾಲ್ಕು ಮುಖ್ಯಮಂತ್ರಿಗಳನ್ನು ಕಂಡು ಖ್ಯಾತಿಗೊಳಗಾಗಿದೆ.*

*ನವೆಂಬರ್ 1989 – ದೇವಿಲಾಲ್*

*ಡಿಸೆಂಬರ್ 1989 ಓಂ ಪ್ರಕಾಶ್ ಚೌತಾಲಾ (ದೇವಿಲಾಲ್ ಪುತ್ರ)*

*ಮೇ 1990 – ಬನಾರಸಿ ದಾಸ್ ಗುಪ್ತ*

*ಜುಲೈ 1990 – ಹುಕುಂ ಸಿಂಗ್*

# ಮಳೆಗಾಲದ ಒಂದು ದಿನ

– ಜಯಶ್ರೀ ದಿವಾಕರ್

ಟ್ಯಾಕ್ಸಿ ಕತ್ತಲಲ್ಲಿ ವೇಗವಾಗಿ ಓಡುತ್ತಿತ್ತು. ಡ್ರೈವರ್ ಸೀಟಿನಲ್ಲಿ ಕುಳಿತಿದ್ದ ಸೀತಾರಾಮ, ಕತ್ತು ಹೊರಳಿಸಿ, ಹಿಂದಿನ ಸೀಟಿನಲ್ಲಿ ಆಸೀನರಾಗಿದ್ದ ಆಸಾಮಿಗಳತ್ತ ಒಮ್ಮೆ ಕಣ್ಣಾಡಿಸಿ, ಮತ್ತೆ ರಸ್ತೆಯನ್ನೇ ಏಕಾಗ್ರಚಿತ್ತದಿಂದ ನಿಟ್ಟಿಸುತ್ತಾ, ಹೊಂಡತಗ್ಗುಗಳನ್ನು ಮೆಲ್ಲಗೆ ದಾಟ, ಶಿವಮೊಗ್ಗದತ್ತ ಕಾರು ಓಡಿಸುತ್ತಿದ್ದ.

ಹಾಗೆ ನೋಡಿದರೆ, ಅವನ ಪಕ್ಕದ ಮೂರೂ ಸೀಟುಗಳೂ ಖಾಲಿಯಿದ್ದವು. ಮಳೆಗಾಲ, ಮೊದಲೇ ಜಿನುಗುತ್ತಿದ್ದ ಮಳೆ, ಸಂಜೆಯಾಗುತ್ತಿದ್ದಂತೆಯೇ ಧರೋಂತ ಸುರಿಯಲು ಶುರುವಾಗಿತ್ತು. ಈಗ ಒಂದು ವಾರದಿಂದ ಇದೇ ಕತೆ. ಪ್ರಯಾಣಿಕರೇ ಸುಯಾಗಿ ಸಿಗಬಹುದೆಂದು ಕಾದೂ, ಕಾದೂ, ಒಂಭತ್ತಕ್ಕೆ ಬಿಡಬೇಕಾಗಿದ್ದ ಟ್ಯಾಕ್ಸಿ, ತೀರ್ಥಹಳ್ಳಿ ಬಿಟ್ಟಾಗ ಹತ್ತೂವರೆಯ ಮೇಲಾಗಿತ್ತು. ಉಳಿದ ಪ್ರಯಾಣಿಕರೂ ಎಲ್ಲಿ ಹೋಗಿಬಿಡುತ್ತಾರೋ ಎಂದು ಲಗುಬಗನೆ ಇದ್ದವರಷ್ಟರನ್ನೇ ಹತ್ತಿಸಿಕೊಂಡು ಬಂದಿದ್ದ ಅವನಿಗೆ, ತನ್ನ ಪಕ್ಕದ ಸೀಟುಗಳು ಖಾಲಿಯಿದ್ದುದರಿಂದ ಮಾತಿಗೆ, ನೋಟಕ್ಕೆ ಜನವೇ ಇಲ್ಲದಂತಾಗಿ, ಮನಸ್ಸಿಗೆ ಭಣ ಭಣ ಎನ್ನಿಸಿದ್ದಿರಬೇಕು. ಆಗಾಗ ಹಿಂತಿರುಗಿ, ಯಾರನ್ನಾದರೂ ಮಾತಿಗೆ ಎಳೆಯೋಣವೆಂದರೆ, ಇದ್ದ ಮೂರೂ ಜನರೂ ಇಹಲೋಕ ತ್ಯಜಿಸಿ ಸದ್ದಿಲ್ಲದೇ ಮತ್ತಾವುದೋ ಲೋಕಕ್ಕೆ ಪ್ರಯಾಣ ಹೊರಟವರಂತೆ ಕಾಣಿಸುತ್ತಿತ್ತು.

ಟ್ಯಾಕ್ಸಿಯಲ್ಲಿ ಜನರೂ ಸಾಕಷ್ಟು ಇಲ್ಲದ್ದರಿಂದ ಲಡ್–ಲಡ್ ಎಂದು ವಿಚಿತ್ರವಾಗಿ ಹೊಡೆದುಕೊಳ್ಳುತ್ತಾ, ಮಲಗಿದವರಿಗೆ ಸಂಗೀತ ಹೊರಡಿಸಿ, ಜೋಗುಳ ಹಾಡುತ್ತಿತ್ತು.

ಕಾಡು ದಾರಿಯಾದ್ದರಿಂದ ಕಾರಿನ ಶಬ್ದದ ಜೊತೆ ಇದ್ದಕ್ಕಿದ್ದಂತೇ ಕೇಳಿ ಬರುವ ಜೀರುಂಡೆಯದೇ, ಕಾಡುಹಕ್ಕಿಗಳದ್ದೋ ಕೂಗುಗಳು; ಕಾರು ರಭಸದಿಂದ ಮುನ್ನುಗ್ಗುತ್ತಿದ್ದರಿಂದ ಸದ್ದುಗಳು ಒಂದು ಕ್ಷಣ ಕ್ಯೂಂಯೀ ಎಂದು ಕಿವಿಗೆ ತಟ್ಟಿ, ಮತ್ತಲ್ಲೇ ಕ್ಷೀಣಿಸುತ್ತಿದ್ದವು. ರಸ್ತೆಯಲ್ಲಿ ಯಾರಾದರೂ ನಾಲ್ಕು ಜನರು ಒಟ್ಟಿಗೆ ಕಂಡರೆ, ಸೀತಾರಾಮ ತನ್ನ ವೇಗವನ್ನು ಕಮ್ಮಿ ಮಾಡುತ್ತಿದ್ದ. ಯಾರಾದರೂ ಪುಣ್ಯಾತ್ಮರು ಶಿವಮೊಗ್ಗಕ್ಕೆ ತುರ್ತು ಕೆಲಸಕ್ಕಾಗಿ ಹೋಗಬೇಕಾಗಿ ಬಂದು, ಕೈ ಅಡ್ಡ ಹಾಕುವರೇ ಎಂಬ ಆಸೆಯಿಂದಲೇ ಅಕ್ಕಪಕ್ಕದವರನ್ನು ವೀಕ್ಷಿಸುತ್ತಾ ತೀರ್ಥಹಳ್ಳಿಯ ಉಬ್ಬು ಇಳಿದು, ಭಾರತೀಪುರ ದಾಟ, ಆಗಲೇ ಕುಡುಮಲ್ಲಿಗೆ ಹಾದಿಯತ್ತ ಸಾಗುತ್ತಿದ್ದ.

ಹಿಂದಿನ ಸೀಟಿನಲ್ಲಿದ್ದ ಯಾವನೋ ಒಬ್ಬನಿಗೆ ಸಟ್ಟನೇ ನಿದ್ರಾಭಂಗವಾಗಿ ಎದ್ದು, ಸಿಗರೇಟ್ ಹಚ್ಚಿದ್ದು ಸೀತಾರಾಮನ ಗಮನಕ್ಕೆ ಬರುತ್ತಿದ್ದ ಹಾಗೇ, ಅವನು ಖುಷಿಯಿಂದ ಒಮ್ಮೆ ಗಂಟಲು ಸರಿಪಡಿಸಿಕೊಂಡು, ಮೆಲ್ಲಗೆ ಮಾತಿಗೆ ಇಳಿದ.

..."ನಾನು ಸೀತಾರಾಮಾಂತ. ಬಹಳ ವರ್ಷದಿಂದ ಟ್ಯಾಕ್ಸಿ ಓಡಿಸುತ್ತಿದ್ದೀನಿ ಸ್ವಾಮಿ.... ಕಣ್ಣು ಮುಚ್ಚಿದರೂ ಕಾರು ತನ್ನಷ್ಟಕ್ಕೇ ಶಿವಮೊಗ್ಗಕ್ಕೆ ಹೋಗುತ್ತದೆ ಎನ್ನುವಷ್ಟು ಇಲ್ಲಿಯ ಸುದಿಗೊಂದಿಗಳ ಪರಿಚಯವಾಗಿ ಹೋಗಿದೆ... ತಾವು ಶಿವಮೊಗ್ಗದಲ್ಲಿ ಎಲ್ಲಿದ್ದೀರಾ?...."

ಚಳಿಗೆ ಹಿತವಾಗಿ ಹೊಗೆಬಿಡುತ್ತಾ, ತಾನಾಡಿದ ಮಾತಿಗೆ ಉತ್ತರಿಸಲು ಗಂಭೀರವಾಗಿ ಚಿಂತಿಸುತ್ತಿದ್ದಂತೆ ಕಂಡ ಆ ವ್ಯಕ್ತಿಯನ್ನು ನೋಡಿ, ಸೀತಾರಾಮನಿಗೆ ಒಂದು ಕ್ಷಣ ಹೊಟ್ಟೆಕಿಚ್ಚಾಯಿತು. ಅವನ ವೇಷ ಭೂಷಣ ನೋಡಿದರೆ ಅವನೊಬ್ಬ ದೊಡ್ಡ ಆಫೀಸರೇ ಇರಬೇಕು. ಇನ್ನೇನು ಟ್ಯಾಕ್ಸಿ ಹೊರಡಿಸುವುದೇ, ಬೇಡವೇ ಎಂದು ಯೋಚಿಸುತ್ತಾ ನಿಂತಿದ್ದ ಕೊನೇ ಘಳಿಗೆಯಲ್ಲಿ ಅವನು ಬಂದು, "ಶಿವಮೊಗ್ಗ ಒಂದು"– ಎಂದು ದುಡ್ಡು ಹಿಡಿದು ತನ್ನ ಮುಂದೆ ನಿಂತಿದ್ದ. ಅವನ ಕಾಲಿನ ಬೂಟು, ಕೈಯಲ್ಲಿನ ಸೂಟುಕೇಸು, ಕಣ್ಣಿನ ಕನ್ನಡಕ, ಯಾವುದೂ ಅವನು ಈ ಕಡೆಯವನಲ್ಲವೆಂದು ಮೊದಲ ನೋಟಕ್ಕೇ ತಿಳಿಸುವ ಹಾಗಿತ್ತು. ಕಾರು ಹತ್ತಿ ಅವನು ಕುಳಿತ ರೀತಿ ಕೂಡ. ಪ್ರಾಯಶಃ ಅವನ ಓಡಾಟವೆಲ್ಲಾ ಯಾವಾಗಲೂ ಟ್ಯಾಕ್ಸಿಯಲ್ಲೇ ಏನೋ?...

ಸಿಗರೇಟು ಕೈಯಲ್ಲಿ ಹಿಡಿದು, ಅವನು ಸೇದುತ್ತಿರುವ ಈಗಿನ ರೀತಿ ನೋಡಿದರೆ, ಥೇಟ್ ಸಿನಿಮಾಗಳಲ್ಲಿ ಬರುವ ಖಳನಾಯಕನ ಬಾಸ್‌ನಂತೆ ಇದ್ದಾನೆ. ಸೀತಾರಾಮನಿಗೆ ಪಕ್ಕನೇ ತಾನು ಇತ್ತೀಚೆಗೆ ನೋಡಿದ ಹಿಂದೀ ಸಿನಿಮಾ ಒಂದು ನೆನಪಾಗಿ ಪಳಕ್ಕನೇ ನಗು ಬಂತು. ಭೂತದ ಕಥೆ! ಮನುಷ್ಯ ಭೂತದಂತೆ ವೇಷ ತೊಟ್ಟು ಮಾಡಬಾರದ ಕಿತಾಪತಿ ಮಾಡಿ ಗುಟ್ಟು ಬಯಲಾಗಿಸುವ ಕಥೆ.

### ಪ್ರಪ್ರಥಮ ಸಂದೇಹಿತ ಸೇತುವೆ

*ಭಾರತದಲ್ಲಿ ಸೇತುವೆಗಳ ಕುರಿತು ಚೀನೀ ಯಾತ್ರಿಕ ಹುಯೇನ್ ತ್ಸಾಂಗ್ ಬರೆದ ಯಾತ್ರಾ ಕಥನದಲ್ಲಿ ಲಿಖಿತ ಉಲ್ಲೇಖ ಸಿಗುತ್ತದೆ. ಕ್ರಿ.ಶ. 630ರಲ್ಲಿ ಹುಯೇನ್‌ತ್ಸಾಂಗ್ ಭಾರತಕ್ಕೆ ಬಂದಿದ್ದಾಗ ಸಿಂಧೂ ನದಿಯ ಮೇಲೆ ಒಂದು ಸೇತುವೆ ಇದ್ದುದನ್ನು ತಾನು ಕಂಡಿದ್ದಾಗಿ ಆ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಆದರೆ ಆ ಕುರಿತು ಸೂಕ್ತ ಪುರಾವೆಗಳಿಲ್ಲದ (ನಿರಾಕರಿಸಲೂ ಆಗದ) ಕಾರಣ ಅದು ಒಂದು ಸಂದೇಹಿತ ಸೇತುವೆಯಾಗಿ ಉಳಿದಿದೆ.*

..."ನಾನು ಬೆಂಗಳೂರಿನವನು..." ಬಹಳ ಯೋಚಿಸಿಯಾದ ನಂತರ, ಇಲ್ಲಿಯವರೆಗೂ ತಾನು ಯೋಚಿಸಿದ್ದೇನೆಂದು ವಿವರಿಸುವವನಂತೆ ಅತ್ಯಂತ ಗಂಭೀರ ಧ್ವನಿಯಲ್ಲಿ ಅವನು ಮಾತಿಗೆ ಮೊದಲಿಟ್ಟ.

..."ಈಗ ಬೆಂಗಳೂರಿನಲ್ಲಿದ್ದೇನೆ. ಈ ಕಡೆಯೆಲ್ಲಾ ಬಂದಿದ್ದೇ ಇಲ್ಲಾ. ನನ್ನ ಗೆಳೆಯನ ಮದುವೆಯೆಂದು ಇಲ್ಲಿಗೆ ಬಂದೆ. ಮಲೆನಾಡನ್ನೆಲ್ಲಾ ಕಂಡವನೇ ಅಲ್ಲ.... ಏನು ಕಾಡಿದು! ಎಂಥಾ ಕತ್ತಲು! This is nothing but hell!..."

ಯಾವುದೋ ಹೊಂಡವನ್ನು ಜಾಗರೂಕತೆಯಿಂದ ದಾಟಸುತ್ತಿದ್ದ ಸೀತಾರಾಮನ ಮುಖದಲ್ಲಿ ಸಟ್ಟನೇ ನಗು ಅರಳಿಕೊಂಡಿತು. ಥತ್ತೇರೀಕೆ.. ಇವನ್ಯಾವನೋ ನಗರದಲ್ಲೇ ಬೆಳೆದ ಪುಕ್ಕಲು ಮನುಷ್ಯನಿರಬೇಕು. ಮಾತಿನಿಂದಲೇ ತನಗೆಲ್ಲಾ ಹೊಳೆದು ಹೋದಂತೆ, ಧ್ವನಿ ಎತ್ತಿ ಗಹಗಹಿಸಿ ನಕ್ಕು,

.."ಸ್ವಾಮೀ! ಕಾಡೆಲ್ಲಾ ಸರ್ವನಾಶವಾಯಿತು ಎಂದು ಜನ ಬೊಬ್ಬಿಡುವಾಗ ನೀವು ಇಷ್ಟೇ ನೋಡಿ, ಹೆಲ್ ಪಲ್ ಅಂತೀರಲ್ಲಾ...! ಈ ಮೊದಲು ಕಾಡೇ ಕಂಡವರಲ್ಲವಾ?...." ಕೇಳಿದ.

"ಕಾಡೇ...! ನಾನು ಬೆಳೆದದ್ದೆಲ್ಲಾ ಬೊಂಬಾಯಿಯಲ್ಲಿ. ಆಮೇಲೆ ಕೆಲಸದ ನೆಪದಲ್ಲಿ ಬೆಂಗಳೂರಿಗೆ ಬಂದೆ. ಸದ್ಯ ಶಿವಮೊಗ್ಗ ತಲುಪಿ, ಬೆಂಗಳೂರು ಕಂಡರೇ ಸಾಕೆನ್ನಿಸಿದೆ..."

ಕಾರು ಇದ್ದಕ್ಕಿದ್ದಂತೇ ನಿಧಾನವಾಗಿ, ರಸ್ತೆಯ ತಿರುವನ್ನು ತಿರುಗಿಸುವಾಗ ನುಗ್ಗಿ ಬಂದ ಸದ್ದಿನಿಂದ ಚಕಿತನಾದವನಂತೆ, ಮುಖ ಅರಳಿಸಿ, ಭಯಮಿಶ್ರಿತ ಧ್ವನಿಯೆತ್ತಿ... "ಏನು ಹಕ್ಕಿ ಸದ್ದುಗಳು ಅವು...?" ಎಂದು ವಿಚಾರಿಸಿದ.

..."ಓಹ್! ಜೀರುಂಡೆ ಸದ್ದು ಕೇಳಿ ಹೆದರಿಬಿಟ್ಟಿರಾ, ಸ್ವಾಮಿ! ಅದು ಜೀರುಂಡೆಯಂತ.. ಹೀಗೇ ಕೂಗಿ, ಕೂಗಿ ಎದೆ ಬಡಿದುಕೊಂಡು ಸತ್ತು ಬಿಡುತ್ತದಂತೆ... ಇದು ಬರೀ ಕತೆಯೋ, ನಿಜವೋ ಗೊತ್ತಿಲ್ಲ.. ಆದರೆ ಕಾಡು ತುಂಬಾ ಇದ್ದಾಗ, ಅದರ ಕೂಗು, ಮಲೆನಾಡಿನ ಯಾವ ಮೂಲೆಗೇ ಹೋಗಿ, ಬೊಬ್ಬಿಟ್ಟಂಗೇ ಕೇಳುತ್ತಿತ್ತು. ಈಗೆಲ್ಲೋ ಆಗೊಮ್ಮೆ ಈಗೊಮ್ಮೆ ಮಾತ್ರ..."

ಕಾರಾಗಲೇ ಕುಡುಮಲ್ಲಿಗೆ ದಾಟ, ಮಾಳೂರಿನ ಸಮೀಪ ಬರುತ್ತಿತ್ತು. ಸಣ್ಣಗೆ ಮಳೆ ಜಿನುಗುತ್ತಲೇ ಇದ್ದುದರಿಂದ ವೈಪರ್ ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲವಾದ್ದರಿಂದ, ಕಾರಿನ ವೇಗ ತಗ್ಗಿಸಿ, ಡ್ಯಾಷ್‌ಬಾಕ್ಸಿನಿಂದ ಬಟ್ಟೆ ತೆಗೆದು, ಹೊರಗಿನ ಗಾಜನ್ನು ಒರೆಸಿದ.

ಹೊರಗೆ ಅಡ್ಡಡ್ಡವಾಗಿ ಬೀಳುತ್ತಿದ್ದ ಮಳೆಯ

ಹನಿಗಳು ಕಾರಿನ ಮಂದ ದೀಪದ ಬೆಳಕಿನಲ್ಲಿ ಹೊಳೆಯುವ ಮುತ್ತಿನಂತೆ ಪ್ರಕಾಶಿಸುತ್ತಿದ್ದವು. ರಸ್ತೆಯಲ್ಲಿ ಮುಂದಡಿಯಿಡುತ್ತಾ ಚಲಿಸುತ್ತಿದ್ದ ಕಾರಿನ ಬೆಳಕನ್ನು ಬಿಟ್ಟರೆ, ಸುತ್ತಲೂ ಕತ್ತಲು. ತೂದೂರು ಹತ್ತಿರವಾಗುತ್ತಿದ್ದಂತೇ ಬೆಳ್ಳಗಿನ ಜುಬ್ಬ, ಪೈಜಾಮ ಧರಿಸಿದ ವ್ಯಕ್ತಿಯೊಬ್ಬ, ಎದುರಿನ ತಿರುಕಾಸಿನಿಂದ ಅವಸರವಸರವಾಗಿ ಓಡಿ ಬರುತ್ತಾ, "ಟ್ಯಾಕ್ಸೀ ಟ್ಯಾಕ್ಸೀ..." ಎಂದು ಕೈ ಅಡ್ಡ ಹಾಕಿದಂತಾಗಿ, ಸೀತಾರಾಮ ಗಕ್ಕನೇ ಬ್ರೇಕ್ ಹಾಕಿ, ಕಾರು ನಿಲ್ಲಿಸಿದ.

ತೆಳ್ಳಗೆ, ಬಳಕುವ ವ್ಯಕ್ತಿಯೊಬ್ಬ ಕಿಟಕಿಯಲ್ಲಿ ಬಗ್ಗಿ, "ಸ್ವಲ್ಪ ತುರ್ತಾಗಿ ಶಿವಮೊಗ್ಗಕ್ಕೆ ಹೋಗಬೇಕಾಗಿತ್ತು.." ಎಂದವನೇ ಅವನ ಉತ್ತರಕ್ಕೂ ಕಾಯದೇ ದಢ್ಢನೆ ಮುಂದಿನ ಬಾಗಿಲು ತೆರೆದು ಅವನ ಪಕ್ಕ ಕೂತು ಬಿಟ್ಟ.

ಸೀತಾರಾಮ ಒಂದು ಕ್ಷಣ ಗಲಿಬಿಲಿಗೊಂಡರೂ, ಮರುಕ್ಷಣ ಇನ್ನೊಬ್ಬ ಪ್ರಯಾಣಿಕ ಸಿಕ್ಕನೆಂದು ಖುಷಿಯಲ್ಲೇ ಮತ್ತೆ ಕಾರು ಹೊರಡಿಸಿದ.

ಕಾರನ್ನು ಸಟ್ಟನೇ ನಿಲ್ಲಿಸಿದ್ದರೋ ಏನೋ, ನಿದ್ದೆ ಮಾಡುತ್ತಾ ಹಿಂದೆ ಆರಾಮವಾಗಿ ಕುಳಿತಿದ್ದ ಇನ್ನಿಬ್ಬರೂ ಎಚ್ಚರಗೊಂಡು, "ಏನಾಯಿತು?" ಎಂದು ಗಾಬರಿಯಿಂದ ವಿಚಾರಿಸಿದರು. ಸೀತಾರಾಮ ಅದೇ ಮಾಸದ ನಗೆಯನ್ನು ಮತ್ತೊಮ್ಮೆ ಮುಖದ ಮೇಲೆ ಎಳೆದುಕೊಂಡು ..."ಏನಿಲ್ಲ ರಾಯರೇ, ಇವರು ಶಿವಮೊಗ್ಗಕ್ಕೆ ತುರ್ತಾಗಿ ಹೋಗಬೇಕಿತ್ತಂತೆ! ಹತ್ತಿಸಿಕೊಂಡೆ, ಅಷ್ಟೇ.."



ಹೊರಗೆ ಮಳೆ ಜೋರಾಗಿ ಸುರಿಯಲು ಶುರುವಾದ್ದರಿಂದ ಕಾರೊಳಗೆ ನಡುಕ ಹುಟ್ಟುವಷ್ಟು ಚಳಿ. ಸಂಪೂರ್ಣ ಎಚ್ಚರಗೊಂಡ ಹಿಂದಿನ ಸೀಟಿನವಿಬ್ಬರೂ ಸಿಗರೇಟು ಹಚ್ಚಿ, ದಮ್ಮನ್ನು ಉಸ್ಸೆಂದು ಸದ್ದು ಮಾಡುತ್ತಾ ಒಳಗೆಳೆದುಕೊಂಡು, ನಿಧಾನವಾಗಿ ಹೊಗೆಯುಗುಳುತ್ತಿದ್ದರು. ಮುದುಡಿ ಕುಳಿತ ಬೆಂಗಳೂರಿನವನು ಸಿಗರೇಟು ಹಚ್ಚುವುದನ್ನೂ ಮರೆತು, ಕಾರಿನಾಚೆ ಧರಗುಟ್ಟಿ ಸುರಿಯುತ್ತಿರುವ ಮಳೆಯನ್ನೇ ಬೆರಗಿನಿಂದ ನಿಟ್ಟಿಸುತ್ತಿದ್ದ. ತೀರ್ಥಹಳ್ಳಿಯಲ್ಲಿದ್ದ ಮೂರು ದಿನಗಳಲ್ಲಿ ಇಲ್ಲಿನ ಕಾಡಿನ ಬಗ್ಗೆ, ಕಾಡು ಕಿರುಬಗಳು ಊರಿಗೆ ನುಗ್ಗುವ ಬಗ್ಗೆ, ಮನೆಯಂಗಳದಲ್ಲಿ ಹೆಡೆ ಎತ್ತಿ ನಿಲ್ಲುವ ನಾಗರಹಾವಿನ ಬಗ್ಗೆ... ಮದ್ದು ಹಾಕುವ ಜನಗಳು... ಮಾಟ ಮಂತ್ರ ಮಾಡುವವರು... ಇರುಳ ರಸ್ತೆಯಲ್ಲಿ ಏಕಾಂಗಿಯಾಗಿರುವಾಗ ಕಾಣಿಸಿಕೊಳ್ಳುವ ಭೂತಪ್ರೇತಗಳು... ಬ್ರಹ್ಮ ರಾಕ್ಷಸರು... ಸಾಕಷ್ಟು ಕಥೆಗಳನ್ನು ಕೇಳಿ, ತಿಳಿದುಕೊಂಡಿದ್ದನಾದ್ದರಿಂದ ಕಾರಿನ ಬೆಳಕಿನಲ್ಲಿ ಮಳೆಯ ಹನಿಗಳು ಮುತ್ತಿನಂತೆ ಹೊಳೆಯುತ್ತಾ ಕೆಳಗುರುಳುವುದನ್ನೇ ನೋಡುತ್ತಿದ್ದಂತೆ ಪುಂಖಾನುಪುಂಖವಾಗಿ ನೆನಪಿನಲ್ಲುಳಿದ ಇಂಥ ಕಥೆಗಳೆಲ್ಲ ಮನದಲ್ಲಿ ಬಿಚ್ಚಿಕೊಂಡಂತಾಗಿ ಇಡೀ ಮೈ ಬಿಸಿಯೇರಿ ಅಂಥಾ ಚಳಿಯಲ್ಲೂ ಬೆವರುತ್ತಿದ್ದ.

"ರಾಯರೇ..." ಡ್ರೈವರ್ ಕೂಗಿದ ಹೊಡೆತಕ್ಕೆ ಇವನು ತತ್ತರಿಸಿ 'ಆಂ ಹೂಂ' ಎಂದು ತಡವರಿಸಿದ. .."ನೀವು ಬೆಂಗಳೂರಿನವರಲ್ಲವೇ? ಇಂಥಾ ಅವಕಾಶ ನಿಮಗೆ ಸಿಗಲಿಕ್ಕಿಲ್ಲ. ಅಲ್ಲಿ ನೋಡಿ– ನರಿ! ಅದರ ಮುಖ ಕಂಡರೆ ಭಾರೀ ಅದೃಷ್ಟವಂತೆ... ಅಲ್ಲಿ ಪೊದೆಯತ್ತ ನುಸುಳಿ ಹೋಗೇ ಬಿಟ್ಟಿತು! ಕಂಡಿತಾ.., ನೋಡಿದ್ರಾ...."

ಇವನು ದಡಬಡಿಸಿ ಡ್ರೈವರ್ ತೋರಿಸಿದತ್ತ ನೋಡುವಷ್ಟರಲ್ಲೇ ಆ ನರಿ ಎಲ್ಲಿ ಹೋಗಿತ್ತೋ! ಇನ್ನೂ ನಗುತ್ತಲೇ ಇದ್ದ ಸೀತಾರಾಮ ಗಲಿಬಿಲಿಗೊಂಡ ಇವನ ಮುಖ ಹೇಗಿರಬಹುದೆಂದು ಊಹಿಸಿಕೊಳ್ಳುತ್ತಾ, ಇನ್ನಷ್ಟು ತಮಾಷೆ ಮಾಡುವ ಉದ್ದೇಶದಿಂದ, – ..."ಸ್ವಾಮಿ, ನಿಮಗೆ ಭೂತ ತೋರಿಸಲೇ?" ಕೇಳಿದ.

..."ಇದೇ ಇಲ್ಲಿ ಬಲಗಡೆಗೆ ಒಂದು ಅಡ್ಡದಾರಿ ಹೋಗುತ್ತೆ, ನೋಡಿ! ಅಲ್ಲಿ ಒಂದು ಭೂತ ಇದೆ ಎಂದು ಪ್ರತೀತಿ-ಬಹಳಷ್ಟು ಜನ ಕಂಡವರಿದ್ದಾರಂತೆ. ನಾನು ಈ ಭೂತ–ಗೀತ ಎಲ್ಲಾ ನಂಬುವವನಲ್ಲ, ನೋಡಿ. ಎಷ್ಟು ಸರ್ತಿ ಈ ದಾರಿಯಲ್ಲಿ ತಿರುಗಿದ್ದೀನಿ! ಕೆಲವೊಮ್ಮೆ ಹನ್ನೆರಡು ಘಂಟೆ ನಡು ರಾತ್ರಿಯಲ್ಲೇ ಇಲ್ಲಿ ಬಂದದ್ದುಂಟು. ನನ್ನ ಕಾರಿನ ಹಾರನ್ ಕೇಳಿಯೋ ಆ ಭೂತ ಓಡಿ ಹೋಗಿರಬೇಕು. ಮತ್ತೆ ಈ ಭೂತ ಯಾರು ಅಂತೀರಾ...?"

ಅವನು ಮಾತು ನಿಲ್ಲಿಸಿ, ನಗುತ್ತಲೇ ಹಿಂತಿರುಗಿ ನೋಡಿದ. ಬೆಂಗಳೂರಿನವನು ಉಸಿರು ಬಿಗಿಹಿಡಿದು ತನ್ನನ್ನು ನೋಡುತ್ತಿರಬಹುದೆಂದು ತಾನು ಊಹಿಸಿದ್ದು ಸರಿಯೋ, ತಪ್ಪೋ ಆ ಕಗ್ಗತ್ತಲಲ್ಲಿ ಅವನಿಗೆ ಸರಿಯಾಗಿ ತಿಳಿಯಲಿಲ್ಲ. ಒಂದರ ನಂತರ ಒಂದರಂತೆ ಸಿಗರೇಟು ಸೇದುತ್ತಿದ್ದ ಮಧ್ಯದ ಸೀಟಿನಲ್ಲಿ ಕುಳಿತ ಧಡೂತಿ ಆಸಾಮಿ ಲೋಕಾಭಿರಾಮದ ಧ್ವನಿಯಲ್ಲಿ, ... "ಹೋಯಿತು ಸೈ ಸೈ... ಬಿಡಿ ಡ್ರೈವರ್... [illegible] ಇಲ್ಲ; [illegible] ಇಲ್ಲ. ಇಲ್ಲಿ ಭೂತ [illegible]







ಮಗೂ ಆಗಿದ್ದಾಗಿಂದಲೂ ಕೇಳುತ್ತಲೇ ಬಂದೆ... ಕಂಡದ್ದುಂಟಾ? ಸೈ... ಸೈ... ಯಾರ್ರೋ ದಾಯಾದಿಗಳ ಜಗಳದಲ್ಲಿ ವಿಷ ಉಣ್ಣಲಿಕ್ಕೆ ಕೊಟ್ಟು ಕೊಂದ್ರೂ, ಅದರಾತ್ಮ ಇಲ್ಲಿದೆ.. ಅದೀಗ ಭೂತ ಆತೂ.. ಎಲ್ಲಾ ಈ ಶತಮಾನದಲ್ಲಿ ನಂಬುವಂತ ಮಾತಾ?"

ಸೀತಾರಾಮ ಒಮ್ಮೆ ಜೋರಾಗಿ ನಕ್ಕು, ಭುಜ ಕುಣಿಸುತ್ತಾ, "ಭೂತ ಇದೇಂತ ಸಾಬೀತು ಪಡಿಸಿದರೆ ಏನು ಕೊಡುತ್ತೀರಾ ರಾಯರೇ? ಈ ಭೂತ ಭಾರೀ ದೂರದ್ದಲ್ಲ. ನನ್ನ ಸಂಬಂಧವೇ. ನನ್ನಪ್ಪಯ್ಯಂಗೆ ಕಂಡುದಿದೆಯಂತೆ. ನನ್ನ ಅಜ್ಜಂಗೂ ಅವರ ದಾಯಾದಿಗಳಿಗೂ ಏನೋ ಬಗೆಹರಿಯದ ವ್ಯಾಜ್ಯ, ನೋಡಿ ಇದು ಕೊನೆಗೆ ಒಬ್ಬರನ್ನೊಬ್ಬರು ಕೊಲ್ಲುವಷ್ಟು ಮಟ್ಟಿಗೆ ಹೋಯಿತು. ನನ್ನಪ್ಪಯ್ಯನ ತಮ್ಮನೊಬ್ಬ ಇಡೀ ದಾಯಾದಿಗಳ ವಂಶವನ್ನೇ ನಿರ್ವಂಶ ಮಾಡುತ್ತೇನೆ ಎಂದು ಕತ್ತಿ ಹಿಡಿದು ಪರಶುರಾಮನಂತೆ ಹೊರಟನಂತೆ. ಕಡೆಗೆ ಅವನಿಗೆ ಸಿಕ್ಕಿದ್ದು ಹದಿನೆಂಟೋ ಇಪ್ಪತ್ತೋ ವರುಷದ ಒಬ್ಬ ಹುಡುಗ ಮಾತ್ರ. ಅವನನ್ನು ನನ್ನ ಚಿಕ್ಕಪ್ಪನೇ ಕೊಂದನೋ, ಬಿಟ್ಟನೋ ಯಾರಿಗೂ ತಿಳಿಯದು. ಆ ರಾತ್ರಿ ಮನೆ ಬಿಟ್ಟು ಹೋದ ಚಿಕ್ಕಪ್ಪನನ್ನು ಇಷ್ಟು ದಿನವಾದರೂ ಮತ್ಯಾರೂ ನೋಡಲಿಲ್ಲ. ಆದರೆ ಈ ಹುಡುಗ ಮಾತ್ರ ವಿಷ ತಿಂದಲ್ಲ; ತಲೆ ಕಡಿಸಿಕೊಂಡು ಬಿದ್ದಿದ್ದ. ಕಾರಣವಿಲ್ಲದೆ ತನ್ನಂತಹ ಎಳೇ ಹುಡುಗನನ್ನು ಕೊಂದಿದ್ದಕ್ಕೆ ಅದರಾತ್ಮ ರೊಚ್ಚಿಗೆದ್ದು ಇಲ್ಲಿ ತಿರುಗುತ್ತಿದೆ ಅಂತ ಹೇಳುತ್ತಾರೆ, ನೋಡಿ. ಓ ಅಲ್ಲಿ ಕಾಣುತ್ತಲ್ಲ, ಗದ್ದೆಯ ಅಂಚಿನ ಹೊಳೆಯ ಬುಡದಲ್ಲೇ ಆ ಹುಡುಗನ ದೇಹ ಬಿದ್ದಿತ್ತಂತೆ..."

ಬೆಂಗಳೂರಿನವನು ತಲೆ ಎತ್ತಿ, ಡ್ರೈವರ್ ಕೈ ಮಾಡಿದ ಕಡೆ ಕಣ್ಣು ಹಾಯುವಷ್ಟು ದೂರದವರೆಗೂ ದೃಷ್ಟಿ ಹರಿಸಿ ನೋಡಿದ. ಅವನಿಗೆ ಯಾವ ಗದ್ದೆಯಂಚಾಗಲೀ, ಹೊಳೆ ಬುಡವಾಗಲೀ ಕಂಡಂತೆ ಅನ್ನಿಸದೆ, ಅವನ ಎದೆ ಮಾತ್ರ ವಿನಾ ಕಾರಣ ಹೊಡೆದುಕೊಳ್ಳಲು ಶುರುವಾಯಿತು. ಈ ರಾತ್ರಿ, ಈ ಟ್ಯಾಕ್ಸಿಯಲ್ಲಿ ನಾನ್ಯಾಕೆ ಹೊರಟೆ? ಇದೀಗ ಎಷ್ಟೋ ಬಾರಿ ಮನದಲ್ಲಿ ಮೂಡಿದ ಪ್ರಶ್ನೆಯನ್ನೇ ಮತ್ತೊಮ್ಮೆ ಮೂಡಿಸಿಕೊಳ್ಳುತ್ತಾ, 'ದೇವರೇ' ಎಂದು ಒಂದು ಉದ್ಗಾರ ತೆಗೆದ.

ಮಂಡಗದ್ದೆ ದಾಟುತ್ತಿದ್ದಂತೆಯೇ ಕಾ[illegible] ಕೈಕೊಟ್ಟಿತು. ತನ್ನ ದೇಹವನ್ನು ನಗೆಯನ್ನು ಮತ್ತೊಮ್ಮೆ ಚೆಲ್ಲಿ, ಸೀತಾರಾಮ ಜೋರಾಗಿ ಆಕಳಿಸಿ, ಮೈ ಮುರಿದು, ಎರಡೂ ಕೈಯಿಂದ ನಟಿಕೆ ತೆಗೆಯುತ್ತಾ ಸೀಟಿಗೆ ಆರಾಮವಾಗಿ ಒರಗುತ್ತಾ, "ರಾಯರೇ ಈಗೇಂಥ ಮಾಡುವುದು? ಟೈರ್ ಪಂಕ್ಚರ್ ಆತಲ್ಲಾ.." ಎಂದು ಮಳೆಯಲ್ಲಿ ಯಾರು ಕೆಳಗಿಳಿಯುತ್ತಾರೆನ್ನುವಂತೆ ಸ್ಟೀರಿಂಗ್ ವೀಲ್ ಮೇಲೆ ಕೈಯಿಂದ ಟಪಟಪ ಬಡಿಯುತ್ತಾ, ಯಾವುದೋ ಸಿನಿಮಾ ಹಾಡು ಗುನುಗುನಿಸತೊಡಗಿದ. ಪಕ್ಕನೆ, ಏನೋ ನೆನಪಾದವನಂತೆ ಮಗ್ಗುಲಿಗೆ ಹೊರಳಿ, ಪಕ್ಕದಲ್ಲಿದ್ದವನನ್ನು ಕುರಿತು, "ಶಿವಮೊಗ್ಗ ಅರ್ಜೆಂಟಾ?..." ಎಂದು ವಿಚಾರಿಸಿದ.

ಮಗುಟಲ್ಲಿದ್ದ ಆಸಾಮಿ ಕಾರು ನಿಲ್ಲಿಸಿದ್ದಕ್ಕಾಗಲೀ, ಸೀತಾರಾಮನ ಹುಡುಗಾಟದ ಪ್ರವೃತ್ತಿಯಿಂದಾಗಲೀ ಸ್ವಲ್ಪವೂ ವಿಚಲಿತನಾದಂತೆ ಕಂಡು ಬರಲಿಲ್ಲ. [illegible] ಅವನು ನಿದ್ರಿಸುತ್ತಿದ್ದನೋ, ಎಚ್ಚರಗೊಂಡಿರುವನೋ ತಿಳಿಯದಂತೆ ಕಲ್ಲಿನ ಹಾಗೆ ಕುಳಿತಿದ್ದ. ಹಿಂದಿನ ಸೀಟಿನಲ್ಲಿದ್ದ ಮುದುಕರೊಬ್ಬರು, "[illegible] ಆಗಿದ್ದರೆ ಬೇಗ ಬೇರೆ ಬದಲಾಯಿಸುವುದೇನಪ್ಪಾ.. [illegible] ರಭಸ ಕಮ್ಮಿಯಾದ[illegible] [illegible] [illegible] ಕೊಡುತ್ತೇವೆ ಈ ಕಾಡಿನಲ್ಲಿ ನಡುರಾತ್ರಿಯಲ್ಲಿ [illegible]..." ಕೇಳಿದ.

**ವೈರಿ**

ಕೋಪಿ ಖಡ್ಗದಿಂದ
ಸಾಯದ ವೈರಿ
ಅಡಗಿ ಕುಳಿತಿದ್ದಾನೆ
ನಮ್ಮಲ್ಲಿ
ಜಾತಿ–ದ್ವೇಷದ
ವೇಷದಲ್ಲಿ

—ಸುಭದ್ರಾ ಬಡಿಗೇರ
ತೆಗ್ಗಿನ ಪೇಟೆ

..“ಮಳೆ ಬರುತ್ತಾ ಇದೇಯಲ್ಲ ಸ್ವಾಮಿ..?”

“ಓ ಮಲೆನಾಡಿನವರಿಗೆಲ್ಲಾ ಇದೆಂತಾ ಮಳೆಯಾ? ಜಿನುಗು... ಬರೀ ಜಡಿಮಳೆ. ಇಳಿ.. ಟೈರ್ ತೆಗಿ ನೋಡ್ತೋಣ...”

ಸೀತಾರಾಮ ಮನಸ್ಸಿಲ್ಲದಿದ್ದರೂ ವಿಧಿಯಿಲ್ಲದವರಂತ ಮೆಲ್ಲಗೆ ಕಾರಿನ ಬಾಗಿಲು ತೆಗೆದು ಹೊರ ಧುಮುಕಿದ. ಕಾರಿನ ಡಿಕ್ಕಿ ತೆಗೆದು ಟೈರ್ ಉರುಳಿಸಿ, ..“ಕಾರಿನಲ್ಲಿದ್ದವರೆಲ್ಲಾ ಸ್ವಲ್ಪ ಇಳೀರಿ, ನೋಡೋಣ...” ಎಂದ

ಟೈರ್ ಬದಲಾಯಿಸಿಕೊಂಡು, ಕಾರು ಮತ್ತೆ ಹೊರಡುವ ಹೊತ್ತಿಗೆ ಮಳೆ ಸಂಪೂರ್ಣ ನಿಂತೇ ಹೋಗಿತ್ತು. ಕಾರು ಹೊರಡಿಸಿ, ಹಿಂದಿನ ಸೀಟಿನವರತ್ತ ಕಣ್ಣು ಹಾಯಿಸಿ ಸೀತಾರಾಮ ಧ್ವನಿ ಎತ್ತರಿಸಿ, “ಎಲ್ಲರೂ ಕೂತಿದ್ದೀರಿ ತಾನೆ? ಕಡೀಗ್ ಅರ್ಧ ದಾರೀಲಿ ಕಾಡಲ್ಲಿ ಬಿಟ್ಟು ಹೋದೆನೆಂದಾಗ ಬಾರದಲ್ಲ...” ಎಂದು ಒಬ್ಬೊಬ್ಬರ ಮುಖ ನೋಡಿ, ಇನ್ನೇನು ಹೊರಡಬೇಕು ಅನ್ನುವಷ್ಟರಲ್ಲಿ ತನ್ನ ಮಗ್ಗುಲಲ್ಲಿ ಕುಳಿತಿದ್ದ ಆಸಾಮಿ ಟೈರ್ ಬದಲಾಯಿಸುವಾಗ ಕೂಡ ಕಾರಿನಿಂದ ಇಳಿದೇ ಇರಲಿಲ್ಲವೆನ್ನುವುದು ಸಟ್ಟನೇ ಗಮನಕ್ಕೆ ಬಂದು ದಂಗಾಗಿ, ಕತ್ತಲಲ್ಲಿ ವಿಚಿತ್ರವಾಗಿ ಕಂಡ ಆ ಮುಖವನ್ನು ಕ್ಷಣಕಾಲ ವೀಕ್ಷಿಸಿ, ಯಾರ್‍ಯಾರು ಹೇಗೇಗೋ ಎನ್ನುವಂತೆ ತಲೆ ಕೊಡವಿಕೊಂಡು ನಿಧಾನವಾಗಿ ಕಾರು ಬಿಡಲು ಶುರು ಮಾಡಿದ.

ಸಕ್ಕರೆ ಬಯಲು ಕಾಡಿಗೆ ನುಗ್ಗುತ್ತಿದ್ದಂತೇ ನಿಂತ ಮಳೆ ರಭಸದಿಂದ ಹೊಡೆಯಲು ಶುರುವಾಯಿತು. ಸೀತಾರಾಮ ಕಾರನ್ನು ರಸ್ತೆಯ ಬದಿಗೆ ತಂದು, “ಇಂಥಾ ಮಳೇಲಿ ಕಾರು ಬಿಡೋದು ಕಷ್ಟ ಸ್ವಾಮಿ. ರಭಸ ಕಮ್ಮಿಯಾದ ಮೇಲೆ ಹೊರಡೋಣವೇ?” ಎಂದು ಹಿಂತಿರುಗಿ ಅನುಮತಿಗಾಗಿ ಕಾಯುವವನಂತೆ ವಿಚಾರಿಸಿದ.

ಮುದುಕನ ಪಕ್ಕ ಕುಳಿತ ವ್ಯಕ್ತಿ, ಮಳೆಯ ಇರುಚಲು ಸೀದಾ ಮುಖಕ್ಕೆ ರಾಚುತ್ತಿದ್ದುದರಿಂದ ಮುಕ್ಕಾಲು ಮುಚ್ಚಿದ್ದ ಕಾರಿನ ಗಾಜನ್ನು ಮೇಲೇರಿಸಲು ಶತ ಪ್ರಯತ್ನ ನಡೆಸುತ್ತಿದ್ದವನು, ಕಾರು ನಿಂತಿದ್ದೇ ಗಾಬರಿಯಿಂದ, ...“ಹೋಯಿ ಡ್ರೈವರ್ರೇ.. ಇಲ್ಲೆಲ್ಲಾ ಮಾತ್ರ ಕಾರು ನಿಲ್ಲಿಸಬೇಡಿ! ಇಲ್ಲಿ ಕಾಡಾನೆಗಳ ಹಾವಳಿ ವಿಪರೀತ! ಇಂತಹ ಸುರಿ ರಾತ್ರಿಯಲ್ಲೂ ಎಂಥಾ ಕಂಡಾಪಟ್ಟೆ ಹುಡುಗಾಟವಯ್ಯಾ ನಿಂದು! ಹೊರಡು ಮತ್ತೆ!” ಎಂದು ಸಿಟ್ಟಿನಿಂದಲೇ ವದರಿದನು.

..“ಹೋಯಿ ಇವತ್ತಿನ ಪ್ರಯಾಣ ಯೆಂತದೂ ಗಮ್ಮತ್ತಿಲ್ಲ.. ಬಿಡಿ! ಕಾಡಾನೆಯಾ, ಮತ್ತೆಂತಾ! ಎಲ್ಲಾ ಹೆದರುಪುಕ್ಕಲುಗಳೇ! ಹಳ್ಳಿಯಲ್ಲಿ ಹುಟ್ಟಲು ನಾಲಾಯಕ್ಕು ಬಿಡಿ..” ಎಂದವನೇ ಸೀತಾರಾಮ ತಲೆ ತಿರುಗಿಸಿ ನೋಡಿ, ಹಿಂದಿನ ಸೀಟಿನವರ ಮುಖದಲ್ಲಿ ಒಂದು ಸಣ್ಣ ನಗೆಯೂ ಸುಳಿಯದ್ದು ಕಂಡು, ತಾನು ಇಷ್ಟು ಚಂದ ಮಾತಾಡಿದರೂ ಒಬ್ಬ ಕೂಡ ನಗದಿದ್ದುದರಿಂದ ಸ್ವಲ್ಪ ಪೆಚ್ಚಾದರೂ ತೋರಗೊಡದೇ, ಬಿದ್ದರೂ ಮೀಸೆ ಮಣ್ಣಾಗಲಿಲ್ಲವೆನ್ನುವಂತೆ ತಾನೇ ಜೋರಾಗಿ ನಗುತ್ತ, ಅವರೆಲ್ಲರ ಅನುಮತಿಯೋ ತನ್ನ ನಿರ್ಧಾರವೆನ್ನುವಂತೆ ಮೆಲ್ಲನೆ ತಲೆಯಾಡಿಸಿ, “ಸರಿ ಸ್ವಾಮಿ..” ಎಂದು ಮತ್ತೇನನ್ನೋ ಗೊಣಗುತ್ತಲೇ ಕಾರು ಹೊರಡಿಸಿದ.

ಕಾಡು ಮುಗಿಯುವವರೆಗೂ ಮತ್ತೆ ಯಾರೂ ಮಾತನಾಡಲಿಲ್ಲ. ಸೀತಾರಾಮನೇನೋ ಒಮ್ಮೆ ಇದೇ ಕಾಡಿನಲ್ಲಿ ರಾತ್ರಿ ತಾನೊಬ್ಬನೇ ಹಿಂತಿರುಗಿ ಬರುವಾಗ, ಕಾಡಾನೆ– ಒಂಟಿ ಸಲಗವೊಂದು ತನ್ನನ್ನು ಅಡ್ಡಗಟ್ಟಿದ್ದು, ತಾನು ಸಿನಿಮಾ ಹೀರೋನಂತೆ ತಪ್ಪಿಸಿಕೊಂಡಿದ್ದು.. ಇಂಥಾ ಅನೇಕಾನೇಕ ಕಥೆಗಳನ್ನು ಮನಸ್ಸಿನಲ್ಲಿ ಪೋಣಿಸುತ್ತಾ ಹೇಳಬೇಕೆಂದುಕೊಂಡರೂ, ಮಳೆಯ ವಿಪರೀತ ರಭಸದಿಂದ ರಸ್ತೆಗೇ ದೃಷ್ಟಿ ನೆಟ್ಟು ಮಾತಾಡದೇ ಸುಮ್ಮನೇ ಮನದಲ್ಲೇ ಮಂಡಿಗೆ ತಿನ್ನುತ್ತಾ, ಜಾಗ್ರತೆಯಿಂದ ಕಾರು ಬಿಡುವುದರಲ್ಲೇ ಮುಳುಗಿ ಹೋದ.

ಕಾಡು ಮುಗಿದು, ಗಾಜನೂರು ಹತ್ತಿರವಾಗುತ್ತಿದ್ದಂತೇ, ವಾತಾವರಣ ತಿಳಿಯಾಗಿ, ಮಳೆಯ ಮಬ್ಬು ಕರಗಿ, ಬೆಳಕು ರಸ್ತೆಗೂ ಬಿದ್ದಿದ್ದುದರಿಂದ ಕಾರು ಸಾವಕಾಶವಾಗಿ ಚಲಿಸುತ್ತಿತ್ತು. ಎಲ್ಲೋ ತೇಲಿ ಬರುವ ನಸುಕಿನಲ್ಲೇ ಎದ್ದ ಹಕ್ಕಿಗಳ ಚಿಲಿಪಿಲಿ.. ರಸ್ತೆಯಂಚಿನಲ್ಲಿದ್ದ ಅಲ್ಲೊಂದು ಇಲ್ಲೊಂದು ಮರಗಳು ದೂರಕ್ಕೆ ಸಣ್ಣ ಕುರುಚಲಿನಂತೆ ಕಾಣುತ್ತಿದ್ದು, ಕಾರು ಸಮೀಪಿಸಿದ್ದೇ ಮುಗಿಲೆತ್ತರ ಬೆಳೆದುನಿಂತ ಭೂತದಂತೆ ಗೋಚರಿಸುತ್ತಿದ್ದವು.

ಮಗ್ಗುಲಲ್ಲಿದ್ದ ಆಸಾಮಿ ಏನೋ ಕಿರಿಚಿಕೊಂಡಂತಾಗಿ ಸೀತಾರಾಮ ಕಾರಿಗೆ ಫಕ್ಕನೇ ಬ್ರೇಕ್ ಹಾಕಿ ನಿಲ್ಲಿಸಿದ. “ನಾನಿಲ್ಲೇ ಇಳಿಯಬೇಕು” ಎನ್ನುತ್ತಲು ವ್ಯಕ್ತಿ ತೊಡೆಯ ಮೇಲಿದ್ದ ತನ್ನ ಸಣ್ಣ ಕೈಚೀಲ ಹಿಡಿದುಕೊಂಡು ಕಾರು ನಿಲ್ಲುತ್ತಿದ್ದಂತೇ, ಇಳಿಯಲು ಸನ್ನದ್ಧನಾದ.

“ಹೋಯಿ ಸ್ವಾಮಿ ನನ್ನ ದುಡ್ಡು..” ಸೀತಾರಾಮ ಯಾವ ಅವಸರವೂ ಇಲ್ಲದವನಂತೆ ದೇಶಾವರಿ ನಗೆ ನಗುತ್ತಲೇ ಸಾವಕಾಶವಾಗಿ ವಿಚಾರಿಸಿದರೂ, ಅವನ ಕೈ ಮಾತ್ರ ಮಿದುಳಿನ ಸೂಕ್ಷ್ಮ ಸಂದೇಶವನ್ನು ಗ್ರಹಿಸಿತೆನ್ನುವಂತೆ ಇಳಿಯುತ್ತಿದ್ದವನ ಕೈಯನ್ನು ಅವಸರದಲ್ಲೇ ಹಿಡಿದುಕೊಂಡಿತು. ಒಂದು ಕ್ಷಣ ಅಷ್ಟೇ! ಹಿಡಿದಷ್ಟೇ ಅವಸರದಲ್ಲಿ ಕೈ ಸರಕ್ಕನೆ ಹಿಂದಕ್ಕೆಳೆದುಕೊಂಡು ಬಾಗಿಲಾಚೆಗಿನ ವ್ಯಕ್ತಿಯನ್ನೇ ದಂಗಾಗಿ ದಿಟ್ಟಿಸಿದ.

..“ಸೀತಾರಾಮ ನನ್ನ ಗುರುತು ಹತ್ತಿತೇ?..”

ಯಾವುದೋ ಹಾಡಿನಂತೆ, ಕಾಡಿನಿಂದ ತೇಲಿ ಬಂದ ಸದ್ದಿನಂತೆ ಅಥವಾ ಎಲ್ಲಿನದೋ ಅಶರೀರವಾಣಿಯಂತೆ ಮೊಳಗಿದ ಆ ಸದ್ದಿನಿಂದ ಅವನ ಇಡೀ ಮೈ ಬೆವರಿ, ಕಾರಿನ, ಸೀಟಿಗೆ ಭದ್ರವಾಗಿ ಒರಗಿಕೊಂಡ.

ಹಿಂದಿನ ಸೀಟಿನ ಬೆಂಗಳೂರಿನವನಿಗೆ, ದೂರದ ಗದ್ದೆಯಂಚಿನಲ್ಲಿ ಖಾಲಿ ಜುಬ್ಬ, ಪಾಯಿಜಾಮ ಬಲೂನಿನಂತೆ ಊದುತ್ತಾ, ಗಾಳಿಗೆ ಮೇಲೆ, ಮೇಲೆ ಹಾರಿಹೋಗುತ್ತಿದ್ದಂತೆ ಭಾಸವಾಯಿತು.

## ಅಪೂರ್ವ ಪವಾಡ

ತಮಿಳುನಾಡಿನಲ್ಲಿ ಎಂ.ಜಿ.ಆರ್. ಅವರಿಗಿರುವ ಜನಪ್ರಿಯತೆಯನ್ನು ಹೊಸದಾಗಿ ಹೇಳಬೇಕಾಗಿಲ್ಲ. ಚಿತ್ರರಂಗದಲ್ಲಿ ಹೀರೋ ಆಗಿ ಅಭಿನಯಿಸಿ, ರಾಜಕೀಯಕ್ಕೆ ಇಳಿದು ಅಲ್ಲೂ ಹೀರೋ ಆಗಿ ಹತ್ತು ವರ್ಷಗಳ ಕಾಲ ಮುಖ್ಯಮಂತ್ರಿಯಾಗಿ ಮೆರೆದು, ಮುಖ್ಯಮಂತ್ರಿಯಾಗೇ ತೀರಿಕೊಂಡಿದ್ದು ಸರ್ವವಿದಿತ. ಈಗ ಅವಸಾನಾನಂತರ ಎಂ.ಜಿ.ಆರ್. ದೇವರಾಗಿದ್ದಾರೆ. ರೈಲ್ವೆ ಬೋಗಿಗಳನ್ನು ತಯಾರಿಸುವ ಕಾರ್ಖಾನೆಯಿರುವ ಪೆರಂಬೂರಿನಲ್ಲಿ (ಮದರಾಸು) ಅವರಿಗೆ ಒಂದು ದೇವಾಲಯವನ್ನು ನಿರ್ಮಿಸಲಾಗಿದೆ. 1990ರ ಫೆಬ್ರವರಿ 5ರಂದು ಆ ದೇವಾಲಯ ಉದ್ಘಾಟನೆಗೊಂಡಿತು. ಪಂಚೆ, ಶರ್ಟು, ಕಪ್ಪು ಕನ್ನಡಕ ಹಾಗೂ ಟೋಪಿಗೆಗಳಲ್ಲಿ ತೋರುತ್ತಿರುವ ಶೈಲೀಕೃತ ಎಂ.ಜಿ.ಆರ್. ಮೂರ್ತಿಗೆ ಆತನ ಭಕ್ತರು ನಿತ್ಯಪೂಜೆಗಳನ್ನು ನೆರವೇರಿಸುತ್ತಿದ್ದಾರೆ. ವಿಶೇಷ ದಿನಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ. ಕಾಲಕ್ರಮೇಣ ಇದು ಎಂ.ಜಿ.ಆರ್. ಅಭಿಮಾನಿಗಳ ಪುಣ್ಯ ಕ್ಷೇತ್ರವಾದರೂ ಆಶ್ಚರ್ಯವಿಲ್ಲ. ಪರಮ ನಾಸ್ತಿಕರೂ, ದ್ರಾವಿಡ ಕಳಗಂನ ಸ್ಥಾಪಕರೂ ಆದ ಪೆರಿಯಾರ್ ಅನುಯಾಯಿಯಾಗಿ, (ಎಂಜಿಆರ್) ಅದರಿಂದ ಬೇರ್ಪಟ್ಟು ಡಿ.ಎಂ.ಕೆ. ಸ್ಥಾಪಿಸಿ, ದ್ರಾವಿಡರಿಗೆ ಪೆರಿಯಾರ್ ಒಬ್ಬರೇ ನಾಯಕನೆಂದು ವರ್ಣಿಸುತ್ತಾ



‘ಒಂದೇ ಕುಲ, ಒಂದೇ ದೈವ’ ಎಂದು ತಿದ್ದುಪಡಿಯೊಂದಿಗೆ ದೇವರ ಅಸ್ತಿತ್ವವನ್ನು ಒಪ್ಪಿಕೊಂಡು, ಮುಖ್ಯಮಂತ್ರಿಯಾದ ಅಣ್ಣಾದುರೈ ಅವರ ಪ್ರೀತಿಯ ತಮ್ಮನಾಗಿ, 1972ರಲ್ಲಿ ಡಿ.ಎಂ.ಕೆ.ಯಿಂದ ಹೊರಬಂದು ಎ.ಐ.ಡಿ.ಎಂ.ಕೆ. ಸ್ಥಾಪಿಸಿ, ದೈವದ ಅಸ್ತಿತ್ವವನ್ನು ಪೂರ್ತಿಯಾಗಿ ಒಪ್ಪಿ, 1984ರ ನಂತರವಂತೂ ಕೊಲ್ಲೂರು ಮೂಕಾಂಬಿಕೆ ಪರಮಭಕ್ತರಾದ ಎಂ.ಜಿ.ಆರ್. ಮರಣಾನಂತರ ಈಗ ದೇವರೇ ಆಗಿದ್ದಾರೆ.

## ಪ್ರಪ್ರಥಮ ರಾಷ್ಟ್ರೀಯ ಧ್ವಜಾರೋಹಣ

ಆರಂಭದ ನಮ್ಮ ಧ್ವಜ ಹಸಿರು, ಹಳದಿ ಹಾಗೂ ಕೆಂಪು ಹೀಗೆ ತ್ರಿವರ್ಣವಾಗಿದ್ದು ಅದರಲ್ಲಿ ಭಾರತದ ಏಳು ಪ್ರಾಂತಗಳ ಸಂಕೇತವಾಗಿ ಏಳು ಕಮಲಗಳನ್ನು ಹೊಂದಿದ್ದಿತು. 1906ರ ಆಗಸ್ಟ್ 7ರಂದು ಸುರೇಂದ್ರನಾಥ ಬ್ಯಾನರ್ಜಿಯವರು ಕಲಕತ್ತಾದ ಗ್ರೀಯರ್ ಪಾರ್ಕ್‌ನಲ್ಲಿ ಈ ಬಾವುಟವನ್ನು ಹಾರಿಸಿದರು. ಇದನ್ನು ಹಾರಿಸುವಾಗ 101 ಕುಶಾಲು ತೋಪುಗಳನ್ನು ಹಾರಿಸಿ ಧ್ವಜವಂದನೆ ಮಾಡಲಾಯಿತು. ಮೊದಲ ಪಟ್ಟಿಯಲ್ಲಿ ಕಮಲಗಳಿದ್ದವು. ಪ್ರತಿಯೊಂದು ಅರ್ಧ ಇಂಚು ಅಗಲತೆಯದು. ಎರಡನೆಯ ಪಟ್ಟಿಯಲ್ಲಿ ದೇವನಾಗರಿಯಲ್ಲಿ ‘ವಂದೇ ಮಾತರಂ’ ಎಂದು ಬರೆಯಲಾಗಿತ್ತು. ಮೂರನೆಯ ಪಟ್ಟಿಯಲ್ಲಿ ಸೂರ್ಯ ಹಾಗೂ ವೃದ್ಧಿ ಚಂದ್ರನನ್ನು ಗುರುತಿಸಲಾಗಿತ್ತು.



# "ಅಡಿಗೆ ಮನೆಯಲ್ಲಿ ನನ್ನ ಯಜಮಾನರು"

## 'ಪತಿರಾಯರ ನಳಪಾಕ'

ಅಪರೂಪಕ್ಕೆ ಅನಿವಾರ್ಯ ಕಾರಣಗಳಿಂದಾಗಿ ನನ್ನ ಯಜಮಾನರು ಅಡುಗೆ ಮಾಡಲೇ ಬೇಕಾದ ಪ್ರಸಂಗ ಬಂದಾಗ, ಅಡುಗೆ ಮನೆ ಹೊಕ್ಕು ಅವರು ಪಡುವ ಪಾಡನ್ನು ನೆನೆಸಿಕೊಂಡರೆ ನನಗೆ ಈಗಲೂ ನಗು ಉಕ್ಕಿ ಬರುತ್ತದೆ.

ಒಮ್ಮೆ ಜ್ವರ ಬಂದು ಒಂದೆರಡು ದಿನ ಮಲಗಿಬಿಟ್ಟೆ. ಇವರು ನನಗೆ ಎರಡು ದಿನ ಗಂಜಿ ಕಾಯಿಸಿ ಕೊಟ್ಟು ತಾವು ಮಾತ್ರ ಹೋಟೇಲಿನಲ್ಲಿ ಊಟ ಮಾಡಿದರು. ಹೋಟೆಲ್ ಊಟ ಹೊಟ್ಟೆಗೆ ಆಗಲಿಲ್ಲ ಅಂತ ಕಾಣುತ್ತೆ, ಭೇದಿ ಶುರುವಾಯ್ತು. ಆಸ್ಪತ್ರೆಗೆ ಹೋದಾಗ ಹೋಟೆಲ್ ಊಟ ತಿನ್ನಬಾರದೆಂದು ಡಾಕ್ಟರು ಅವರಿಗೆ ಸ್ಟ್ರಿಕ್ಟಾಗಿ ಹೇಳಿ ಕಳಿಸಿದ್ದರು. ಆಸ್ಪತ್ರೆಯಿಂದ ಮನೆಗೆ ಬಂದವರೇ, ''ಡಾಕ್ಟರು ಹೊರಗಡೆ ಏನೂ ತಿನ್ನಬೇಡಿ ಅಂತ ಹೇಳಿದ್ದಾರೆ. ಮನೆಯಲ್ಲಿ ಮಾಡಿದ ಊಟವನ್ನೇ ತಿನ್ನಬೇಕಂತೆ. ನನಗಂತೂ ಸರಿಯಾಗಿ ಅಡಿಗೆ ಮಾಡೋಕೆ ಬರಲ್ಲ. ಪಾಪ! ನಿಂಗೂ ಹುಷಾರಿಲ್ಲ. ಏನು ಮಾಡ್ಲಿ ಈಗ?'' ಎಂದರು.

''ದಿನಾ ನಾನು ಏನೇ ಮಾಡ್ಲಿ, 'ಸಾರು ಚೆನ್ನಾಗಿಲ್ಲ, ಪಲ್ಯ ಚೆನ್ನಾಗಿಲ್ಲ' ಅಂತ ನನ್ನ ಜೀವ ತಿಂತಿದ್ರಿ. ಅಡುಗೆ ಮಾಡುವುದಕ್ಕೆ ಬರದಿದ್ರೂ ಮಾಡಿದ ಅಡುಗೆಯನ್ನು ಜರಿದುಕೊಂಡು ತಿನ್ನೋಕ್ಕೇ ಸರಿ ನೀವು. ಅಡುಗೆ ಮಾಡೋದು ಎಷ್ಟು ಕಷ್ಟಾಂತ ಈಗಾದ್ರು ಗೊತ್ತಾಯ್ತೆ?''

''ಹೂಂ. ಏನು ನಿಮ್ಮಾಗಿಲ್ಲದ ಅಡುಗೆ ಮಾಡೋಳು ಇವಳೇ. ನಾನು ಕಾಣದ ಅಡಿಗೆ ಏನ್ ಮಾಡ್ತೀಯೆ ನೀನು! ನೀನು ಹಾಗೇ ಮಲಗಿರು. ಇನ್ನೊಂದು ಗಂಟೆಗೆಲ್ಲ ಫಸ್ಟ್ ಕ್ಲಾಸ್ ಅಡುಗೆ ತಯಾರು ಮಾಡ್ತೀನಿ ನೋಡ್ತಿರು'' ಎಂದು ನನಗೆ ಸವಾಲೆಸೆದು ಅಡಿಗೆ ಮನೆಗೆ ನುಗ್ಗೇಬಿಟ್ಟರು ನನ್ನ ಯಜಮಾನರು!

ಗ್ಯಾಸ್ ಖಾಲಿಯಾಗಿತ್ತು! ಕರೆಂಟ್ ಕೈಕೊಟ್ಟಿತ್ತು! ಮೂಲೆಗೆ ಎಸೆದಿದ್ದ, ಧೂಳು ಹಿಡಿದ ಸೀಮೆ ಎಣ್ಣೆ ಸ್ಟೌವನ್ನು ಹಿರಿಸಿ ಅದಕ್ಕೆ ಎಣ್ಣೆ ಹಾಕಿ, ಅದನ್ನು ಹತ್ತಿಸಲು ಶತ ಪ್ರಯತ್ನ ಮಾಡುತ್ತಿದ್ದರು. ಬಹಳ ದಿನ ಉಪಯೋಗಿಸದೆ ಇಟ್ಟಿದ್ದರಿಂದ ಬತ್ತಿಯನ್ನು ಏರಿಸಲೂ ಇಳಿಸಲೂ ಆಗದೆ, ಸ್ಟೌವ್ ಹತ್ತಿಸಲು ಒಂದು ಬೆಂಕಿ ಪೊಟ್ಟಣದ ಕಡ್ಡಿಯನ್ನು ಉರಿಸಿ ಎಸೆದರು.

ಹಾಲ್‌ನಲ್ಲಿ ಹಾಕಿದ್ದ ಮಂಚದ ಮೇಲೆ ಮಲಗಿದ್ದ ನನಗೆ ಅವರು ಅಡುಗೆ ಮನೆಯಲ್ಲಿ ಮಾಡುತ್ತಿದ್ದ ಸರ್ಕಸ್ ಕಾಣಿಸುತ್ತಿತ್ತು. ನಾನು ಮಲಗಿಕೊಂಡು ಅವರು ಅಡುಗೆ ಮಾಡುವುದನ್ನು ನೋಡುತ್ತಿದ್ದರೆ ಅವರಿಗೆ ಮುಜುಗರವಾಗಬಹುದೇನೋ ಎಂದುಕೊಂಡು ಹಣೆಯ ಕೆಳಗೆ ಮೊಳಕೈ ಅಡ್ಡ ಇಟ್ಟು, ನಿದ್ದೆ ಮಾಡುತ್ತಿರುವವಳಂತೆ ನಟಿಸುತ್ತಾ ಮೊಳಕೈ ಸಂದಿಯಲ್ಲೇ ಅವರು ಮಾಡುವುದನ್ನೇ ನೋಡುತ್ತಿದ್ದೆ.

ಸ್ಟೌವ್ ಹತ್ತಿಸುವುದಕ್ಕೇ ಅವರಿಗೆ ಅರ್ಧ ಗಂಟೆ ಹಿಡಿಯಿತು. ಆದರ ಮೇಲೆ ಅಕ್ಕಿ ತೊಳೆದಿಟ್ಟು, ಸಾರು ಮಾಡಲು ಸಾಮಾನಿಗಾಗಿ ಅಡುಗೆ ಮನೆಯೆಲ್ಲ ಹುಡುಕುತ್ತಿದ್ದರು. ಯಾವುದೂ ಕೈಗೆ ಸರಿಯಾಗಿ ಸಿಗದೆ, ಮುಖವನ್ನು ಗಂಟಿಕ್ಕಿಕೊಂಡು ತಮ್ಮ ಸಿಟ್ಟನ್ನೆಲ್ಲಾ ಡಬ್ಬಿಗಳನ್ನು ಎತ್ತಿಎತ್ತಿ ಕುಕ್ಕುವುದರ ಮೇಲೆ ತೀರಿಸಿಕೊಳ್ಳುತ್ತಿದ್ದರು. ಅಂತೂ ಇಂತೂ ಖಾರ ರುಬ್ಬಲು ಮೆಣಸಿನಕಾಯಿ ಪುಡಿ, ಸಂಬಾರ, ತೆಂಗಿನಕಾಯಿ ಬೆಲ್ಲವನ್ನು ಜೋಡಿಸಿಕೊಂಡು ರುಬ್ಬುವ ಕಲ್ಲಿನ ಮುಂದೆ ಕುಳಿತರು. ಮೊದಲೇ ಎತ್ತರದ ಆಳು ಅವರು. ರುಬ್ಬುವ ಕಲ್ಲಿನ ಮುಂದೆ ಕುಕ್ಕರುಗಾಲಿನಲ್ಲಿ ಕುಳಿತು, ತಲೆ ತಗ್ಗಿಸಿಕೊಂಡು ನಿಧಾನವಾಗಿ 'ಧಡಕ್ಕೂ.. ಧಡ್‌ಕೂ..' ಅಂತ ರುಬ್ಬುವುದನ್ನು ನೋಡಿ ನನಗೆ ನಗು ತಡೆಯಲಾಗದೆ ಮುಖದ ತುಂಬ ರಗ್ಗನ್ನು ಹೊದೆದುಕೊಂಡು ರಗ್ಗಿನೊಳಗೆ ಮುಸು ಮುಸು ನಗತೊಡಗಿದೆ. ಸ್ವಲ್ಪ ಹೊತ್ತು ನಕ್ಕು ಮುಸುಕು ತೆಗೆದು ರುಬ್ಬುತ್ತಿದ್ದ ಅವರನ್ನೇ ಮತ್ತೆ ನೋಡತೊಡಗಿದೆ. ಮೊದ ಮೊದಲು ನಿಧಾನವಾಗಿ ರುಬ್ಬುತ್ತಿದ್ದವರು ಬರ್‍ತಾ ಬರ್‍ತಾ ಜೋರಾಗಿ ರುಬ್ಬುವುದಕ್ಕೆ ಪ್ರಾರಂಭಿಸಿದರು. ಖಾರಕ್ಕೆ ನೀರು ಜಾಸ್ತಿಯಾಗಿತ್ತು ಅಂತ ಕಾಣುತ್ತೆ. ಅವರು ರುಬ್ಬುವ ರಭಸಕ್ಕೆ ಒಮ್ಮೆ ಖಾರ ಛಟ್ಟನೆ ಅವರ ಕಣ್ಣಿಗೆ ಸಿಡಿದು ಒದ್ದಾಡತೊಡಗಿದರು. ಕಣ್ಣು ಮುಚ್ಚಿಕೊಂಡೇ ನೀರಿಗಾಗಿ ಪರದಾಡಿ, ಕಣ್ಣು ತೊಳೆದುಕೊಂಡು, ಕಣ್ಣಿನ ಉರಿ ಕಡಿಮೆಯಾಗುವವರೆಗೆ ಸುಮ್ಮನಿದ್ದು ಮತ್ತೆ ರುಬ್ಬತೊಡಗಿದರು. ಅಡುಗೆ ಮನೆ ಸೇರಿಕೊಂಡು ಅವರು ಪಡುತ್ತಿದ್ದ ಅವಸ್ಥೆಯನ್ನು ಕಂಡು ಕನಿಕರ ಹುಟ್ಟಿದರೂ, 'ಇವತ್ತೊಂದು ದಿನ ತಾನೆ? ಅವರೇ ಮಾಡಲಿ. ಅವರ ಕೈಯ್ಯ ಅಡುಗೆ ರುಚಿನೂ ನೋಡೇ ಬಿಡೋಣ' ಅನ್ನೋ ಕುತೂಹಲವೂ ಕಾಡಿದ್ದರಿಂದ ಸುಮ್ಮನೆ ಹಾಗೇ ಮಲಗಿದೆ.

ಅಂತೂ ಇಂತೂ ಅಡುಗೆ ಮಾಡಿ ನನ್ನನ್ನು ಊಟಕ್ಕೆ ಕರೆದರು. ನನಗೆ ಜ್ವರ ಬಂದದ್ದರಿಂದ ಸಾರಿನ ರುಚಿ ಗೊತ್ತಾಗುತ್ತದೆ. ವಿಪರೀತ ಖಾರ ಇದ್ದುದರಿಂದ ತಿನ್ನಲಾಗದೆ ಎರಡು ತುತ್ತು ಅನ್ನ ತಿಂದು ಎದ್ದು ಬಿಟ್ಟೆ. ಇವರೂ ಊಟ ಮಾಡಲು ಒದ್ದಾಡುತ್ತಿದ್ದರು. ಕಡೆಗೆ ''ಉಪ್ಪಿಲ್ಲ, ಹುಳಿ ಇಲ್ಲ, ಸಿಕ್ಕಾಪಟ್ಟೆ ಖಾರ, ನನ್ನ ಕೈಲಿ ತಿನ್ನಕ್ಕಾಗಲ್ಲಪ್ಪ'' ಎನ್ನುತ್ತಾ ಅವರೂ ಅರ್ಧಕ್ಕೆ ಕೈ ತೊಳೆದುಕೊಂಡು ಬಿಟ್ಟರು.

''ಒಂದು ಗಂಟೆಗೆಲ್ಲ ಅಡಿಗೆ ತಯಾರು ಮಾಡ್ತೀನಂತ ಒಳ್ಳೆ ನಳ ಪಾಕ ಇಳಿಸೋರ ಹಾಗೆ ಅಡುಗೆ ಮನೆಗೆ ನುಗ್ಗಿದ್ರಿ. ಇಂಥಾ ಅಡಿಗೆ ಮಾಡೋಕೆ ಆ ಪಾಟಿ ಕೊಚ್ಚಿಕೊಂಡ್ರಿ? ಮೊದಲೇ ಜ್ವರ ಬಂದು ಎರಡು ದಿನ ಬರೀ ಗಂಜಿ ಕುಡಿದುಕೊಂಡೇ ಇದ್ದೀನಿ. ನಿಮ್ಮ ಅಡಿಗೆ ನೆಚ್ಕೊಂಡು ಕುಳಿತರೆ ನಾನು ಉಪವಾಸ ಸಾಯಬೇಕಷ್ಟೆ?'' ಎಂದು ಅವರ ಮೇಲೆ ಸಿಡುಕಿದೆ.

''ಏನು ಮಾತಾಡ್ತೀಯ ನೀನು? ನಾನು ಗಂಡ್ಸು ಕಣೇ? ನಾನೇನು ನಿನ್ನಂಗೆ ಹೆಂಗ್ಸಾ, ರುಚಿ ರುಚಿಯಾಗಿ ಅಡಿಗೆ ಮಾಡಿ ಇಳಿಸೋದಿಕ್ಕೆ? ನಾನು ಇಷ್ಟರ ಮಟ್ಟಿಗೆ ಮಾಡಿರೋದೇ ಹೆಚ್ಚು'' ಎಂದು 'ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಅನ್ನುವ ರೀತಿಯಲ್ಲಿ ಮಾತನಾಡಿದವರನ್ನು ಪೆಚ್ಚಾಗಿ ನೋಡುತ್ತಾ ನಿಂತೆ!

-ಆರ್ ಪುಷ್ಪ
ಚಿತ್ರದುರ್ಗ

### ಪ್ರಪ್ರಥಮ ಉಕ್ಕಿನ ಸೇತುವೆ

*''ಲೋಹಾ ಕಾ ಪೂಲ್'' ಎಂದು ಕರೆಯಲಾಗುವ ಪ್ರಪ್ರಥಮ ಉಕ್ಕಿನ ಸೇತುವೆಯನ್ನೂ 1815ರಲ್ಲಿ, ಜೆಸ್ಸೋಪ್ ಅಂಡ್ ಕಂಪೆನಿ ಲಿಮಿಟೆಡ್ ಎಂಬ ಸಂಸ್ಥೆ 'ಗೋಮತಿ' ನದಿಯ ಮೇಲೆ (ಲಕ್ನೋ) ನಿರ್ಮಿಸಿತು.*

## ನಳಪಾಕದ ಸ್ವರ್ಗಸುಖ

ನಾನೊಂದು ಕಂಪ್ಯೂಟರ್ ತರಬೇತಿಗೆ ಹೋಗ ಬೇಕಾಗಿತ್ತು. ಒಂದಲ್ಲ – ಎರಡಲ್ಲ, ಆರು ವಾರಗಳು ಊರನ್ನು ಬಿಡಬೇಕಾಗಿತ್ತು. ಉತ್ತಮ ಅವಕಾಶವನ್ನು ಕಳೆದುಕೊಳ್ಳುವಂತಿಲ್ಲ. ಸಂಸಾರದ ನೊಗವನ್ನು ಹೊರಿಸಿ ಹೋಗಲು ಬೇರಾರೂ ಇಲ್ಲ. ಮನೆಯಲ್ಲಿರುವವರು ಅಡಿಗೆಯ ಗಂಧವಿಲ್ಲದ ಗಂಡು ಮಕ್ಕಳಿಬ್ಬರು. ಮದುವೆಯಾದ ಇಪ್ಪತ್ತು ವರ್ಷಗಳಿಂದ 'ಕುಕ್ಕರ್' ಆರಿಸುವ ಘನಕಾರ್ಯವೊಂದನ್ನುಳಿದು ಮತ್ತೇನೂ ಬಾರದ ನಳ ಮಹಾಶಯ ಪತಿವರ್ಯರು.

ಇಷ್ಟು ವರ್ಷಗಳಿಂದ ನನ್ನವರು ಅಡಿಗೆ ಮನೆಯಲ್ಲಿ ನಡೆಸಿಕೊಂಡು ಬಂದ ಒಂದೇ ಕೆಲಸವೆಂದರೆ ಕಾಫಿ ಹಾಕುವುದು! ಅದೂ ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು ಮಾಡುವ ಈ ಒಂದು ಘನಾಂದಾರಿ ಕೆಲಸಕ್ಕೆ ಅವರಿಗೆ, ನಾನು ಬೆಳಗ್ಗಿನ ಅಡಿಗೆ–ತಿಂಡಿ ಮಾಡಿ ಮುಗಿಸುವಷ್ಟು ಸಮಯ ಬೇಕು! ಒಂದೊಂದು ಪಾತ್ರೆಯನ್ನು 'ವಿಮ್' ಹಾಕಿ, 'ಬ್ರಷ್'ನಲ್ಲಿ ಉಜ್ಜಿ ತೊಳೆದು, ಒರೆಸಿ, ಕಾಫಿಪುಡಿಯನ್ನು ಅಳತೆ ಮಾಡಿ ಪ್ರಯೋಗಶಾಲೆಯಲ್ಲಿ ಆ್ಯಸಿಡ್ ತೊಟ್ಟುಗಳನ್ನು ಹಾಕುವಂತೆ, ಫಿಲ್ಟರಿಗೆ ಹಾಕಿ, ನೀರನ್ನು ಅಳತೆ ಮಾಡಿ, ಪಾತ್ರೆಗೆ ಹಾಕಿ, ಕುದಿಸಿ ಅದನ್ನು ಫಿಲ್ಟರಿಗೆ ಬಗ್ಗಿಸಿ, ಡಿಕಾಕ್ಷನ್ ಇಳಿಯುವವರೆಗೂ, ಮರಿ ಹಾಕಿದ ಬೆಕ್ಕಿನಂತೆ ಅದರ ಸುತ್ತಲೇ ಸುತ್ತಾಡುತ್ತಾ, ಹಾಲನ್ನು ಕಾಯಿಸಿ, ಕಾಫಿ ಡಿಕಾಕ್ಷನ್ ಬಸಿದುಕೊಂಡು, ಹಾಲನ್ನು ಬೆರೆಸಿ, ಸಕ್ಕರೆ ಬೆರೆಸಿ, ಕಲೆಸಿ ಕುಡಿಯುವ ಆ ವೈಖರಿ! ಓಹ್! ನೋಡಿದವರಿಗೇ ಗೊತ್ತು!

"ನೀನೇನೂ ಯೋಚ್ನೆ ಮಾಡ್ಬೇಡ್ವೆ. ನಾನೆಲ್ಲಾ ನಿಭಾಯಿಸ್ತೀನಿ'' ಪ್ರೀತಿಯಿಂದ ಆಶ್ವಾಸನೆ ನೀಡಿದ ಭರ್ತಾರನನ್ನು ಕಂಡು ಹೆಮ್ಮೆ ಎನಿಸಿದರೂ, ಬೆಳಿಗ್ಗೆ ಬೇಗನೆ ಹೊರಡುವ ಕಾಲೇಜು ಹುಡುಗರಿಬ್ಬರಿಗೂ ತಿಂಡಿ ಮಾಡಿ, ಊಟ ಕಟ್ಟಿ, ತಾವೂ ತಿಂದು, ಅಡಿಗೆಯನ್ನು ಪೂರೈಸಿ ಹೋಗಲು, ಅಭ್ಯಾಸವಿಲ್ಲದ ನಮ್ಮವರಿಗೆ ಕಷ್ಟವೇ ಎಂದು ನನಗೆ ಭಯವಾಗಿತ್ತು.

ಕಡೆಗೂ ಹೊರಡುವ ದಿನ ಹತ್ತಿರ ಬಂದೇ ಬಿಟ್ಟಿತು. ಹತ್ತಿರದ ಊರೇ ಆದ್ದರಿಂದ ವಾರಕ್ಕೊಮ್ಮೆ ನಾನು ಬಂದು ಹೋಗಬಹುದಿತ್ತು. ಎಂತಲೇ ವಾರಕ್ಕಾಗುವಷ್ಟು ಗೊಜ್ಜು, ಎಣ್ಣೆಗಾಯಿ, ದೋಸೆ ಹಿಟ್ಟು, ಇಡ್ಲಿ ಹಿಟ್ಟು, ತೊಕ್ಕು ಮಾಡಿ, ತೆಂಗಿನ ತುರಿಯನ್ನು



ಸೀತಾರಾಮ್

ಅಡಿಗೆ ಮನೆಯಲ್ಲಿ ನಮ್ಮ ಯಜಮಾನರು:



''ಅವರೀಗ 'ಹೋಂವರ್ಕ್' ಮಾಡ್ತಿದಾರೆ. ಸ್ವಲ್ಪ ಹೊತ್ತು ಕುಳಿತಿರಿ. ಬಂದು ಬಿಡ್ತಾರೆ''

ತುರಿದು ತಂಗಳು ಡಬ್ಬಿಗೆ ತುಂಬಿಸಿದೆ. ಅಕ್ಕಿ–ಬೇಳೆ ಬೇಯಿಸುವುದು, ಮೊಸರು ಹೆಪ್ಪಿಡುವುದು ತೋರಿಸಿ ಕೊಟ್ಟೆ. ಸಾರಿನ Concentrate ಮಾಡಿ ಫ್ರಿಜ್‌ನಲ್ಲಿಟ್ಟು, ಅದನ್ನು ಹೇಗೆ ಒಂದು ಸೌಟು ಕದಡಿ ಬೆಂದ ಬೇಳೆಯೊಂದಿಗೆ ಕುದಿಸಿದರೆ ತಿಳಿಸಾರಾಗುವುದು ಎಂದು ತೋರಿಸಿಕೊಟ್ಟೆ.

ವಾರ ಕಳೆದು ಶನಿವಾರ ರಾತ್ರಿ, ನಾನು ಮರಳಿ ಊರಿಗೆ ಬಂದಾಗ ನನಗೆ ಭರ್ಜರಿ ಸ್ವಾಗತ ಕಾದಿತ್ತು. ನಮ್ಮವರ ಮುಖದಲ್ಲಂತೂ ನಾನೆಂದೂ ಕಂಡಿರದ ರಾಜಗಾಂಭೀರ್ಯ. ಏನೋ ಅಸಾಧ್ಯವಾದದ್ದನ್ನು ಸಾಧಿಸಿದ ತೃಪ್ತಿ, ಹೆಮ್ಮೆ! ನಾನು ಕೈ–ಕಾಲು ತೊಳೆದು ಅಡಿಗೆ ಮನೆಗೆ ಕಾಲಿಟ್ಟಾಗ ನನ್ನ ಕಣ್ಣೇ ನಂಬಲಾಗದಷ್ಟು ಚೊಕ್ಕಟವಾಗಿತ್ತು. ಊಟದ ಮೇಜಿನ ಮೇಲೆ ತಟ್ಟೆಗಳೆಲ್ಲಾ ಇಟ್ಟು ನೀರಿಡಲಾಗಿತ್ತು. "ಬಾರೇ ಇವತ್ತು ನನ್ನ ಕೈ ಅಡಿಗೆ ರುಚಿ ನೋಡು. ನಾನೇ ಬಡಿಸ್ತೀನಿ. ನೀವೆಲ್ಲಾ ಊಟ ಮಾಡಿ'' ಎನ್ನುತ್ತಾ ನಮ್ಮವರು ನನ್ನ ಕೈ ಹಿಡಿದು ತಟ್ಟೆ ಮುಂದೆ ಕೂರಿಸಿದಾಗ ನನಗೆ ಸ್ವರ್ಗವೇ ಭುವಿಗಿಳಿದು ಬಂದ ಅನುಭವ. ಪ್ರಯಾಣದಿಂದ ಹಸಿವೂ ಅಸಾಧ್ಯವಾದದ್ದರಿಂದ ನಾನು ಹೆಚ್ಚು ಹೇಳಿಸಿಕೊಳ್ಳದೆ ಕುಳಿತೆ.

ನಮ್ಮವರು ಶುಭ್ರವಾದ ಬಿಳಿಯ ಪಂಚೆ ಉಟ್ಟು, ತೋಳಿಲ್ಲದ ಬನಿಯನ್ ತೊಟ್ಟು, ಹೆಗಲ ಮೇಲೊಂದು ತುಂಡು ಟವೆಲ್ ಹಾಕಿಕೊಂಡು, ಪಂಚೆಯನ್ನು ಅರ್ಧ ಮಡಿಚಿ ಕಟ್ಟಿ, ಇಕ್ಕಳ ಹಿಡಿದು ಬಡಿಸುವ ಸಂಭ್ರಮ ಕಂಡಾಗ ನಿಜಕ್ಕೂ ಒಂದು ಭಾವಚಿತ್ರವನ್ನಾದರೂ ತೆಗೆಯಬಹುದಾಗಿತ್ತು ಎನ್ನಿಸಿತ್ತು. ಅನ್ನ ಹೂವಿನಂತೆ ಮೃದುವಾಗಿತ್ತು. ಬಿಸಿ ಅನ್ನಕ್ಕೆ ತುಪ್ಪ ಹಿತವಾಗಿತ್ತು. ನಾನು ತುರಿದಿಟ್ಟ ತೆಂಗಿನ ತುರಿಗೆ, ಹಸಿಮೆಣಸಿನ ಕಾಯಿ, ಶುಂಠಿ, ಹುರಿಗಡಲೆ, ಉಪ್ಪು, ಹುಣಿಸೇ ಹಣ್ಣು ಬೆರಸಿ, 'ಮಿಕ್ಸರ್'ನಲ್ಲಿ ರುಬ್ಬಿ ಅವರೇ ತಯಾರಿಸಿದ 'ಕಾಯಿಚಟ್ನಿ', ಕಲೆಸಿದಷ್ಟೂ ಕಲೆಸೋ ಎನ್ನುವಂತಿತ್ತು. ಜೊತೆಗೆ ಬೇಳೆ ಸಾರು, ಸುಟ್ಟ ಹುರುಳೀ ಹಪ್ಪಳ, ಇರುವ ಕೆನೆಯನ್ನೆಲ್ಲಾ ಹಾಕಿ ಹೆಪ್ಪು ಮಾಡಿದ ಗಟ್ಟಿ ಮೊಸರು, ಬಾಯಲ್ಲಿ ನೀರು ತರಿಸಿತ್ತು.

ಬಡಿಸುತ್ತಿದ್ದ ವಲಲ ಮಹಾಶಯರು, ''ನೋಡೆ ನೀನಿಲ್ಲಾಂತ ನಮಗೇನೂ ಕಡಿಮೆ ಮಾಡಿಕೊಂಡಿಲ್ಲ. ಕ್ಯಾರೆಟ್, ಟೊಮೇಟೋ, ಸೌತೇಕಾಯಿ ಹಸಿ ತರಕಾರಿ, ಡಬ್ಬಕ್ಕೆ ಇಡ್ಲಿ, ದೋಸೆ, ಬ್ರೆಡ್ಡು; ಬರೀ ಸಾರು ಚಟ್ನಿ ಬೇಜಾರಾಗುತ್ತೇಂತ ಡಬ್ಬದ ತುಂಬಾ ಕೋಡುಬಳೆ, ಚಕ್ಕುಲಿ ತಂದಿಟ್ಟಿದ್ದೀನಿ. ಜೊತೆಗೆ ನೀನಿಲ್ಲದೆ ಇದ್ರೆ ಅಡಿಗೆಮನೆ ನೋಡು ಎಷ್ಟು ಚೊಕ್ಕಟವಾಗಿ ಕನ್ನಡಿ ಹಾಗೆ ಇದೆ. ನೀನು ಇನ್ಮೇಲೆ ಯಾವಾಗ ಬೇಕಾದ್ರೂ, ಎಷ್ಟು ದಿನ ಬೇಕಾದ್ರೂ ಊರಿಗೆ ಹೋಗಬಹುದು. ನೋ ಪ್ರಾಬ್ಲಂ'' ಎಂದಾಗ ನಾನು ಎಲ್ಲರನ್ನೂ ಒಮ್ಮೆ ಸರಿಯಾಗಿ ನೋಡಿದೆ. ನಿಜ, ಅಷ್ಟೊಂದು ತುಪ್ಪ, ಕೆನೆ ಮೊಸರು, ಜ್ಯಾಮ್ ಮೈ ಸೇರಿದರೆ ದಪ್ಪವಾಗದೆ ಇನ್ನೇನು! ಪರವಾಗಿಲ್ಲವೇ ಎನಿಸಿ ಖುಷಿಯಾದೆ.

ಮರುದಿನ ಭಾನುವಾರ ಆಕಳಿಸುತ್ತಾ ಎದ್ದೆ. ''ಏನೇ ಈವತ್ತು ಬ್ರೇಕ್‌ಫಾಸ್ಟ್‌ಗೆ? ಚನಾ–ಬತೂರ ಮಾಡಿಬಿಡು. ಊಟಕ್ಕೆ ಶ್ಯಾವಿಗೆ ಖೀರು, ಬೊಂಬಾಯಿ ಬೋಂಡ ಸಾಕು. ಸಂಜೆಗೆ ಸಿನಿಮಾ ನೋಡ್ತಾ ತಿನ್ನೋಕ್ಕೆ ಗೊಜ್ಜವಲಕ್ಕಿ, ಕಡಲೆ ಉಸಲಿ ಮಾಡ್ಬಿಡು. ವಾರದಿಂದ ಸಪ್ಪೆ ಊಟ, ಬ್ರೆಡ್ಡು, ಇಡ್ಲಿ ತಿಂದು 'ಬೋರ್' ಆಗ್ಬಿಟ್ಟಿದೆ'' ಎಂಬ ನಮ್ಮವರ ಅಮೃತವಾಣಿ ಕಿವಿಗೆ ಬಿದ್ದಾಗ ನಾನು ಧರೆಗಿಳಿದೆ. ನಮ್ಮವರ ನಳಪಾಕದ 'ಸ್ವರ್ಗಸುಖ' ಬರೀ ನಿನ್ನೆಯವರೆಗೇ ಎಂಬ ಕಟು ಸತ್ಯ ಮೇಲೆರಗಿದಾಗ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿ, ಪಾಕಗೃಹದ ಕಡೆಗೆ ಹೆಜ್ಜೆ ಹಾಕಿದೆ, ಎಂದಿನಂತೆ ಜೋಲು ಮುಖದೊಂದಿಗೆ!

—ಗೀತಾ ಸೀತಾರಾಮ್
ಮೈಸೂರು

## ಸ್ಪೆಶಲ್ ಭಾತ್

ನಾನಂದು ತಿಂಗಳ ರಜದಲ್ಲಿದ್ದೆ. ಅಕಸ್ಮಾತ್ ನೆಂಟರೊಬ್ಬರು ಕುಟುಂಬ ಸಮೇತ ನಿಮ್ಮಲ್ಲಿಗೆ ಬರಲಿದ್ದೇವೆಂದು ನಮಗೆ 'ತಂತಿ' ಕೊಟ್ಟರು. ಸರಿ, ಮನೇಲಿ ಸಮಸ್ಯೆ ಉಂಟಾಯಿತು. ನಾನು ಒಳಗಿಲ್ಲ. ನಮ್ಮವರಿಗೆ ನಿತ್ಯದ ಅಡಿಗೆ (ಅನ್ನ, ಸಾರು, ಗೊಜ್ಜು) ಏನೋ ಸುಮಾರಾಗಿ ಬರುತ್ತೆ ಹೊರತು ವಿಶೇಷ ಬಗೆಗಳು ಗೊತ್ತಿಲ್ಲ. ಏನಪ್ಪಾ ಮಾಡೋದು ಅಂತ ಯೋಚಿಸಿ 'ವಿಧಿ ಇಲ್ಲ. ನಾನೇ ಮಾಡ್ತೀನಿ ಕಣೇ, ಇದ್ದದ್ದರಲ್ಲಿ ಕೇಸರಿಭಾತು ಸುಲಭದ್ದು, ನಂಗೂ ಸುಮಾರಾಗಿ ಬರುತ್ತೆ' ಎಂದು ವಿಶೇಷ ಅಡಿಗೆಯ ಜವಾಬ್ದಾರಿಯನ್ನು ಧೈರ್ಯ ಮಾಡಿ ವಹಿಸಿಕೊಂಡೇ ಬಿಟ್ಟರು. ಯಾವಾಗಲೂ ನಂಗೆ ''ಅದು ಸರಿಯಿಲ್ಲ.

ಸಮಾಧಾನ ಮಾಡಲೆಂಬಂತೆ ಹತ್ತಿರ ಹೋದ ನನ್ನ ಪಿಲ್ಲಾರಿ ಗೊಂಬೆಯನ್ನು ಮುಟ್ಟುವ ಕುತೂಹಲದಲ್ಲಿ ನಳಿನಾಕ್ಷಿಯ ಮೂಗು ಕಣ್ಣುಗಳಲ್ಲಿ ಬೆರಳು ತೂರಿಸಿ ನೋಡಿ ಕೇಕೆ ಹಾಕಿತು. ಪುಣಾಮ ಸಣ್ಣ ಪಾಪುವಿನ ಅಳು ನಿಲ್ಲಲಿಲ್ಲ. ನಡು ನಡುವೆ 'ಈಯಯ್ಯೋ.' ಚಿನ್ನೂ ಬಾಯ್ಬಿಟ್ಟ.

"ಅದಕ್ಕೆ ನೀವು ಕಪಾಟಿನೊಳಗಿಟ್ಟ ಗಾಜಿನ ಬುದ್ಧನ ಮೂರ್ತಿ ಬೇಕಂತೆ ಚಿಕ್ಕಮ್ಮ, ಅದಕ್ಕೇ ಆಗ್ಲಿಂದ ಅಳ್ತಿದಾವೆ'' ಎಂದು ವಕಾಲತ್ತು ಮಾಡಿದ ಚಿನ್ನು. ಮುಂಚಿನ ದಿನವಷ್ಟೇ ಅವನ ಕೈಗೆ ಸಿಕ್ಕು ಪುಡಿಪುಡಿಗೊಳ್ಳಲಿದ್ದ ಗಾಜಿನ ಮೂರ್ತಿಯನ್ನು ನಾವು ಎತ್ತಿ ಕಪಾಟಿನೊಳಗಿಟ್ಟ ವಿಷಯ ಚಿನ್ನುಗೆ ಮಾತ್ರ ಗೊತ್ತು. ಇವೆರಡೂ ಪಿಳ್ಳೆಗಳಿಗೆ ಆ ಸಂಗತಿಗಳೆಲ್ಲ ಇನ್ನೂ ಅರ್ಥವಾಗದು. ಮರಿ ಚೆನ್ನು ತನ್ನ ಲೆವೆಲ್‌ನಲ್ಲೇ ತಲೆ ಓಡಿಸಿದ್ದ! "ಚೆನ್ನೂ ಬದ್ಮಾಶ್ ನಾಳೆ ನೀನು ರಾಜಕಾರಣಿಯಾಗ್ಲಿಕ್ಕೆ ಲಾಯಖ್ ಇದೀಯ'' ಎಂದು ಹೇಳಿ ಚಿಲ್ಟಾರಿಗಳನ್ನು ಹೊರಗೆ ಅಂಗಳಕ್ಕೆ ತಂದೆ. ನಾಯಿಯನ್ನು ಕಂಡಾಕ್ಷಣ ಎರಡೂ ಶಿಶುಗಳು ಅಳು ನಿಲ್ಲಿಸಿ ಕೀಕ್ ಕೀಕ್ 'ಪ್ರಾರಂಭಿಸಿದವು. ಅಲ್ಲೇ ಕೂಡಿಸಿಕೊಂಡು ಹಾಲು ಕುಡಿಸತೊಡಗಿದ್ದೆ ಮಾತ್ರ. ಅಷ್ಟರಲ್ಲಿ ನಮ್ಮ ಪತಿರಾಯರ ಆಫೀಸಿನ ಸೂಪರ್ ಬಾಸುಗಳ ಕಾರು ಗೇಟಿನಲ್ಲಿ ಬಂದು ನಿಂತಿತು. ಮತ್ತೂ ಎರಡು ಬೃಹತ್ ಆಕೃತಿಗಳು ಕಾರಿಂದಿಳಿದು ಮನೆಯತ್ತ ಹೆಜ್ಜೆ ಹಾಕಿದುವು. ನನಗೆ ಭೂಮಿ ಬಾಯ್ಬಿಡುವದೊಂದೇ ಬಾಕಿ. ಬಾಸುಗಳು ಮನೆಗಾಗಮಿಸುವುದು ಕೈಕೆಳಗಿನವರ ಪ್ರಮೋಷನ್ನಿನ ಮುನ್ಸೂಚನೆ ತಾನೆ? ಅವರನ್ನೀಗ ಸಂತುಷ್ಟಗೊಳಿಸುವ ಹೊಣೆಗಾರಿಕೆ ನನ್ನ ಮೇಲೆ ಬಿದ್ದಿದೆ. ಅದೂ ಎಂತಹ ಪರಿಸ್ಥಿತಿಯಲ್ಲಿ! ಮೂರು ದೇವರುಗಳನ್ನು ಒಬ್ಬಳೇ ಸಂಭಾಳಿಸುವ ಪರ್ವಕಾಲದಲ್ಲಿ. ಹೇಗೋ ಸಾವರಿಸಿಕೊಂಡು ಸೋಫಾದ ಮೇಲಿದ್ದ ಅಸುಖ್ಯಾತ ಬಾಲರನ್ನು ನೆಲಕ್ಕೆ ಕೂಡಿಸಿ ಚಿನ್ನೂ ಸ್ವಲ್ಪ ನೋಡ್ತಿರು' ಎಂದು ಅಡುಗೆ ಮನೆಗೆ ಓಡಿದೆ ಡಿಕಾಕ್ಷನ್ ಸುರುವಿಡಲು.

ಹಾಲಿನ ವಿದ್ಯಮಾನಗಳು ಕಾಣದಿದ್ದರೂ ಕೇಳುತ್ತಿತ್ತು. "ಅಜ್ಜಾ, ಅಜ್ಜಾ'' ನನ್ನ ಕೂಸಿನ ಸಂಬೋಧನೆ. ಮಧ್ಯವಯಸ್ಕರಿಗೆ ರಕ್ತ ಕುದಿಸುವ ಈ ಶಬ್ದವನ್ನು ನನ್ನ ತಂದೆ ಏಕಾದರೂ ಕಲಿಸಿದರೋ ಎಂದು ಪರಚಿಕೊಳ್ಳುವಂತಾಯ್ತು. ತುಟಿಗೆ ರಂಗು ಲೇಪಿಸಿ ಹೇರ್ ಡೈ ಮಾಡಿಸಿಕೊಂಡ ಬಾಸಿಣಿಯವರು ತಂಟೆಗೊಂದು ಹೋಗದಿದ್ದಾಗಿತ್ತು ಎಂದುಕೊಳ್ಳುತ್ತಿದ್ದೆ.

ಅಷ್ಟರಲ್ಲಿ ಕೇಳಿ ಬಂತು ಚೆನ್ನೂನ ಮಾತು.

"ಅಜ್ಜೀ ನೀವು ಕನ್ನಡಕ ತೆಗೆದಿಡಬೇಡಿ. ಅವು ಅದೇ ಬೇಕೆಂದು ಅಳುತ್ತವೆ.''

ಅಜ್ಜಿ (!) ಏನೆಂದುಕೊಂಡಳೋ ಮುಖಭಾವ ಕಾಣುತ್ತಿರಲಿಲ್ಲ. ಹಾಲಿನಲ್ಲಿ ಮಕ್ಕಳ ಚೀತ್ಕಾರ ಬಿಟ್ಟರೆ ಅತಿಥಿಗಳ ಕಡೆಯಿಂದ ಸದ್ದೇ ಇಲ್ಲ. ಅಷ್ಟರಲ್ಲಿ ಬಾಸುಗಳು 'ಹಾಯ್' ಎಂದದ್ದಷ್ಟೇ ಕೇಳಿಸಿ ಹಾಲಿಗೆ ಓಡಿ ಬರುವಷ್ಟರಲ್ಲಿ ನಳಿನಾಕ್ಷಿಯ ಮಗು ಖಾಲಿ ಪೌಡರ್ ಬಾಟಲೊಂದನ್ನು 'ಅಜ್ಜ'ನಿಗೆ ಗುರಿ ಇಟ್ಟು ಎಸೆದಾಗಿತ್ತು.

"ನಿಮ್ಮನ್ನ ನೋಡಿದರೆ ನಮ್ಮಜ್ಜಿ ಮನೆಯ 'ಕಲುರ್ಟಿ' (ದಕ್ಷಿಣ ಕನ್ನಡದ ಒಂದು ಭೂತ) ಹಾಗೆ ಕಾಣ್ತೀರಿ ಅದಕ್ಕೇ ಭಯ ಪಟ್ಟು ಬಾಟಲಿ ಎಸೀತು ಪಾಪು.....'' ಚಿನ್ನೂ ಇನ್ನೂ ಏನೇನು ಹೇಳ್ತಿದ್ದನೋ ಓಡಿ ಹೋಗಿ ಬಾಯಿ ಕಟ್ಟಿದೆ. ತಮಿಳು ಮೂಲದ ಬಾಸು 'ಕಲುರ್ಟಿ' ಶಬ್ದ ಕೇಳಿರಲಿಕ್ಕಿಲ್ಲವೆಂಬ ಧೈರ್ಯದಲ್ಲಿ,

"ಮಕ್ಕಳು ಸರ್. ಏನೇನೋ ಮಾತಾಡ್ತಾವೆ ನೀವು ಅಪರೂಪಕ್ಕೆ ಬಂದಾಗ್ಲೇ ನಮ್ಮೆಜಮಾನ್ರು ನೆಂಟರನ್ನ ಕರಕೊಂಡು ಡಂಟಿಸ್ಟ್ ಹತ್ರ ಹೋಗಿದಾರೆ. ಕಾಫಿ ಕುಡೀತಿರಿ ಬರ್ತಾರೆ'' ಎಂದು ನಾನು ಸಮಾಧಾನಿಸುವಷ್ಟರಲ್ಲಿ ಅವರಿಬ್ಬರೂ ಎದ್ದು ನಿಂತು ಬಿಟ್ಟರು. "ಬೇಡ ಬೇಡ ಕಾಫಿ. ನೀವು ಮಕ್ಕಳನ್ನು ಸಂಭಾಳಿಸಿಕೊಳ್ಳಿ ನಾವು ಬರ್ತೇವೆ'' ಎಂದರು ಹಣೆ ಮುಟ್ಟಿ ನೋಡಿಕೊಳ್ಳುತ್ತ. ನಾನು ಪ್ಲೀಸ್ ಪ್ಲೀಸ್ ಎನ್ನುತ್ತಿದ್ದಂತ ಕಾರು ಹೊರಟೇ ಹೋಯ್ತು. ನಮ್ಮವರ ಪ್ರಮೋಷನ್ ಸಹ ಕಾರಿನಿಂದೆದ್ದ ಧೂಳಿನಂತೆ ಹಾರಿ ಹೋಯ್ತು ಎಂಬುದು ನನಗೆ ಖಚಿತವಾಯ್ತು.

ಮುಲಾಜಿಲ್ಲದೆ ಕೂತು 'ದದ್ದದ್ದಾ' ಎಂದು ಹಾಡುತ್ತಿದ್ದ ಮಕ್ಕಳಿಬ್ಬರಿಗೂ ಪೂಜಾರಿ ಚೆನ್ನುವಿಗೂ ಸೇರಿಸಿ ಕೈ ಮುಗಿದು ಹೇಳಿದೆ. "ಈಗ ದೇವರುಗಳು ಸ್ವಲ್ಪ ನಿದ್ದೆ ಮಾಡಬೇಕಾಗಿ ಪ್ರಾರ್ಥನೆ'' ಕೈ ಮುಗಿದಿದ್ದಂತೆಯೇ ಎಲ್ಲರ ಪ್ರವೇಶವೂ ಆಯ್ತು. "ಅದೇನೇ ಮಕ್ಕಳಿಗೆ ಕೈ ಮುಗಿತಿದೀಯ?'' ಎಂದಳು ನಳಿನಾಕ್ಷಿ.

"ಮಕ್ಕಳು ದೇವರು ಎಂದು ಗೋದತ್ತೆ ಯಾವಾಗ್ಲೂ ಹೇಳ್ತಿರ್ತಾರೆ. ಅದು ಹೌದೆನ್ನಿಸಿ ಕೈ ಮುಗಿದೆ'' ಎಂದೆ. "ಯಾರಾದ್ರೂ ಬಂದಿದ್ರಾ?'' ಎಂಬ ಯಜಮಾನರ ಪ್ರಶ್ನೆಗೆ "ಇಲ್ಲ'' ಎಂದುತ್ತರಿಸಿ ಬಿಟ್ಟೆ. ಅವರ ಬಾಸು ಸಹ ಇಲ್ಲಿಗೆ ಬಂದ ವಿಷಯ ಹೇಳಲಿಕ್ಕಿಲ್ಲ ಅಲ್ಲವೇ?

## "ಅತ್ಯುತ್ತಮ ಜೇಸಿರೆಟ್ ಅಧ್ಯಕ್ಷೆ" ಪ್ರಶಸ್ತಿ ವಿಜೇತೆ ಗೀತಾ ಡಿ ಪೈ



ಮಹಿಳೆಯರಿಂದಲೇ ನಡೆಸಲ್ಪಡುವ ಜೇಸಿ ಪತ್ನಿಯರ ವಿಭಾಗವು ಜೇಸಿರೆಟ್ ವಿಂಗ್ ಎಂದು ಕರೆಯಲ್ಪಡುತ್ತದೆ. ತಾರೀಖು 5.7.1992ರಂದು ಜೋಡು ಮಾರ್ಗ ಬಂಟ್ವಾಳದಲ್ಲಿ ನಡೆದ ಪ್ರಥಮ ಜೇಸಿರೇಟ್ ಸಮ್ಮೇಳನದಲ್ಲಿ ಕುಂದಾಪುರ ಜೇಸಿರೇಟ್ ಅಧ್ಯಕ್ಷೆ ಶ್ರೀಮತಿ ಗೀತಾ ಡಿ ಪೈಯವರು 1992 ನೇ ಸಾಲಿನ "ಅತ್ಯುತ್ತಮ ಜೇಸಿರೆಟ್ ಅಧ್ಯಕ್ಷೆ'' ಪ್ರಶಸ್ತಿಯನ್ನು ವಲಯ 15ರ ಅಧ್ಯಕ್ಷ ಶ್ರೀ ದುಗ್ಗಪ್ಪನವರಿಂದ ಸ್ವೀಕರಿಸಿದರು. ಸುಮಾರು 400ಕ್ಕೂ ಮಿಕ್ಕಿ ಅಧಿಕ ಪ್ರತಿನಿಧಿಗಳು ಕರ್ನಾಟಕದ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಿಂದ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು. ಇದಲ್ಲದೇ ಇವರು "ರಸಪ್ರಶ್ನೆ'' ಸ್ಪರ್ಧೆ ಹಾಗೂ "ಕರಕುಶಲ ಪ್ರದರ್ಶನ'' ಸ್ಪರ್ಧೆಗಳಲ್ಲೂ ಪ್ರಥಮ ಬಹುಮಾನವನ್ನು ಹಾಗೂ 12 ಮನ್ನಣೆ ಪತ್ರಗಳನ್ನು ಈ ಸಂದರ್ಭದಲ್ಲಿ ಪಡೆದಿರುವರು. ಬಾಲ್ಯದಿಂದಲೂ ಗೊಂಬೆ ತಯಾರಿ, ಕಸೂತಿ ಕೆಲಸ ಇತ್ಯಾದಿಗಳಲ್ಲಿ ಆಸಕ್ತಿ ಹೊಂದಿರುವ ಈಕೆ ಕೇವಲ 7 ವರ್ಷ ಪ್ರಾಯದಲ್ಲಿ ಭರತನಾಟ್ಯ ಕಲೆಯನ್ನು ಅಭ್ಯಸಿಸಿ ಶಾಲೆಗಳಲ್ಲಿ ಪ್ರದರ್ಶನ ನೀಡಿರುವರು. ಸ್ಥಳೀಯ ಭಂಡಾರ್ಕರ್ಸ್ ಕಾಲೇಜಿನಲ್ಲಿ ಬಿಕಾಂ ಪದವಿ ಪಡೆದಿರುವ ಈಕೆ ಶಾಲಾ ಕಾಲೇಜುಗಳಲ್ಲಿ ಭಸ್ಮಾಸುರ ಮೋಹಿನಿ, ತ್ರಿಪುರ ದಹನ ಇತ್ಯಾದಿ ನೃತ್ಯ ರೂಪಕಗಳಲ್ಲಿ ಪಾತ್ರ ವಹಿಸಿ ಖ್ಯಾತಿ ಪಡೆದಿರುವರು. ಸುಮಧುರ ಕಂಠವನ್ನು ಹೊಂದಿರುವ ಇವರು ಹಲವು ಬಾರಿ ಮಂಗಳೂರು ಆಕಾಶವಾಣಿಯಲ್ಲಿ ಸಂಗೀತ ಕಾರ್ಯಕ್ರಮಗಳನ್ನು ನೀಡಿರುವರು. ವಿವಿಧ ನಮೂನೆಯ ಗೊಂಬೆಗಳು, ಮಣಿಗಳಿಂದ ರಚಿಸಿದ ಗೊಂಬೆಗಳು, ಸ್ಪಾಗಳಿಂದ ತಯಾರಿಸಿದ ಗೊಂಬೆಗಳು, ಆಮಂತ್ರಣ ಪತ್ರಿಕೆಗಳಿಂದ ನಿರ್ಮಿಸಿದ ಗೊಂಬೆಗಳು ಈಕೆಯ ಕಲಾ ಚಾತುರ್ಯದ ನಿದರ್ಶನಗಳು. ಥರ್ಮೋಕೋಲ್‌ನಿಂದ ರಚಿಸಿದ ಗೀತೋಪದೇಶ, ಅಲ್ಯೂಮಿನಿಯಂ ಶೀಟ್‌ಗಳ ಮೇಲೆ ನಿರ್ಮಿಸಿದ ಎಂಬೋಸಿಂಗ್ ಚಿತ್ರಗಳು ಅಲ್ಲದೇ ಬಟ್ಟೆಗಳ ಮೇಲೆ ರಚಿಸಿದ "ಪ್ಯಾಚ್ ವರ್ಕ್'' ಆಕೆಯ ಕಲಾ ಪ್ರೌಢಿಮೆಯ ದ್ಯೋತಕಗಳು.

ಈಕೆಯ ಪತಿ ದಿನೇಶ್ ಪೈ ಸಿಂಡಿಕೇಟ್ ಬ್ಯಾಂಕ್ ಕೋಟೇಶ್ವರದಲ್ಲಿ ಅಧಿಕಾರಿಯಾಗಿರುವರು ಹಾಗೂ 1992ನೇ ಸಾಲಿನ ಜೇಸಿ ಅಧ್ಯಕ್ಷರು. ಇತ್ತೀಚೆಗೆ ಕುಮಟಾದಲ್ಲಿ ನಡೆದ ಜೇಸಿ ಸಮ್ಮೇಳನದಲ್ಲಿ ಪೈ ದಂಪತಿಗಳು "ಆದರ್ಶ ದಂಪತಿ'' ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿರುವರು. ಪುತ್ರಿ ಅಪರ್ಣಾ ಪೈ ಹಾಗೂ ಪುತ್ರ ಅಮಿತ್ ವಿಕ್ರಮ್ ಪೈ ಇವರ ಮಕ್ಕಳು.

**–ಕು। ಸುಜಾತಾ ಕಾಮತ**

## ಒಂದು ಕುಟುಂಬ ಒಂದೇ ಹುಟ್ಟಿದ ಹಬ್ಬ

*ಒಂದು ಕುಟುಂಬ ಒಂದೇ ಹುಟ್ಟಿದ ಹಬ್ಬ! ಯಾರಿಗಾದರೂ ಆಶ್ಚರ್ಯವಾದೀತು. ಆದರೆ ಅಂತಹ ಕುಟುಂಬವೊಂದಿದೆ. ಮೇವಾಸಿಂಗ್, ಆತನ ಮಡದಿ ಗಿಯಾನೋ ದೇವಿ. ಅವರ ಮಕ್ಕಳು ದಲಬೀರ್ ಸಿಂಗ್, ಅನಿಲಕುಮಾರ್ ಮತ್ತು ರೇಖಾರಾಣಿ ಇವರೆಲ್ಲ ಫೆಬ್ರವರಿ 15ರಂದು ತಮ್ಮ ಹುಟ್ಟಿದ ಹಬ್ಬವನ್ನು ಆಚರಿಸುತ್ತಾರೆ. ಆದರೆ ವರ್ಷಗಳು ಮಾತ್ರ ಅನುಕ್ರಮವಾಗಿ 1955, (ಮೇವಾಸಿಂಗ್) 1958 (ಗಿಯಾನೋದೇವಿ), 1978 (ದಲಬೀರ್) 1982 ಅನಿಲ್ (1984) ರೇಖಾ ಬೇರೆ ಬೇರೆ.*

# ಯೋಗಾಭ್ಯಾಸ

ನಮ್ಮ ಸನಾತನ ಭಾರತ ಸಂಸ್ಕೃತಿಯಲ್ಲಿ ಯೋಗಶಾಸ್ತ್ರಕ್ಕೆ ಮಹತ್ತರ ಸ್ಥಾನವಿದೆ. ಈ ಯೋಗ ಶಾಸ್ತ್ರ ದೇಶ–ಕಾಲ–ಜಾತಿ–ಮತಗಳಿಗೆ ಅತೀತವಾಗಿದ್ದು, ಮಾನವನ ಆತ್ಮೋನ್ನತಿಗೆ ಪ್ರಮುಖ ಸಾಧನವಾಗಿದೆ.

'ಯೋಗ' ಅಂದರೇನು? 'ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಗುವುದು' ಎಂದರ್ಥ. ಸಾಮರ್ಥ್ಯದಿಂದ ಕಾರ್ಯ ನಿರ್ವಹಿಸುವುದೇ ಯೋಗ. 'ಚಿತ್ತ ವೃತ್ತಿ ನಿರೋಧ ಯೋಗಃ' (ಭಗವದ್ಗೀತೆ) ಅಂದರೆ 'ಮನಸ್ಸನ್ನು ವಿಕಾರಗಳಿಂದ ನಿಗ್ರಹಿಸುವುದೇ ಯೋಗ.'

"ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂಬುದು ಅನುಭವದ ಆರ್ಯೋಕ್ತಿ. ಅಂದರೆ 'ಧರ್ಮಸಾಧನೆ ಮಾಡಲು ಸಶಕ್ತ ಶರೀರವೇ ಮೂಲ ಸಾಧನ. ಆದ್ದರಿಂದ ಇದನ್ನು ಆರೋಗ್ಯವಾಗಿಟ್ಟುಕೊಳ್ಳಬೇಕಾದದ್ದು ಮಾನವನ ಮುಖ್ಯ ಕರ್ತವ್ಯ.'

ಶ್ರೀರಾಮಚಂದ್ರನು ಒಮ್ಮೆ ತನ್ನ ಗುರುವಾದ ವಸಿಷ್ಠರನ್ನು 'ಗುರುಗಳೇ! ವ್ಯಾಧಿ ಅಂದರೇನು? ಅದು ಏಕೆ ಬರುತ್ತದೆ? ಅದರ ನಿವಾರಣೆ ಹೇಗೆ?' ಎಂದು ಕೇಳಿದನು.

ಆಗ ವಸಿಷ್ಠರು ಹೇಳಿದರು. 'ವ್ಯಾಧಿಯಲ್ಲಿ ಎರಡು ವಿಧಗಳುಂಟು. ಅವುಗಳಲ್ಲಿ ಮೊದಲನೆಯದು 'ಆದಿಜ ವ್ಯಾಧಿ.' ಎರಡನೆಯದು 'ಅನಾದಿಜ ವ್ಯಾಧಿ' ಎಂದು. ಇವುಗಳಲ್ಲಿ ಮೊದಲನೆಯದು ಮಾನಸಿಕ ವಾದುದಾದರೆ ಮತ್ತೊಂದು ದೈಹಿಕ. ಈ ಆದಿಜ ವ್ಯಾಧಿಯಲ್ಲಿ ಎರಡು ವಿಧಗಳಿವೆ. ಅವುಗಳಲ್ಲಿ ಮೊದಲನೆಯದು 'ಅನಿವಾರ್ಯ'. ಅದು ಹುಟ್ಟು–ಸಾವು. ಇದರಿಂದ ಯಾರೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಹಾಗೂ ತಪ್ಪಿಸಿಕೊಳ್ಳಬೇಕೆಂದರೆ ಆತ್ಮಜ್ಞಾನ ಒಂದರಿಂದ ಮಾತ್ರ ಸಾಧ್ಯ.'

ಎರಡನೆಯದು ಸಾಮಾನ್ಯ ವ್ಯಾಧಿಗಳು. ಅಂದರೆ ಡಯಾಬಿಟೀಸ್, ಬ್ಲಡ್ ಪ್ರೆಶ್ಶರ್, ಹೃದ್ರೋಗ, ಹೆಣ್ಣಿಗೆ ಸಂಬಂಧಿಸಿದಂಥ ಗರ್ಭಕೋಶದ ರೋಗ ಮೊದಲಾದವು. ಇಂಥ ರೋಗಗಳನ್ನು 'ಸೈಕೋ ಸೋಮ್ಯಾಟಿಕ್' ವ್ಯಾಧಿಗಳು ಎನ್ನುತ್ತಾರೆ. ಇವು ಮಾನಸಿಕ ಒತ್ತಡದಿಂದ ಶರೀರದಲ್ಲಿ ಅನೇಕ ಬದಲಾವಣೆಗಳುಂಟಾಗಿ ವ್ಯಾಧಿ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ.

## ನಿವಾರಣಾ ಕ್ರಮ :

ಯೋಗ ಸಾಧನೆ, ಆರೋಗ್ಯಕರವಾದ ವಾತಾವರಣ ಹಾಗೂ ಸತ್ಸಂಗ ಇವುಗಳು ನಿವಾರಣಾ ಕ್ರಮಕ್ಕೆ ಉಪಯುಕ್ತವಾದವುಗಳು. ಯೋಗಾಸನ, ಪ್ರಾಣಾಯಾಮ ಕ್ರಿಯೆ, ಧ್ಯಾನ ಮೊದಲಾದವುಗಳನ್ನು ಅಭ್ಯಸಿಸುವುದರ ಮೂಲಕ ಜೀವನವನ್ನು ಸುಖಮಯವನ್ನಾಗಿಸಿಕೊಳ್ಳಬಹುದು. ಔಷಧಿಗಳನ್ನು ತೆಗೆದುಕೊಂಡಾಗ ಈ ಕೆಲವು ವ್ಯಾಧಿಗಳು ತಾತ್ಕಾಲಿಕ ಉಪಶಮನಗೊಳ್ಳುತ್ತವೆ. ಆದರೆ ಯೋಗಾಭ್ಯಾಸದ ಮೂಲಕ ಆಸ್ತಮ, ಅರ್ಥ್ರೈಟೀಸ್ (ಕೀಲುನೋವು), ಮೈಗ್ರೇನ್ (ತಲೆಯ ಒಂದು ಪಾರ್ಶ್ವ ನೋವು), ಎದೆನೋವು, ಬೆನ್ನುನೋವು ಮೊದಲಾದ ವ್ಯಾಧಿಗಳಿಂದ ನಿರಂತರ ಉಪಶಮನವನ್ನು ಪಡೆಯಬಹುದು. ಇದು ಎಲ್ಲರಿಗೂ ಈ ರೀತಿಯಲ್ಲಿ ಸರಿ ಹೋಗುತ್ತದೆಂದು ಹೇಳಲಾಗುವುದಿಲ್ಲ. ಶ್ರದ್ಧೆ ಹಾಗೂ ನೇಮಗಳಿಂದ ಯೋಗಾಭ್ಯಾಸ ಮಾಡುವವರಿಗೆ ಖಂಡಿತ ಇದು ಫಲಕಾರಿಯಾಗುತ್ತದೆಂದು ಧಾರಾಳವಾಗಿ ಹೇಳಬಹುದು.

## 'ಯೋಗ' ಎಂದರೇನು?

ಇದು ಕೇವಲ ದೈಹಿಕ ವ್ಯಾಯಾಮವಷ್ಟೇ ಅಲ್ಲದೆ ಜೀವನದ ಒಂದು ಪದ್ಧತಿಯೂ ಆಗಿದೆ. ಅನೇಕ ದೇಶಗಳಲ್ಲಿ ವೈದ್ಯರು ಇದನ್ನು 'ಒಳ್ಳೆಯ ಜೀವನದ ಪದ್ಧತಿ' ಎಂದೂ ಹಾಗೂ 'ವ್ಯಾಧಿ ನಿವಾರಕ'ವೆಂದೂ ಹೊಗಳಿದ್ದಾರೆ. ಬಹು ಕ್ಲಿಷ್ಟವಾದ ಹಾಗೂ ಬಹುಕಾಲದಿಂದ ಕಾಡುತ್ತಿರುವ ವ್ಯಾಧಿಗಳನ್ನು ಯೋಗ ಸಾಧನೆಯ ಮೂಲಕ ಗುಣಪಡಿಸಲು ಸಂಶೋಧನೆಗಳು ನಡೆಯುತ್ತಿವೆ. ಸ್ತ್ರೀಯರಿಗೆ ಯೋಗಾಭ್ಯಾಸ ತುಂಬ ಅವಶ್ಯಕ. ಒಬ್ಬ ತಾಯಿ ದೈಹಿಕ ಆರೋಗ್ಯ, ಮಾನಸಿಕ ಸ್ವಾಸ್ಥ್ಯ ಹಾಗೂ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಿದ್ದಲ್ಲಿ ಆಕೆಯ ಕುಟುಂಬ ವರ್ಗವೇ ಆರೋಗ್ಯಕರವಾಗಿದೆಯೆಂದರ್ಥ. ಮನೆಯ ಗೃಹಿಣಿ ವಿದ್ಯಾವಂತಳಾಗಿದ್ದರೆ ಹೆಚ್ಚು ಕಡಿಮೆ ಆಕೆಯ ಕುಟುಂಬದವರೆಲ್ಲರೂ ವಿದ್ಯಾವಂತರಾಗಿರುತ್ತಾರೆ. ಅದೇ ರೀತಿ ಆರೋಗ್ಯವಂತಳಾದ ತಾಯಿಯಾದಲ್ಲಿ ಕುಟುಂಬದ ಸದಸ್ಯರೆಲ್ಲರೂ ಆರೋಗ್ಯವಂತರಾಗಿರುವ ಸಾಧ್ಯತೆ ಬಹಳಷ್ಟಿದೆ.

## ಸ್ತ್ರೀಯರು ಯೋಗಾಭ್ಯಾಸ ಮಾಡಬಹುದೇ?

ಯೋಗಾಭ್ಯಾಸ ಸ್ತ್ರೀಯರಿಗೆ ಸಲ್ಲದೆಂಬ ಒಂದು ತಪ್ಪು ಅಭಿಪ್ರಾಯವಿದೆ. ಈ ಆಧುನಿಕ ಕಾಲದಲ್ಲಿ ಬಹಳಷ್ಟು ಮಂದಿ ಸ್ತ್ರೀಯರು ಯೋಗಾಭ್ಯಾಸ ಮಾಡುತ್ತಿದ್ದರೂ ಸಹ ಈ ತಪ್ಪು ಅಭಿಪ್ರಾಯ ಇನ್ನೂ ಸಂಪೂರ್ಣವಾಗಿ ಬದಲಾಗಿಲ್ಲ.

'ಯೋಗಾಭ್ಯಾಸ'ವೆಂದರೆ, ಬಹಳ ಕಠಿಣವಾದ ಪದ್ಧತಿ – ಕಾಡು ಬೆಟ್ಟ ಸೇರುವವರು, ಬ್ರಹ್ಮಚಾರಿಗಳು, ಅದೂ ಪುರುಷರು ಮಾತ್ರ ಮಾಡಬೇಕು – ಉಳಿದವರು ಮಾಡಿದರೆ ಸಂಸಾರದಲ್ಲಿ ಆಸಕ್ತಿ ಕಡಿಮೆಯಾಗಿ ಬಿಡುವುದೆಂದೂ' ಕೆಲವರಲ್ಲಿ ಅನುಮಾನ ಹಾಗೂ ಭಯ ಇದೆ.

## ಸ್ತ್ರೀಯರಿಗೆ ಸಂಬಂಧಿಸಿದ ವ್ಯಾಧಿಗಳು ಹಾಗೂ ಯೋಗಾಭ್ಯಾಸ :

ಸ್ತ್ರೀಯರಿಗೆ ಸಂಬಂಧಿಸಿದ ವ್ಯಾಧಿಗಳಲ್ಲಿ ಮುಖ್ಯವಾದವುಗಳೆಂದರೆ ಮುಟ್ಟಿನ ದಿನಗಳಲ್ಲಿ ಬರುವ ಹೊಟ್ಟೆನೋವು, ಅಧಿಕ ರಕ್ತಸ್ರಾವ ಹಾಗೂ, ಅಂಥ ಸಮಯದಲ್ಲಿ ಉಂಟಾಗುವ ಮಾನಸಿಕ ಒತ್ತಡ, 'ಹಾರ್ಮೋನ್'ಗಳ ಬದಲಾವಣೆಯಿಂದ ಉಂಟಾಗಬಹುದಾದಂಥ ತೊಂದರೆಗಳು, ಮೊದಲಾದವುಗಳನ್ನು ಯೋಗಾಭ್ಯಾಸದಿಂದ ಹತೋಟಿಯಲ್ಲಿಡಬಹುದು.

ಇಂಥ ರೋಗಗಳ ನಿವಾರಣೆಗಾಗಿ ಎಷ್ಟೋ ಜನರು ಔಷಧಿಯನ್ನು ತೆಗೆದುಕೊಳ್ಳುತ್ತಾರೆ. ಆದರೆ ಇವುಗಳಿಗೆ ಮಾನಸಿಕ ದೌರ್ಬಲ್ಯವೇ ಕಾರಣ. ಪ್ರತಿದಿನ ಯೋಗಾಭ್ಯಾಸ ಹಾಗೂ ಪ್ರಾಣಾಯಾಮ ಮಾಡಿದಲ್ಲಿ ಆರು ತಿಂಗಳು ಅಥವಾ ಒಂದು ವರ್ಷದ ಅವಧಿಯೊಳಗೆ ಖಂಡಿತವಾಗಿಯೂ 'ಯೋಗ'ದ ಪ್ರಯೋಜನ ಮನದಟ್ಟಾಗುತ್ತದೆ.

ಗರ್ಭಕೋಶ ಜಾರಿರುವವರಿಗೂ ಸಹ ವಿಪರೀತ ಕರಣಿ, ಶೀರ್ಷಾಸನ ಹಾಗೂ ಕುಳಿತು ಮಾಡುವ ಕೆಲವು ಆಸನಗಳೂ ನಿವಾರಣಾಕ್ರಮದಲ್ಲಿ ಬಹಳ ಮಟ್ಟಿಗೆ ಸಹಕಾರಿಯಾಗುತ್ತವೆ. ಆದರೆ ವ್ಯಾಧಿಯು ಪ್ರಾರಂಭ ಹಂತದಲ್ಲಿದ್ದಲ್ಲಿ ಮಾತ್ರ ಇದು ಪರಿಣಾಮಕಾರಿಯಾಗುತ್ತದೆ.

ಯೋಗ ಕೇವಲ ಶಾರೀರಿಕ ವ್ಯಾಯಾಮವಲ್ಲ.
ದೇಹ ಮನಸ್ಸಿನ ಸಾಂಗತ್ಯವೇ ಯೋಗದ ಧ್ಯೇಯ.
ಶುದ್ಧ ಚಿತ್ತವಿರುವ ಸಶಕ್ತ ದೇಹ ಯೋಗದಿಂದ ದೊರೆಯಬೇಕಾದ ಸಿದ್ಧಿ. ಶುದ್ಧ ಚಿತ್ತವಿಲ್ಲದ ಯೋಗಾಭ್ಯಾಸ ನಿರರ್ಥಕ.

* ಓದುಗರ ಅನುಕೂಲಕ್ಕಾಗಿ ಇಲ್ಲಿ ಕೆಲವು ಆಸನಗಳ ಚಿತ್ರಗಳನ್ನು ನೀಡಲಾಗಿದೆ.



ಯೋಗಾಭ್ಯಾಸದ ಪರಿಚಯ ನೀಡಿರುವ ಸಾವಿತ್ರಿ ಯವರು ಬೆಂಗಳೂರಿನ ವಿವೇಕಾನಂದ ಯೋಗ ಕೇಂದ್ರದಲ್ಲಿ ತರಬೇತುಗೊಂಡವರು. ಪ್ರಸ್ತುತ ಮದರಾಸಿನ ಅಗರವಾಲಾ ಇನ್‌ಸ್ಟಿಟ್ಯೂಟ್‌ನಲ್ಲಿ ಆರು ವರ್ಷಗಳಿಂದ ಯೋಗಶಿಕ್ಷಕರಾಗಿ ದುಡಿಯುತ್ತಿದ್ದಾರೆ.

# ಆಸನಗಳು - ಅವುಗಳ ಪ್ರಯೋಜನಗಳು

**1) ಅರ್ಧಕಟಿ ಚಕ್ರಾಸನ :** ಮುಂಡ, ಬೆನ್ನಿನ ಸ್ನಾಯುಗಳು, ಯಕೃತ್ತು, ಚೆನ್ನಾಗಿ ಕೆಲಸ ಮಾಡಲೂ, ಬೆನ್ನೆಲುಬಿನ ಸ್ನಾಯುಗಳು ಸಡಿಲವಾಗಲೂ, ಹೊಟ್ಟೆಯ ಪ್ರದೇಶದಲ್ಲಿರುವ ಕೊಬ್ಬನ್ನು ಕರಗಿಸಲೂ ಈ ಆಸನ ಬಹಳ ಪ್ರಯೋಜನಕಾರಿ. ಹಾಗೇ ಬೆಳೆಯದ ಸ್ನಾಯುಗಳು ಸಡಿಲಗೊಂಡು ರಕ್ತ ಚಲನೆ ಸರಾಗಗೊಳ್ಳುತ್ತದೆ.







**3) ಅರ್ಧ ಚಕ್ರಾಸನ :** ಬೆನ್ನೆಲುಬನ್ನು ಸಡಿಲಗೊಳಿಸಿ, ಅದರಲ್ಲಿರುವ ನಾಡಿಗಳಿಗೆ ಪ್ರೇರಣೆ ಉಂಟು ಮಾಡುತ್ತದೆ. ಮುಖಕ್ಕೆ ರಕ್ತ ಪ್ರಸರಣೆಯನ್ನು ಹೆಚ್ಚಿಸುತ್ತದೆ. ಶಿರಸ್ಸಿನ ಹಿಂಭಾಗದಲ್ಲಿರುವ ಆಕ್ಸಿಪಿಟಲ್ ಕಾರ್ಟೆಕ್ಸ್‌ಗೆ ಪ್ರೇರಣೆ ಉಂಟು ಮಾಡಿ, ಕಣ್ಣಿನ ದೋಷಗಳನ್ನು ನಿವಾರಿಸುತ್ತದೆ.

**2) ತ್ರಿಕೋನಾಸನ :** ಕಾಲಿನ ಸ್ನಾಯುಗಳಿಗೆ ಶಕ್ತಿ ನೀಡಿ, ಬೆನ್ನು ನೋವನ್ನು ಕಡಿಮೆ ಮಾಡಲು ಗೂನು, ಚಪ್ಪಟೆಯಾಗಿರುವ ಪಾದಗಳನ್ನು ಸುಧಾರಿಸಲು ಈ ಆಸನ ಪ್ರಯೋಜನಕಾರಿ.



* ಪುಟ ವಿನ್ಯಾಸದ ಅನುಕೂಲಕ್ಕೋಸ್ಕರ ಇಲ್ಲಿ ಯೋಗಾಭ್ಯಾಸದ ಚಿತ್ರಗಳನ್ನು ಹಿಂದುಮುಂದಾಗಿ ನೀಡಲಾಗಿದೆ. ಆದರೆ ಇವುಗಳನ್ನು ಅನುಕ್ರಮವಾಗಿ (1,2,3 ಹೀಗೆ) ಅಭ್ಯಾಸ ಮಾಡಬೇಕು. ಗುರುಮುಖೇನ ಕಲಿಯುವುದು ಒಳ್ಳೆಯದು.



**4) ಪಾದ ಹಸ್ತಾಸನ :** ಬೆನ್ನು ನೋವನ್ನು, ಮಲ ಬದ್ಧತೆಯನ್ನು ನಿವಾರಿಸುತ್ತದೆ. ಋತುಸ್ರಾವದ ಸಮಯದಲ್ಲಿರುವ ಹೊಟ್ಟೆ ನೋವು, ಹೊಟ್ಟೆಯ ಭಾಗದಲ್ಲಿರುವ ಕೊಬ್ಬನ್ನು ಕಡಿಮೆ ಮಾಡುತ್ತದೆ.

**5) ವೃಕ್ಷಾಸನ :** ಸಂಧಿವಾತ (ಕೀಲುರೋಗ)ವನ್ನೂ ನಿವಾರಿಸುತ್ತದೆ. ಸಮತೋಲನ ಹೆಚ್ಚಿಸಿ, ಚಿತ್ತಕಾಗ್ರತೆಗೆ ನೆರವಾಗುತ್ತದೆ.



6) ಪದ್ಮಾಸನ : ಮಂಡಿನೋವಿಗೆ ತುಂಬಾ ಪ್ರಯೋಜನಕಾರಿ. ಧ್ಯಾನ ಮಾಡುವುದಕ್ಕೆ ಹೆಸುರುವಾಸಿಯಾದ ಆಸನ. ಮನಸ್ಸಿಗೆ ನೆಮ್ಮದಿ ನೀಡುತ್ತದೆ. ಈ ಆಸನ ಪ್ರಾಣವು ಮೂಲಾಧಾರ ಚಕ್ರದಿಂದ ಸಹಸ್ರಾರಕ್ಕೆ ಪ್ರವಹಿಸಲು ಸಹಕಾರಿಯಾಗುತ್ತದೆ.



7) ಉಷ್ಟ್ರಾಸನ : ಕುತ್ತಿಗೆ ಬೆನ್ನೆಲುವುರಿತ ಇರುವವರಿಗೆ ಈ ಆಸನ ಪ್ರಯೋಜನಕಾರಿ. ಸೊಂಟನೋವು, ಕಡಿಮೆಯಾಗುತ್ತದೆ. ಆಸ್ತಮಾ ರೋಗಿಗಳಿಗೆ ಶ್ವಾಸಕ್ರಿಯೆ ಶಕ್ತಿಯುತವಾಗುತ್ತದೆ. ಯಕೃತ್ತಿನ ಶಕ್ತಿಯನ್ನು ಕಾರ್ಟೆಕ್ಸನ್ನೂ ಉತ್ತೇಜನ ನೀಡುವುದುಂದ ನೇತ್ರದೋಷಗಳನ್ನೂ ಕಡಿಮೆಗೊಳಿಸುತ್ತದೆ.



8) ಪಶ್ಚಿಮೋತ್ಥಾನಾಸನ : ಮೂತ್ರಕೋಶಗಳು ಚೆನ್ನಾಗಿ ಕೆಲಸ ಮಾಡುತ್ತವೆ. ಹಸಿವು ವರ್ಧಿಸುತ್ತದೆ. ಮಲ ಬದ್ಧತೆಯನ್ನು ನಿವಾರಿಸುತ್ತದೆ. ಹೊಟ್ಟೆಯಲ್ಲಿರುವ ಕೊಬ್ಬನ್ನು ಕಡಿಮೆಗೊಳಿಸುತ್ತದೆ.



9) ವಜ್ರಾಸನ : ಊಟ ಮಾಡಿದ ನಂತರ ಹತ್ತು ನಿಮಿಷಗಳ ಕಾಲ ಈ ಆಸನದಲ್ಲಿದ್ದರೆ ಬೇಗ ಜೀರ್ಣವಾಗುತ್ತದೆ. ಊಟ ಮಾಡಿದ ನಂತರ ಮಾಡಬಹುದಾದ ಆಸನ ಇದೊಂದೇ. ವಾಯು, ಸಯಟಿಕಾ ನೋವು ಮುಂತಾದುವುಗಳನ್ನು ಕಡಿಮೆ ಮಾಡುತ್ತದೆ. ಹೃದಯ ರೋಗಿಗಳೂ ಈ ಆಸನ ಮಾಡಬಹುದು. ಈ ಆಸನದಲ್ಲಿ ಧ್ಯಾನ ಮಾಡಬಹುದು.



18) ಅರ್ಧ ಮತ್ಸ್ಯೇಂದ್ರಾಸನ : ಯಕೃತ್ತು, ಗುಲ್ಮ ಮೂತ್ರಪಿಂಡಗಳನ್ನು ಉತ್ತೇಜನಗೊಳಿಸುತ್ತದೆ. ಮಧುಮೇಹ ಇದ್ದವರಿಗೆ ಇದು ಉತ್ತಮ ಆಸನ.



**10) ಭುಜಂಗಾಸನ :** ಹೆಚ್ಚಿನ ಶ್ರಮದಿಂದಾಗಿ ಬರುವ ಸೊಂಟನೋವನ್ನು ಕಡಿಮೆ ಮಾಡುತ್ತದೆ. ಕುತ್ತಿಗೆ ಬೆನ್ನೆಲುಬುರಿತ ಮತ್ತು ಉಬ್ಬಸ ಇದ್ದವರಿಗೆ ಈ ಆಸನ ತುಂಬ ಪ್ರಯೋಜನಕಾರಿ.

**11) ಶಲಭಾಸನ :** ಮಲಬದ್ಧತೆಯನ್ನು ಕಡಿಮೆ ಮಾಡುತ್ತದೆ. ಯಕೃತ್ತು, ಕರುಳು, ಮೂತ್ರಕೋಶ ಇವುಗಳಿಗೆ ತುಂಬ ಪ್ರಯೋಜನಕಾರಿ. ಋತುಸ್ರಾವಕ್ಕೆ ಸಂಬಂಧಿಸಿದ ಹಲವು ತೊಂದರೆಗಳಿಗೆ ಇದು ಒಳ್ಳೆಯ ನಿವಾರಣೆ ನೀಡುತ್ತದೆ.



**12) ಧನುರಾಸನ :** ಜೀರ್ಣಶಕ್ತಿ ಹೆಚ್ಚುತ್ತದೆ. ಹೊಟ್ಟೆಯಲ್ಲಿರುವ ಕೊಬ್ಬನ್ನು (ಬೊಜ್ಜನ್ನು) ಕರಗಿಸುತ್ತದೆ. ಬೆನ್ನೆಲುಬಿನ ಸ್ನಾಯುಗಳನ್ನೂ ಸಡಲಿಸುತ್ತದೆ. ಉಬ್ಬಸ ಇದ್ದವರಿಗೆ ಇದು ಒಳ್ಳೆಯ ಆಸನ.







**13) ಮಕರಾಸನ :** ರಕ್ತದೊತ್ತಡ ಇದ್ದವರಿಗೆ ಇದು ತುಂಬ ಪ್ರಯೋಜನಕಾರಿ. ತುಂಬಾ ಆಯಾಸವಾದಾಗ ಈ ಆಸನ ಮಾಡಿದರೆ, ದಣಿವಾರುತ್ತದೆ.

**14) ಸರ್ವಾಂಗಾಸನ :** ಆಸನಗಳಲ್ಲೇ ಇದಕ್ಕೆ ರಾಣಿಯ ಸ್ಥಾನ. ಥೈರಾಯ್ಡ್ ಮತ್ತು ಆಡ್ರಿನಲ್ ಗ್ರಂಥಿಗಳೂ ಉತ್ತೇಜಿಸುತ್ತದೆ. ಉಬ್ಬಸ, ಮಲಬದ್ಧತೆ ಮುಂತಾದವುಗಳಿಗೆ ಉಪಶಮನ ನೀಡುತ್ತದೆ. ಪಚನಾಂಗಗಳು ಮತ್ತು ಶ್ವಾಸಕೋಶಗಳು ಉತ್ತಮವಾಗಿ ಕೆಲಸ ಮಾಡುತ್ತವೆ. ಮೂಲವ್ಯಾಧಿಯಿಂದ ನರಳುವವರಿಗೆ ಇದು ಪ್ರಯೋಜನಕಾರಿ. ಕುತ್ತಿಗೆ, ಬೆನ್ನೆಲುಬುರಿತ ಇರುವವರು ಈ ಆಸನ ಮಾಡಬಾರದು.



15) ವಿಪರೀತ ಕರಣೆ :
ಇದು ಸರ್ವವ್ಯಾಧಿ ನಿವಾರಣ. ಹೆಚ್ಚು ಹೊತ್ತು ನಿಂತು ಕೆಲಸ ಮಾಡುವವರಿಗೆ ನರಗಳ ಸಡಿತ, ಹಾಗೂ ಕಾಲು ಬಾತುಕೊಳ್ಳುವುದು ಮುಂತಾದ ತೊಂದರೆಗಳಿರುತ್ತವೆ. ವಿಪರೀತ ಕರಣಿ ಈ ತೊಂದರೆಗಳನ್ನು ನಿವಾರಿಸುತ್ತದೆ.

16) ಮತ್ಸ್ಯಾಸನ : ಇದು ಉಬ್ಬಸ ಇರುವವರಿಗೆ ಒಳ್ಳೆಯದು. ಇದು ಜೀರ್ಣಶಕ್ತಿಯನ್ನು ಹೆಚ್ಚಿಸುತ್ತದೆ.



17) ಪವನ ಮುಕ್ತಾಸನ : ಇದು ಜಠರದ ತೊಂದರೆಗಳನ್ನು ನಿವಾರಿಸಿ, ಬೊಜ್ಜನ್ನು ಕಡಿಮೆ ಮಾಡಿ ಹಸಿವನ್ನು ಹೆಚ್ಚಿಸುತ್ತದೆ.



19) ಪ್ರಾಣಾಯಾಮ :

1) ನಾಡಿಶುದ್ಧಿ ಪ್ರಾಣಾಯಾಮ : ಇದನ್ನು ಮೂರರಿಂದ ಆರು ನಿಮಿಷಗಳವರೆಗೆ ಮಾಡಬಹುದು. ನಮ್ಮ ಶರೀರದಲ್ಲಿರುವ ನಾಡಿಗಳನ್ನು ಶುದ್ಧಿ ಮಾಡಿ ದೇಹ ಹಗುರವಾಗಿರುವಂತೆ ಮಾಡುತ್ತದೆ. ಕಣ್ಣಲ್ಲಿ ಕಾಂತಿಯನ್ನೂ, ಹಸಿವನ್ನೂ ಹೆಚ್ಚಿಸುತ್ತದೆ.



20) ಶವಾಸನ : ಹೃದಯ ವಿಪರೀತ ಭಾರವಿಲ್ಲದೆ ಹಗುರವಾಗಿರುತ್ತದೆ. ಮಾನಸಿಕ ಉದ್ವೇಗ ಮತ್ತು ಅದಕ್ಕೆ ಸಂಬಂಧಿಸಿದ ವ್ಯಾಧಿಗಳನ್ನು ಉಪಶಮನ ಮಾಡಲು ಈ ಆಸನ ಸಹಾಯಕಾರಿಯಾಗಿದೆ.



ಉದ್ವೇಗದಿಂದ ಆಗುವ ರಕ್ತದೊತ್ತಡ, ನಿದ್ರಾರಾಹಿತ್ಯ, ದೇಹಾಲಸ್ಯ ಮುಂತಾದವನ್ನು ಕಡಿಮೆ ಮಾಡಿ ಮಾನಸಿಕ ಸ್ಥಿಮಿತ ಸಾಧಿಸಲು ಈ ಆಸನ ಸಹಾಯಕವಾಗಿದೆ.

# ಸಾರ್ಥಕತೆ



–ಗಾಯತ್ರಿಮೂರ್ತಿ

ಒಪ್ಪವಾಗಿ ಮಾಡಿಟ್ಟಿದ್ದ ತೆಂಗಿನಕಾಯಿಹೂರಣದ ಒಬ್ಬಟ್ಟುಗಳನ್ನು ಒಂದೊಂದಾಗಿ ಎಣಿಸಿ ಪಕ್ಕಕ್ಕಿಡುತ್ತಿದ್ದರು ಪಾತಮ್ಮ. ಒಟ್ಟು ಇನ್ನೂರು ಒಬ್ಬಟ್ಟಾಗಿರಬೇಕೆಂದು ಅವರ ಅಂದಾಜು. ನಾಳೆ ದೀಪಾವಳಿ. ಅದಕ್ಕಾಗಿಯೇ ಈ ಒಬ್ಬಟ್ಟಿನ ಸಡಗರ. ಇನ್ನೂರು ಒಬ್ಬಟ್ಟುಗಳಲ್ಲಿ ಒಂದು ನೂರು ಒಬ್ಬಟ್ಟು ಸಾಹುಕಾರ್ ಮಂಜಪ್ಪನವರ ಮನೆಗಾಗಿ. ಮೂವತ್ತು ಸಾವಿತ್ರಮ್ಮನವರ ಮನೆಗೆ. ಸರಸ್ವತಮ್ಮ ತಮಗೆ ಮೂವತ್ತು ಒಬ್ಬಟ್ಟು ಬೇಕೆಂದು ಹೇಳಿದ್ದಾರೆ. ಉಳಿದ ನಲವತ್ತು ಒಬ್ಬಟ್ಟು ಬೆಳಗ್ಗಿನ ವೇಳೆಗೆ ಖರ್ಚಾಗಿ ಅದೂ ಸಾಲುವುದಿಲ್ಲ. ಎಷ್ಟೋ ಜನರು ನಿರಾಶರಾಗಿ ಹೋಗುತ್ತಾರೆ. ತಾವು ಮಾಡುವ ಒಬ್ಬಟ್ಟಿನ ರುಚಿಯ ಮಹತ್ವ ಹಾಗಿದೆ ಎಂದುಕೊಂಡು ಪಾತಮ್ಮ ಒಬ್ಬಟ್ಟಿನ ರಾಶಿಯತ್ತ ಹೆಮ್ಮೆಯಿಂದ ನೋಡಿದರು.

ಹಬ್ಬದ ಸಾಲು ಬಂತೆಂದರೆ ಹೀಗೆ. ಪಾತಮ್ಮನಿಗೆ ಬಿಡುವೇ ಇಲ್ಲ. ನಾನಾತರದ ಸಿಹಿ ತಿಂಡಿಗಳನ್ನು ಮಾಡಿಕೊಡಲು ಕರೆ. ಎಲ್ಲ ರೀತಿಯ ತಿಂಡಿಗಳನ್ನು ಮಾಡಿದರೂ ಪಾತಮ್ಮ 'ಒಬ್ಬಟ್ಟು ಪಾತಮ್ಮ' ಎಂದೇ ಹೆಸರು ಗಳಿಸಿದ್ದಾರೆ. ಅವರು ಮಾಡುವ ಒಬ್ಬಟ್ಟಿನ ರುಚಿಯೇ ಇದಕ್ಕೆ ಕಾರಣ.

ನಗರದ ಯಾಂತ್ರಿಕ ಬದುಕಿನಲ್ಲಿ ಒಬ್ಬಟ್ಟು ಮಾಡಲು ಗಂಟೆಗಟ್ಟಲೆ ದೇಹಶ್ರಮ, ಕಾಲವ್ಯಯ ಮಾಡಲು ಎಷ್ಟು ಜನ ಸಿದ್ಧರಿರುತ್ತಾರೆ? ಆದರೆ ಒಬ್ಬಟ್ಟೆಂದರೆ ಯಾರಿಗೆ ತಾನೇ ಇಷ್ಟವಿಲ್ಲ? ಅತ್ಯಂತ ರುಚಿಕರ, ಹೆಚ್ಚು ದುಬಾರಿಯಲ್ಲದ ಪಾತಮ್ಮ ಮಾಡುವ ಒಬ್ಬಟ್ಟನ್ನು ಅದಕ್ಕೇ ಜನ ನಾಮುಂದು ತಾ ಮುಂದು ಎಂದು ಕೊಳ್ಳುತ್ತಾರೆ. ಈಗೀಗ ಪಾತಮ್ಮ ಹದಿನೈದು ದಿನ ಮುಂಚಿತವಾಗಿ ಆರ್ಡರ್ ಕೊಟ್ಟವರಿಗೆ ಮಾತ್ರ ಮಾಡಿಕೊಡುತ್ತಾರೆ.

ಮಾಡಿದ್ದನ್ನೆಲ್ಲಾ ಎತ್ತಿಡುತ್ತಿದ್ದಂತೆಯೇ, "ನಿನಗೆಷ್ಟು ಸಲ ಹೇಳ್ಲಿ? ಈ ಕೂಲಿ ಕೆಲಸ ಸಾಕಿನ್ನು ಅಂತ ಎಷ್ಟು ಹೇಳಿದ್ರೂ ನೀನು ಕೇಳೋದೇ ಇಲ್ವಲ್ಲ" ಎಂದು ಮಂಜುನಾಥ ಸಿಡುಕುತ್ತ ಒಳಗೆ ಬಂದಿದ್ದು ಗೊತ್ತಾಯಿತು. ಓ, ಬಾಗಿಲಿಗೆ ಬರುತ್ತಲೇ ಅವನಿಗೆ ಒಬ್ಬಟ್ಟಿನ ಸುವಾಸನೆ ಬಡಿದಿರಬೇಕು ಎಂದುಕೊಂಡರು ಪಾತಮ್ಮ

ಅಡುಗೆ ಮನೆ ಬಾಗಿಲಲ್ಲಿ ಬಂದು ನಿಂತು ಮತ್ತದೇ ಮಾತನ್ನು ಮಂಜುನಾಥ ಹೇಳಿದಾಗ,

"ಅನ್ನ ಕೊಡೋ ವೃತ್ತೀನಾ ಕೂಲಿ ಕೆಲಸ ಅಂತ ಯಾಕೆ ಹೀಯಾಳಿಸ್ತೀಯಾ ಮಂಜು? ಇದೇ ಕೆಲಸಾನೇ ಅಲ್ವಾ ನಮಗೆ ಇಷ್ಟು ದಿನ ಎರಡು ಹೊತ್ತು ಅನ್ನ ನೀಡಿ ಕಾಪಾಡಿದ್ದು. ಹಾಗೆಲ್ಲಾ ದುಡುಕು ಮಾತಾಡ್ಬಾರ್ದಪ್ಪಾ" ಎಂದರು ಪಾತಮ್ಮ ಶಾಂತವಾದ ದನಿಯಲ್ಲಿ. ಪಾತಮ್ಮನ ಸ್ವಭಾವಾನೇ ಹಾಗೆ. ಮನಸ್ಸಿನಲ್ಲಿ ಜ್ವಾಲಾಮುಖಿಯೇ ಕುದಿಯುತ್ತಿದ್ದರೂ ಅವರದು ಶಾಂತ ಮುಖಮುದ್ರೆ. ಮೃದುವಾದ ದನಿ ಬಿದ್ದೇ ಇಲ್ಲ.

"ಅಲ್ಲಮ್ಮಾ ಆವಾಗ ಅವಶ್ಯಕತೆ ಇತ್ತು. ಮಾಡ್ತಿದ್ದೆ. ಈಗ್ಯಾಕೆ ನೀನು ಕಷ್ಟ ಪಡ್ಬೇಕು? ನನಗೆ ಕೆಲಸ ಸಿಗೋವರ್ಗೂ ಮಾಡ್ತೀನಿಂದೆ. ಈಗ ನನಗೆ ಕೆಲಸ ಸಿಕ್ಕಿದೆಯಲ್ಲಾ. ಇನ್ನೂ ಯಾಕೆ ಇಲ್ಲದ ರಗಳೆ ಹಚ್ಕೊಂಡು ಒದ್ದಾಡ್ತೀಯಾ?" ಮಂಜುನಾಥ ಇನ್ನೂ ಅಸಹನೆಯಿಂದಲೇ ಹೇಳಿದ.

"ಸರಿಯಪ್ಪ, ನಿನಗೇನೋ ಕೆಲಸ ಸಿಕ್ತು. ನೀನೊಂದು ನೆಲೆಗೆ ನಿಂತೆ. ಶ್ರೀನಾಥನ ವಿದ್ಯಾಭ್ಯಾಸ ಆಗ್ಬೇಡ್ವೇ? ಸರಳಾ ಡಿಗ್ರಿ ಮುಗಿಸಿದ ಮೇಲೆ ಅವಳಿಗೆ ಮದುವೆ ಮಾಡ್ಬೇಕು. ಎಲ್ಲಾ ಜವಾಬ್ದಾರೀನೂ ವಹಿಸ್ಕೋತೀಯಾ? ಹಾಗಿದ್ರೆ ಇವತ್ತೇ ಈ ಕೆಲಸಕ್ಕೆ ನಮಸ್ಕಾರ ಹಾಕ್ತೀನಿ" ಎಂದು ಹೇಳಿ ಪಾರ್ವತಮ್ಮ ಮಗನ ಮುಖವನ್ನೇ ನೋಡಿದರು.

"ಸರಿ, ಸರಿ, ಏನೋ ಕಷ್ಟ ಪಡ್ತೀಯಾಂತ ನಾನು ಹೇಳಿದ್ರೆ ನೀನು ಇಲ್ಲದ ಪುರಾಣ ಬಿಚ್ತೀಯಾ. ನಿನ್ನಿಷ್ಟ ಏನಾದ್ರೂ ಮಾಡ್ಕೋ" ಎಂದು ಒರಟಾಗಿ ನುಡಿದು ಮಂಜುನಾಥ ಕೈಕಾಲು ತೊಳೆಯಲು ಬಚ್ಚಲು ಮನೆಗೆ ಹೋದ..

ತಾವು ಜವಾಬ್ದಾರಿಯ ವಿಷಯ ಮಾತನಾಡಿದ ತಕ್ಷಣ ಹೇಗೆ ನುಣುಚಿಕೊಂಡ? ಇವನನ್ನು ನೆಚ್ಚಿಕೊಂಡಿದ್ದರೆ ಎಲ್ಲಾ ಆದ ಹಾಗೆ. ಅವರಿದ್ದಿದ್ರೆ ನಾನು ಯಾಕೆ ಹೀಗೆ ಕಷ್ಟ ಪಡ್ಬೇಕಿತ್ತು? ಪುಣ್ಯಾತ್ಮರು. ನಡುನೀರಲ್ಲಿ ಕೈಬಿಟ್ಟು ಹೊರಟು ಹೋದರು. ಬದುಕಿದಾರೋ ಇಲ್ಲವೋ ಒಂದೂ ತಿಳಿಯದು. ಇದೇ ತಾಕಲಾಟದಲ್ಲೇ ಹತ್ತು ವರ್ಷಗಳು ಉರುಳಿ ಹೋದುವು. ಅದೂ ಯಾವ ರೀತಿಯಲ್ಲಿ...

ಬೆಳಕಿನ ಹಬ್ಬ ದೀಪಾವಳಿ. ಹತ್ತು ವರ್ಷದ ಹಿಂದೆ, ದೀಪಾವಳಿಗೆ ಎರಡೇ ದಿನ ಮುಂಚೆ ತಮ್ಮ ಬಾಳು ಅಂಧಕಾರಮಯವಾಯಿತು.

* * * *

ಗಂಡ, ಹೆಂಡತಿ ಮತ್ತು ಮೂವರು ಮಕ್ಕಳ ಪುಟ್ಟ ಸಂಸಾರ. ನೆಮ್ಮದಿಯ ಜೀವನ ಎನ್ನಲಾಗದಿದ್ದರೂ, ಎರಡು ಹೊತ್ತು ಊಟಕ್ಕೆ ಮೋಸವಿಲ್ಲದ ಆರ್ಥಿಕ ಪರಿಸ್ಥಿತಿ. ಸಾಧಾರಣ ಕೆಲಸದಲ್ಲಿದ್ದ ವೆಂಕಪ್ಪಯ್ಯ

ಹೆಂಡತಿ ಮಕ್ಕಳನ್ನು ಕೈಲಾದ ಮಟ್ಟಿಗೆ ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದರು.

ದೂರದ ಹಳ್ಳಿಯೊಂದರಲ್ಲಿ ವೆಂಕಪ್ಪಯ್ಯನ ತಂದೆ ತಾಯಿಯ ವಾಸ. ವ್ಯವಸಾಯ ಮಾಡಿಕೊಂಡು ಅದರಲ್ಲೇ ಜೀವನ ನಿರ್ವಹಣೆ. ಆದ್ದರಿಂದಲೇ ಅವರು ಮಗನೊಂದಿಗೆ ನಗರಕ್ಕೆ ಬರಲು ನಿರ್ಧರಿಸಿದ್ದರು. ಆಗಾಗ್ಗೆ ಹಳ್ಳಿಗೆ ಹೋಗಿ ವೆಂಕಪ್ಪಯ್ಯ ತಂದೆತಾಯಿ ಯೊಂದಿಗೆ ಒಂದೆರಡು ದಿನ ಇದ್ದು ಬರುತ್ತಿದ್ದರು.

ಹತ್ತು ವರ್ಷಗಳ ಹಿಂದೆ..... ದೀಪಾವಳಿಗೆ ಎರಡು ದಿನ ಮುಂಚೆ, ವೆಂಕಪ್ಪಯ್ಯನಿಗೆ ತಂದೆಯಿಂದ ಪತ್ರ ಬಂತು.. 'ನಿನ್ನ ತಾಯಿ ಜ್ವರ ಬಂದು ಮಲಗಿದ್ದಾಳೆ. ನಿನ್ನನ್ನು ನೋಡಬೇಕೆಂದು ಹಂಬಲಿಸುತ್ತಾಳೆ. ಬಂದು ಹೋಗು' ಎಂದು. ಹಬ್ಬ ಕಳೆಯಲಿ ನಂತರ ಹೋಗಿ ಬರ್‍ಲಿ ನಂತರ ಹೋಗಿ ಬನ್ನಿ ಎಂಬ ಹೆಂಡತಿಯ ಮಾತಿಗೆ ವೆಂಕಪ್ಪಯ್ಯ ಕಿವಿಗೊಡಲಿಲ್ಲ. ತಾಯಿಯನ್ನು ನೋಡಿ ಬರಲು ಹಳ್ಳಿಗೆ ಹೋದರು. ಹೋದವರು ಮತ್ತೆ ಹಿಂತಿರುಗಿ ಬರಲಿಲ್ಲ. ವಿಚಾರಿಸಿದರೆ ಅವರು ಹಳ್ಳಿಗೂ ಹೋಗಿರಲಿಲ್ಲ. ಹೇಳದೆ ಕೇಳದೆ ಮತ್ತೆಲ್ಲಿ ಹೋದರು? ಅವರು ಹಳ್ಳಿಗೆ ಹೊರಟ ದಿನವೇ ಆ ಹಾದಿಯಲ್ಲೊಂದು ಬಸ್ಸು ಕೊರಕಲಿಗೆ ಬಿದ್ದು ಹತ್ತಾರು ಜನರು ಮೃತಪಟ್ಟಿದ್ದರು. ಆದರೆ ಅಲ್ಲಿ ವೆಂಕಪ್ಪಯ್ಯನ ಹೆಣ ಇರಲಿಲ್ಲ. ಮತ್ತೆ? ವೆಂಕಪ್ಪಯ್ಯ ಸತ್ತರೇ? ಹಾಗಿದ್ದರೆ ಹೆಣ ಎಲ್ಲಿ? ಬದುಕಿರುವರೇ? ಕೆಲಸ, ಬದುಕು, ಹೆಂಡತಿ ಮಕ್ಕಳನ್ನು ಬಿಟ್ಟು ಹೋಗುವ ಪ್ರಮೇಯ ವೇನಿತ್ತು? ಎಲ್ಲಾ ತ್ಯಜಿಸಿ ಹೋದರು ಎನ್ನಲು ಸಂಸಾರದಲ್ಲಿ ಅಂತಹ ಜಂಜಾಟವೇನೂ ಇರಲಿಲ್ಲ. ಹಾಗಿದ್ದರೆ ವೆಂಕಪ್ಪಯ್ಯ ಎಲ್ಲಿ? ಈ ಪ್ರಶ್ನೆಗೆ ಮಾತ್ರ ಉತ್ತರ ಸಿಗಲಿಲ್ಲ.

ವೆಂಕಪ್ಪಯ್ಯ ಊರಿಗೆ ಹೊರಟ ದಿನ, ಬಸ್ ಅಪಘಾತ ನಡೆದದ್ದು, ಎಲ್ಲವನ್ನೂ ಜೋಡಿಸಿ ಜನರು ಅವರು ಸತ್ತರೆಂದೇ ತೀರ್ಮಾನಕ್ಕೆ ಬಂದರು. "ಹೆಣ ತೋರಿಸಿ, ಹಾಗಿದ್ದರೆ ಮಾತ್ರ ನಾನು ನಂಬುವುದು" ಎಂದು ಪಾತಮ್ಮ ವಾದಿಸಿದಾಗ, "ಹೆಣ ಕಾಡು ಪ್ರಾಣಿಗಳ ಪಾಲಾಗಿರಬೇಕು., ಎಲ್ಲಿ ಸಿಗುತ್ತೆ?" ಎಂಬ ಸಿದ್ಧ ಉತ್ತರ ಬಂತು. ನೆರೆ ಹೊರೆ ಹಾಗೂ ಬಂಧು ಬಳಗದವರಿಗೆ ಪಾತಮ್ಮ ವಿಧವೆಯ ವೇಷ ಧರಿಸುವವರೆಗೆ ನೆಮ್ಮದಿಯಿಲ್ಲ. ನಾನಾ ರೀತಿಯಲ್ಲಿ ಚುಚ್ಚ ಮಾತನಾಡಿದರು. ಮನಸ್ಸು ನಿರಾಕರಿಸುತ್ತಿದ್ದರೂ, ಬಲವಂತದಿಂದ ಪಾತಮ್ಮ ಕುಂಕುಮ, ಬಳೆ, ಮಾಂಗಲ್ಯ ತ್ಯಜಿಸಿ ವಿಧವೆಯ ವೇಷ ಧರಿಸಿದರು. ಅಷ್ಟಾದ ಮೇಲೆ ಜನರು ತಮ್ಮ ಕರ್ತವ್ಯ ಮುಗಿಯಿತೆಂದು ನೆಮ್ಮದಿಯ ನಿಟ್ಟುಸಿರು ಬಿಟ್ಟು, ಪಾತಮ್ಮನನ್ನೂ, ಅವಳ ಮಕ್ಕಳನ್ನೂ ಮರೆತರು.

ಅಲ್ಲಿಂದ ಪಾತಮ್ಮನ ಜವಣೆ ಆರಂಭ. ಕೈಲಿದ್ದ ಪುಡಿಗಾಸು, ಕಷ್ಟಪಟ್ಟು ಮಾಡಿಸಿಕೊಂಡಿದ್ದ ಒಂದೆಳೆ ಚಿನ್ನದ ಸರ, ಕಿವಿಯ ಓಲೆ, ಮೂಗುತಿ ಎಲ್ಲಾ ಮಾರಾಟವಾಯಿತು. ಅದರಿಂದ ಬಂದ ಹಣ ಎಷ್ಟು ದಿನಗಳ ಕಾಲ ಅನ್ನ ನೀಡೀತು? ಒಂದೆರಡು ದಿನ ಒಂದಿಬ್ಬರು ನೆಂಟರು 'ಅಯ್ಯೋ ಪಾಪ' ಎಂದು ಮನಕರಗಿ ಊಟ ಕೊಟ್ಟು ಕೈ ಬಿಟ್ಟರು. ಮುಂದೆ?

ಕೆಲಸಕ್ಕಾದರೂ ಸೇರೋಣವೆಂದರೆ ಪಾತಮ್ಮ ವಿದ್ಯಾವಂತೆಯಲ್ಲ. ಮಂಜುನಾಥ ಹನ್ನೆರಡು ವರ್ಷದ ಹುಡುಗ. ಶ್ರೀನಾಥನಿಗೆ ಎಂಟು ವರ್ಷ. ಸರಳಾ ಆರು ವರ್ಷದ ಹಸುಳೆ. ಯಾರನ್ನು ಕೆಲಸಕ್ಕೆ ಕಳಿಸುವುದು? ಹಣ ಸಂಪಾದನೆಯಿಲ್ಲದೆ ಹೊಟ್ಟೆ ತುಂಬುವುದೇ? ಮಕ್ಕಳ ಹಸಿದ ಮುಖ ನೋಡಲಾಗದು. ಹೊಟ್ಟೆ ತುಂಬಿಸಲು ಕೈಲಾಗದು. ನಾಲ್ಕಾರು ದಿನ ಕಡಲೆ ಪುರಿ ತಿಂದು ಮಲಗಿದ್ದು ಉಂಟು. ಅದನ್ನು ಕೊಳ್ಳಲೂ ಮೂರು ಕಾಸಿಲ್ಲ. ನಡುಪ್ರವಾಹದಲ್ಲಿ ಸಿಕ್ಕಂತಹ ಅನುಭವ. ಆತ್ಮಹತ್ಯೆಯ ಯೋಚನೆ ಹತ್ತಾರು ಬಾರಿ ಕಾಡಿತು. ಸತ್ತರೆ ತನ್ನ ಸಮಸ್ಯೆಯೇನೋ ತೀರಿದಂತೆ. ಆದರೆ ಮಕ್ಕಳ ಗತಿ? ಊಹಿಸಲೂ ಆಗದು. ಕೊನೆಗೆ ಪಾತಮ್ಮ ಆತ್ಮಹತ್ಯೆ ಯೋಚನೆ ಕೈ ಬಿಟ್ಟರು. ಈಸ ಬೇಕು, ಇದ್ದು ಜೈಸಬೇಕು ಎಂದು ದೃಢ ನಿರ್ಧಾರ ಮಾಡಿದರು.

ಭಿಕ್ಷೆ ಬೇಡಲು ಮಂಜುನಾಥ ಬಿಲ್‌ಕುಲ್ ಒಪ್ಪ ಲಿಲ್ಲ. ಶ್ರೀನಾಥ ಮೊದಲು ಹಿಂಜರಿದರೂ ಹಸಿವಿನ ಸಂಕಟ ತಾಳಲಾರದೆ ಒಪ್ಪಿಕೊಂಡ. ದೂರದ ಮನೆಗಳಿಗೆ ಶ್ರೀನಾಥ ಭಿಕ್ಷೆ ಬೇಡಲು ಹೋಗುತ್ತಿದ್ದ. ಹೀಗೆಯೇ ನಾಲ್ಕಾರು ತಿಂಗಳು ಕಳೆದಿರಬಹುದು.

ಒಂದು ದಿನ ಶ್ರೀನಾಥ ವಿಶಾಲಾಕ್ಷಮ್ಮ ಎಂಬುವರ ಮನೆ ಬಾಗಿಲಲ್ಲಿ ಭಿಕ್ಷೆ ಬೇಡಿದ. ಒಂದು ಗಡ್ಡೆ ಅನ್ನ ಸಾರು ಪಾತ್ರೆಗೆ ಹಾಕಿ, ವಿಶಾಲಾಕ್ಷಮ್ಮ ಸೊರಗಿದ ಶ್ರೀನಾಥನ ಮುಖವನ್ನೇ ನೋಡಿದರು. ಇನ್ನೇನು ಹೊರಡುವುದರಲ್ಲಿದ್ದ ಅವನನ್ನು ತಡೆದು,

"ನೀವು ಬ್ರಾಹ್ಮಣರೇನೋ?" ಎಂದು ಕೇಳಿದರು.

ಶ್ರೀನಾಥ 'ಹುಂ' ಎಂದು ತಲೆಯಾಡಿಸಿದ.

'ಭಿಕ್ಷೆ ಬೇಡೋ ಅಂತಹುದು ಏನಾಯಿತಪ್ಪ? ಅಪ್ಪ ಇಲ್ಲವಾ?" ಎಂದರು ಮರುಗಿ.

ಇಲ್ಲವೆನ್ನುವಂತೆ ಶ್ರೀನಾಥ ತಲೆಯಾಡಿಸಿದ.

"ಸ್ಕೂಲಿಗೆ ಹೋಗ್ತಿದೀಯಾ?" ಎಂದು ಕೇಳಿದರು ಕುತೂಹಲದಿಂದ.

"ಹೋಗ್ತಿದ್ದೆ. ಈ ವರ್ಷ ಬಿಟ್ಬಿಟ್ಟೆ" ಶ್ರೀನಾಥ ತಲೆ ತಗ್ಗಿಸಿ ನುಡಿದ.

"ನಿಮ್ಮಮ್ಮ ಇದಾರಾ?"

"ಹುಂ"

"ಹಾಗಿದ್ರೆ ನಾಳೆ ಕರ್‍ಕೊಂಡು ಬಾ. ಮರೀಬೇಡ" ಎಂದು ಹೇಳಿ ವಿಶಾಲಾಕ್ಷಮ್ಮ ಹೇಳಿ ಕಳುಹಿಸಿದರು.

ಶ್ರೀನಾಥ ಮನೆಗೆ ಬಂದ ಮೇಲೆ ಚಾಚೂ ತಪ್ಪದಂತೆ ಈ ಮಾತುಕತೆಯ ವರದಿ ಒಪ್ಪಿಸಿದ. ಪಾತಮ್ಮನಿಗೆ ನಿರೀಕ್ಷೆಯ ಕುತೂಹಲವನ್ನು ದಿನ ಪೂರ್ತಿ ಸಹಿಸಲಾಗಲಿಲ್ಲ. ಅಂದು ಸಂಜೆಯೇ ಮಗ ನೊಡನೆ ವಿಶಾಲಾಕ್ಷಮ್ಮನ ಮನೆಗೆ ಬಂದರು.

ವಿಶಾಲಾಕ್ಷಮ್ಮ ಹೆಸರಿಗೆ ತಕ್ಕಂತೆ ವಿಶಾಲ ಬುದ್ಧಿಯುಳ್ಳವರು. ಯಾರೇ ಆಗಲಿ, ತಮ್ಮಿಂದಾದ ಸಹಾಯವನ್ನು ನಿರ್ವಂಚನೆಯಿಂದ ಮಾಡುವ ಸ್ವಭಾವ ಅವರದು. ಮನೆಗೆ ಬಂದ ತಾಯಿ ಮಗನನ್ನು

## ನಂಬಿಕೆಯೇ ಬಂದೋಬಸ್ತು

ಎಂತಹ ಬಿಗಿ ಬಂದೋಬಸ್ತನ್ನೂ ಒಡೆದು ಕಳ್ಳತನ ಮಾಡುವ, ವಿವಿಧ ತಂತ್ರಗಳನ್ನೂ ಉಪ ಯೋಗಿಸಿ ಸಾರ್ವಜನಿಕರ ಹಣವನ್ನು ಲೂಟಿ ಮಾಡುವ ಈ ಹಗಲು ದರೋಡೆಯ ಕಾಲದಲ್ಲಿ ಬಾಗಿಲುಗಳಿಲ್ಲದ ಮನೆಗಳನ್ನೂ, ಪೋಲೀಸ್ ಠಾಣೆ ಇಲ್ಲದ ಊರನ್ನೂ ಕಾಣಲು ಸಾಧ್ಯವೆ? ಮಹಾರಾಷ್ಟ್ರದ ಶಿಂಗ್ನಾಪೂರ ಎಂಬ ಹಳ್ಳಿ ಇಂತಹ ವಿಶೇಷ ಮೆರೆದಿದೆ.

ಅಹಮದ್ ನಗರದಿಂದ 30 ಕಿ.ಮೀ. ದೂರ ದಲ್ಲಿರುವ ಶಿಂಗ್ನಾಪುರದಲ್ಲಿರುವ ತಾರಸಿ ಮನೆಗಳೂ ಇವೆ, ಹುಲ್ಲಿನ ಜೋಪಡಿಗಳೂ ಇವೆ. ಆದರೆ ಇವೆಲ್ಲ ವುಗಳಿಗೂ ಇರುವ ವಿಶಿಷ್ಟ ಸಾಮ್ಯವೆಂದರೆ ಅಲ್ಲಿನ ಯಾವ ಮನೆಗಳಿಗೂ ಬಾಗಿಲುಗಳಿಲ್ಲ. ಆ ಊರಿನ ಗ್ರಾಮ ದೇವರು ಶಾಣಿ ಭಗವಾನ್. ಈ ಗ್ರಾಮದೇವರ ದೇವಸ್ಥಾನಕ್ಕೂ ಬಾಗಿಲಿಲ್ಲ. ಕಾವಲಿನವರೂ ಇಲ್ಲ. ಹೀಗೆ ಊರೆಲ್ಲ ದ್ವಾರಗಳಿಲ್ಲದ ಮನೆಯಿಂದ ತುಂಬಿ ಹೋಗಿದೆ.

ಈ ದೇವಸ್ಥಾನಕ್ಕೆ ಒಂದು ಐತಿಹ್ಯವಿದೆ. ನೂರಾರು ವರ್ಷಗಳ ಹಿಂದೆ ಆ ಹಳ್ಳಿಗೆ ನೆರೆ ಬಂದಿತು. ಆಗ ಹುಡುಗರು ಅಲ್ಲಿನ ನಾಲೆಯಲ್ಲಿ ಒಂದು ಬಂಡೆಯನ್ನು ನೋಡಿದರು. ಅದನ್ನು ಅಲ್ಲಿಂದ ಕದಲಿಸಲು ಪ್ರಯತ್ನ ಪಟ್ಟಾಗ, ಅದು ಕದಲಲಿಲ್ಲ ಮಾತ್ರವಲ್ಲ ಅದರಿಂದ ರಕ್ತ ಒಸರಲಾರಂಭಿಸಿತು. ರಕ್ತ ನೋಡಿದ ಹುಡುಗರು ಗಾಬರಿಯಾಗಿ ಊರಿನ ಹಿರಿಯರಲ್ಲಿ ವಿಷಯ ತಿಳಿಸಿದರು. ಊರಿನ ಹಿರಿಯರೂ ಆ ಬಂಡೆಯನ್ನು ಎತ್ತಲು ಪ್ರಯತ್ನಿಸಿ ವಿಫಲರಾದರು. ಅಂದು ರಾತ್ರಿ ಆ ಊರಿನ ಹಿರಿಯರೊಬ್ಬರಿಗೆ ಕನಸು ಬಿದ್ದು, ಆ ಬಂಡೆಯನ್ನು ನಿರ್ದಿಷ್ಟ ಸ್ಥಳಕ್ಕೆ ಸಾಗಿಸಿ ಅಲ್ಲಿ ದೇವಸ್ಥಾನ ಕಟ್ಟಲು ದೇವರು ಅಣತಿ ನೀಡಿದ. ಅದರಂತೆ ಮರುದಿನ ಬಂಡೆಯನ್ನು ಈಗ ದೇವಾಲಯ ಇರುವ ಸ್ಥಳಕ್ಕೆ ತಂದು ಅಲ್ಲಿ ದೇವಸ್ಥಾನ ನಿರ್ಮಿಸಲಾಯಿತು. ಅಂದಿನಿಂದ ಇಂದಿನವರೆಗೂ ಆ ದೇವಶಿಲೆಯನ್ನು ಪ್ರಸ್ತುತ ಸ್ಥಳದಿಂದ ಯಾರಿಂದಲೂ ಕದಲಿಸಲು ಸಾಧ್ಯವಾಗಲಿಲ್ಲ. ಹಾಗೆಯೇ ಆ ಊರಿನಲ್ಲಿ ಯಾವುದೇ ರೀತಿಯ ಅಪರಾಧಗಳೂ ನಡೆಯುತ್ತಿಲ್ಲ.

ಹಾಗೆಂದು ಊರು ಸಂಪೂರ್ಣವಾಗಿ ಅಪರಾಧ ಮುಕ್ತವೆಂದು ಹೇಳುವಂತಿಲ್ಲ. ಯಾವಾಗಲಾದರೊಮ್ಮೆ ಅಲ್ಲೊಂದು–ಇಲ್ಲೊಂದು ಸಣ್ಣ–ಪುಟ್ಟ ಕಳ್ಳತನಗಳು ನಡೆಯುತ್ತಿರುತ್ತವೆ. ಹಾಗೆ ನಡೆದರೂ ಅದಷ್ಟು ಬೇಗ ಕದ್ದ ಮಾಲನ್ನು ಅದರ ಯಜಮಾನರಿಗೆ ಹಿಂದಿರುಗಿಸ ಲಾಗುತ್ತದೆ. 'ಹಳ್ಳಿಯ ಪ್ರತಿಯೊಬ್ಬರಲ್ಲೂ ಮೋಟರ್ ಸೈಕಲ್ ಇದೆ. ಕೆಲವೊಮ್ಮೆ ಒಂದೊಂದು ಕಾಣೆ ಯಾಗುವುದೂ ಉಂಟು. ಆದರೆ ಒಂದೆರಡು ದಿನಗಳಲ್ಲಿ ಅವು ತಮ್ಮ ಯಜಮಾನರಲ್ಲಿ ಬಂದು ಸೇರುತ್ತವೆ.

ಖೂನಿ, ಕೊಲೆ, ದರೋಡೆ ಮುಂತಾದವುಗಳಿಂದ ಮುಕ್ತವಾದ ಈ ಗ್ರಾಮದಲ್ಲಿ ಪೋಲೀಸರಿಗೇನು ಕೆಲಸ? ಇಲ್ಲಿ ಪೋಲೀಸ್ ಠಾಣೆಯೂ ಇಲ್ಲ ಎಂದರೆ ಆಶ್ಚರ್ಯವಾದೀತು. ಅಷ್ಟೇಕೆ ಈ ಹಳ್ಳಿಯಿಂದ 2 ಕಿಲೋಮೀಟರ್ ದೂರದಲ್ಲಿ ಸಹಕಾರಿ ಸಕ್ಕರೆ ಕಾರ್ಖಾನೆ ಇದೆ. ಅಲ್ಲಿ ಈ ಹಳ್ಳಿಯ ಜನರಿಗೆ ಷೇರುಗಳಿವೆ. ಆದರೆ ಒಮ್ಮೆಯೂ ಈ ಹಳ್ಳಿಯ ಜನರಿಂದ ಹಣಕಾಸಿನ ವಿಷಯದಲ್ಲಿ ನಯಾಪೈಸಾ ಮೋಸವಾಗಿಲ್ಲ. ಇವರ ಕುರಿತು ಒಂದು ದೂರು ಕೂಡ ಇಲ್ಲ.

ವ್ಯಕ್ತಿಗತ ನೈತಿಕ ಅಧಃಪತನದಿಂದ ರಾಷ್ಟ್ರೀಯ ಹಾಗೂ ವಿಶ್ವದ ನೆಲೆಯಲ್ಲಿ ಸಾಮಾಜಿಕ, ರಾಜಕೀಯ ಹಾಗೂ ಎಲ್ಲ ವಲಯಗಳಲ್ಲಿ ವ್ಯವಸ್ಥೆ ಕೊಳೆತು ನಾರುತ್ತಿರುವಾಗ ಶಿಂಗ್ನಾಪುರದಂತಹ ಹಳ್ಳಿಯೊಂದು ಇಲ್ಲಿ ಎಲ್ಲವೂ ಕೆಟ್ಟಿಲ್ಲ, ಪ್ರಾಮಾಣಿಕತೆ, ಮಾನವೀ ಯತೆಗಳಿಗೆ ಈ ಜಗತ್ತಿನಲ್ಲಿ ಇನ್ನೂ ಸ್ಥಾನವಿದೆ ಎಂಬ ನಂಬಿಕೆ ನೀಡುತ್ತಿದೆ.

ಇದು ನಿಂಗೆ ಮಾಡೋಕ್ಕೇ ಬರೋಲ್ಲ. ಅಡಿಗೆ ಕುಲಾನಾ ಇದು!'' ಅಂತೆಲ್ಲಾ ನನ್ನ ಅಡಿಗೆಗೆ ಮೂದಲಿಸುತ್ತಿದ್ದ ಇವರು ಇಂದು ಆ ಅಡಿಗೆ ಕಷ್ಟಾನೂ ಎಷ್ಟಿದೆ ಅಂತ ಅನುಭವಿಸಿ ನೋಡಲಿ ಅಂತ ನಾನೂ ಮಾಡಲು ಪ್ರೋತ್ಸಾಹಿಸಿದೆ.

ಸರಿ, ಪತಿರಾಯರು ಪಂಚೆ ಎತ್ತಿ ಕಟ್ಟಿ ನಡೆದೇ ಬಿಟ್ಟರು ಅಡಿಗೆ ಮನೆಗೆ. ನಾನು ಕೇಸರಿ ಭಾತ್‌ನ ವಿಧಾನವನ್ನು ಕ್ರಮವಾಗಿ ಹೊರಗಿನಿಂದಲೇ ಕೂಗಿ ಹೇಳತೊಡಗಿದೆ. ರವೆಯನ್ನು 2 ಚಮಚ ತುಪ್ಪ ಹಾಕಿ ಮೊದಲು ಹುರಿದಿಡಿ. ರವೆಯ ಅಳತೆಯ ಎರಡರಷ್ಟು ಅಳತೆಯ ನೀರನ್ನು ಒಲೆಯ ಮೇಲೆ ಕುದಿಯಲು ಇಟ್ಟು... ಹೀಗೆ ಹೇಳುತ್ತಾ ಹೋಗುತ್ತಿರಲು ಮಧ್ಯೆ ಬಾಯಿ ಹಾಕಿದವರೇ, ''ಅಯ್ಯೋ, ನನ್ನನ್ನು ಏನು ಅಂದ್ಕೊಂಡಿದಿ. 'ಆಫ್ಟರ್ ಆಲ್' ಒಂದು ಕೇಸರೀ ಭಾತು ಮಾಡಲಿಕ್ಕೆ ಬರೋಲ್ಲ ಅಂದ್ರ ಆಯಿತು. ನೀನು ಸ್ವಲ್ಪ ಬಾಯಿ ಮುಚ್ಚಿಕೊಂಡು ಕೂತಿದ್ದು ತಿನ್ನಲು ರೆಡಿಯಾಗಿರು. ಆಮೇಲೆ ನೋಡು ಪ್ರತೀ ಸಲ ನೆಂಟರು ಬಂದಾಗಲೂ ರೀ... ಇದು ಹೇಗ್ರೀ.... ಅಂತ ರಾಗವೆಳೆದು ನನ್ನೇ ಕೇಳಿ ಮಾಡ್ತಿ ನೋಡು' ಅಂತ ಹೇಳಿ ನನ್ನ ಸಲಹೆ ಮಾರ್ಗದರ್ಶನವನ್ನು ಖಡಾ ಖಂಡಿತವಾಗಿ ನಿರಾಕರಿಸಿದರು. ಸರಿ, ನಂಗೇನು



ರಾಘವೇಂದ್ರ ರಾವ್

ಅಂತ ನಾನು ಅಡಿಗೆ ಮನೆಯಿಂದ ಬರ್‍ತಿರೋ ಪರಿಮಳವನ್ನು ಆಸ್ವಾದಿಸುತ್ತಾ, ನಾಲಿಗೆ ಚಪ್ಪರಿಸುತ್ತಾ ಕುಳಿತಿದ್ದೆ. ಕೇಸರಿ ಭಾತೆಂದರೆ ನನಗಿಷ್ಟ. ಅದರಲ್ಲೂ ಈ ಸಲ ಅದಕ್ಕೆ ರುಚಿ ಹೆಚ್ಚಿಸಲು ಬೇಕಾದಷ್ಟು ತುಪ್ಪ, ದ್ರಾಕ್ಷಿ, ಗೋಡಂಬಿ, ಏಲಕ್ಕಿ ಹೇರಳವಾಗಿ ಮನೇಲಿ ರೆಡಿ ಇದೆ. ಏನಾದರಾಗಲಿ, ಚೆನ್ನಾಗೇ ತಿನ್ನಬೇಕೂ ಅಂತ ಒಂದು ಕ್ಷಣ ''ಡಯೆಟ್'' ದೇಹದ ಗಾತ್ರವನ್ನು ಮರೆತು ಸಿಹಿ ಬಗ್ಗೆಯೇ ಯೋಚಿಸುತ್ತಾ ಕುಳಿತಿದ್ದೆ.

ಸ್ವಲ್ಪ ಹೊತ್ತಿನ ನಂತರ ಬಿಸಿಬಿಸಿಯಾದ ಕೇಸರಿಭಾತು ಬಂದು ನನ್ನ ಮುಂದೆ ಕುಳಿತಿತು. ನೋಡಲೇನೋ 'ಸ್ವೀಟ್ಸ್' ತುಪ್ಪದಲ್ಲಿ ಮಿನುಗುತ್ತಿತ್ತು. ಆದರೆ ಪರಿಮಳವೇಕೋ ಹಿತವಾಗಿಲ್ವೇನೋ ಅನಿಸಿತ್ತು. ನನ್ನವರು ''ಮುದ್ದಿನ ರಾಣಿ, ಮೊದಲು ನನ್ನ ಸ್ಪೆಶಲ್ ರುಚಿ ನೋಡು, ಆಮೇಲೆ ಮಾತನಾಡು'' ಎನ್ನುವಂತೆ ನನ್ನ ಮುಂದೆ ಹೆಮ್ಮೆಯಿಂದ ಕೂತಿದ್ದರು. ನಾನೂ ಸಹಾ ಉತ್ಸಾಹದಿಂದ 1 ಚಮಚ ಸಿಹಿಯನ್ನು ಬಾಯಿಗೆ ಹಾಕಿಕೊಂಡವಳೇ ಮುಖ ಕಿವುಚುತ್ತಾ ಥೂ.. ಎಂದು ತಿಂದದ್ದನ್ನು ಹೊರಹಾಕಿದೆ. ''ಏನ್ರೀ... ಇದು.. ಹೀಗಾಗಿದೆ...'' ಅಂತ ನನ್ನವರ ಮುಖ ನೋಡಿದೆ. ''ಏ... ಏನಾಯ್ತೇ... ಸರಿಯಾಗಿಲ್ವಾ...'' ಅಂತ ಓಡಿ ಹೋಗಿ ತಾವೂ 1 ಚಮಚ ಸಿಹಿ ಬಾಯಿಗೆ ಹಾಕಿಕೊಂಡವರೇ ಉಗಿಯಲೂ ಆಗದೇ (ತಾನೇ ಮಾಡಿದ್ದು) ತಿನ್ನಲೂ ಆಗದೆ ಒದ್ದಾಡ್ತಾ ''ಉಪ್ಪುಪ್ಪು.... ಕಣೇ'' ಅಂತ ರಾಗವೆಳೆದರು. ಸಕ್ಕರೆ ಬದಲಿಗೆ ಸಕ್ರೆ ಪುಡಿ ಅಂತಂದುಕೊಂಡು ಎದುರಿಗೆ ಕಾಣಿಸುತ್ತಿದ್ದ ಪುಡಿ ಉಪ್ಪಿನ ಬಾಟ್ಲಯನ್ನೇ ಬಗ್ಗಿಸಿದರು. ಆಗಿನ ಇವರ ಮುಖ ನೋಡಬೇಕಿತ್ತು. ನನಗೆಲ್ಲಾ ಗೊತ್ತಿದೆ ಅಂತ ಜಂಭದಿಂದಿದ್ದ ಇವರು ಈಗ ''ಹೌದು ಕಣೆ, ಅಡಿಗೆ ಮನೆಗೆ ಮಾತ್ರ ನೀನೇ ಮಹಾರಾಣಿ. ನಿನ್ನ ಸಲಹೆ, ಮಾರ್ಗದರ್ಶನವಿಲ್ಲದೆ ಮುಂದುವರಿದರೆ ಅನಾಹುತ ತಪ್ಪಿದ್ದಲ್ಲ'' ಅಂತ ಒಪ್ಪಿಕೊಳ್ಳುವಂತಿತ್ತು ಅವರ ಮುಖಭಾವನೆ. ''ಚೆನ್ನಾಗೇ ಮಾಡಿದ್ದೀರಿ. ಸ್ವಲ್ಪ ಗಡಿಬಿಡಿ ಜಾಸ್ತಿ ಅಷ್ಟೇ'' ಅಂತ ಸಮಾಧಾನಿಸಿದೆ. ಆಮೇಲೆ ಬಂದ ನೆಂಟರಿಗೆ ಹೋಟೆಲ್ಲಿಂದ ತರಿಸಿ ಉಪಚರಿಸಿ ಕಳಿಸಾಯಿತೆನ್ನಿ. ಆದರೆ ಈಗಲೂ ಕೇಸರಿ ಭಾತನ್ನು ನೋಡಿದಾಗ, ಮಾಡಿದಾಗ, ಕೇಳಿದಾಗಲೆಲ್ಲಾ ಈ ಸ್ಪೆಶಲ್ ಭಾತ್‌ನ ನೆನಪಾಗಿ ನಗೆಯುಕ್ಕಿ ಬರುತ್ತದೆ.

—ಮಮತಾ ರಾವ್
ಶ್ರೀರಂಗಪಟ್ಟಣ

## 'ಮೋಹನ ಪಾಕ'

ಆಗ ನನ್ನ ಮದುವೆಯಾಗಿ ಅದೇ ವಾರ ಕಳೆದಿತ್ತು. ನಮ್ಮಿಬ್ಬರನ್ನು ಬಿಟ್ಟು ನನ್ನ ಅತ್ತೆ, ಮಾವ, ನಾದಿನಿ–ಮೈದುನರು ಸಿನೇಮಾಕ್ಕೆ ಹೋಗಿದ್ದರು. ರಾತ್ರಿಗಾಗಿ ಬಿಸಿ ಅನ್ನ ಮಾಡಲು ಹೇಳಿ ಹೋಗಿದ್ದರು. ಅವರಿಗೆ ಕುಕ್ಕರಿನ ಅಡಿಗೆ ಹಿಡಿಸುತ್ತಿರದ ಕಾರಣ ಅನ್ನವನ್ನು ನೇರವಾಗಿ ಗ್ಯಾಸ್ ಒಲೆಯ ಮೇಲಿಟ್ಟು ಮಾಡಬೇಕಿತ್ತು. ನನಗಾದರೋ ಕುಕ್ಕರಿನಲ್ಲಿ ಮಾತ್ರ ಬೇಯಿಸುವ ಕಲೆ ಗೊತ್ತಿತ್ತು. ರಾತ್ರಿಯಾದೊಡನೆ ಅನ್ನಕ್ಕೆ ಇಟ್ಟೆ. ಅದು ಎಲ್ಲಿ ಸೀದು ಹೋಗುವುದೋ ಎಂಬ ಭಯದಿಂದ ಮೇಲಿನಿಂದ ಮೇಲೆ ಕೈಯಾಡಿಸುತ್ತಲಿದ್ದೆ. ಅದು ಬೇಯುತ್ತ ಬಂದಂತೆಲ್ಲ ಆಗಾಗ್ಗೆ ನೀರು ಸುರಿಯುತ್ತ ಕೈಯಾಡಿಸುತ್ತಲೇ ಕುಳಿತೆ. ತತ್ಪರಿಣಾಮವಾಗಿ ಅನ್ನ ಜಿಗುಟಾಗಿ ಒಂದು ಹೆಂಟೆಯಂತಾಯಿತು. ಗಾಬರಿಯಾಗಿ ನನ್ನವರಿಗೆ ಹೇಳಿದೆ. ಅವರು ಹೆಚ್ಚು ತಲೆ ಕೆಡಿಸಿಕೊಳ್ಳದೆ ಬೇರೆ ಪಾತ್ರೆಯಲ್ಲಿ ಮತ್ತೆ ಅನ್ನಕ್ಕಿಟ್ಟು ಮೃದುವಾದ ಅನ್ನವನ್ನು ತಯಾರಿಸಿದರು. ನಾನು ಮಾಡಿದ ಅನ್ನವನ್ನು ಹತ್ತಿರವಿದ್ದ ಕೊಟ್ಟಿಗೆಯ ಆಕಳಿಗೆ ತಾವೇ ಸುರಿದು ಬಂದು, ನನಗೆ ಪಾತ್ರೆ ಶುದ್ಧಗೊಳಿಸಲು ಹೇಳಿದರು. ನಂತರ ಏನೂ ನಡೆದಿಲ್ಲದಂತೆ ನಿಶ್ಚಿಂತರಾಗಿದ್ದರು. ರಾತ್ರಿ ಊಟಕ್ಕೆ ಕುಳಿತಾಗ ''ಅಲ್ಲಾ ಈಗಿನ ಹುಡುಗೇರಿಗೆ ಅನ್ನ ಸುದ್ಧಾ ಮಾಡಲಿಕ್ಕ ಬರ್‍ತಿರೋದಿಲ್ಲಾ. ಆದ್ರ ನಮ್ಮ ಶೈಲಾ ಮಾಡಿದ ಅನ್ನ ಮಲ್ಲಿಗಿ ಹೂವಿನ್ಹಂಗ ಹಗುರ ಆಗೇದ ನೋಡ್ರಿ'' ಎಂದು ನನ್ನತ್ತೆ ಹೊಗಳಿದಾಗ ಪತಿ ಮೋಹನರಾಯರು ಮೀಸೆಯಡಿ ಮುಗುಳ್ನಗುತ್ತಿದ್ದರು.

ಬೇರೆ ಊರಿಗೆ ಹೋಗಿ ಸಂಸಾರ ಹೂಡಿದಾಗ ಪತಿಯೇ ನನ್ನ ಅಡಿಗೆ ಗುರು. ಅವರಿಂದಲೇ ಎಲ್ಲ ಅಡಿಗೆ ಕಲಿತೆ. ಯಾವುದೇ ಅಡಿಗೆಯನ್ನು ಅವರು ರುಚಿಕಟ್ಟಾಗಿ ತಯಾರಿಸಬಲ್ಲರು. ಬಗೆ ಬಗೆಯ ಪಲ್ಯ, ಭಾತು, ಚಪಾತಿ, ಪೂರಿ, ಇಡ್ಲಿ, ಚಟ್ನಿ,



ಮೋಹನ ಭಬ್ಬಿ

ಮಸಾಲೆಪುಡಿ, ಸಾರಿನ ಪುಡಿ, ಮೆಂತೆ ಹಿಟ್ಟು, ಗುಳಂಬ, ಸಿಹಿತಿಂಡಿಗಳು ಹೀಗೆ ಎಲ್ಲದರಲ್ಲೂ ಅವರದು ಸಿದ್ಧಹಸ್ತ. ಆದರೂ ಅವರು ಮಾಡುವ ಚಹ, ಕಾಫಿ, ಹುಳಿ, ಬಿಸಿಬೇಳೆಭಾತು, ಪುಡಿ ಚಟ್ನಿ, ಬಿಸಿ ಬಿಸಿ ತಿಳಿಸಾರು, ಗರಿ ಗರಿ ದೋಸೆ, ಬಾಯಿ ನೀರೂರುವ ಎಗ್‌ಕರಿ (ನಾವು ಶಾಖಾಹಾರಿಗಳು) ಇವು ಎಲ್ಲರಿಗೂ ಅಚ್ಚುಮೆಚ್ಚು. ಹಬ್ಬ ಹುದಿನಗಳಲ್ಲಿ ಉಂಡಿ, ಚಕ್ಕುಲಿ, ತೇಂಗೊಳಲು ಮುಂತಾದ ವಿಶಿಷ್ಟ ತಿಂಡಿಗಳನ್ನು ಸಿದ್ಧಪಡಿಸುವಾಗಲೂ ಪತಿಯ ಸಹಾಯ ಇದ್ದೇ ಇರುತ್ತದೆ. ನಾನು ಯಾವುದೇ ಹೊಸರುಚಿಯ ಪ್ರಯೋಗವನ್ನು ಇವರ ಮಾರ್ಗದರ್ಶನದಲ್ಲಿಯೇ ಮಾಡುತ್ತೇನೆ. (ಹಾಳಾದರೂ ನಾನೊಬ್ಬಳೇ ಜವಾಬ್ದಾರಳಾಗುವುದಿಲ್ಲವಲ್ಲ!)

ಇನ್ನು ಇವರ ಅಡಿಗೆ ವಿಧಾನ ಕೂಡ ಅಷ್ಟೇ ಆಕರ್ಷಕ. ತಮಗೆ ಬೇಕಾದ ತರಕಾರಿ, ಮಸಾಲೆ ಮುಂತಾದವುಗಳನ್ನು ತಾವೇ ಆಯ್ದುಕೊಂಡು, ತೊಳೆದು, ಕತ್ತರಿಸಿ, ಲಭ್ಯವಿದ್ದಷ್ಟೇ ವಸ್ತುಗಳಿಂದ ಉತ್ತಮ ವ್ಯಂಜನವನ್ನು ತಯಾರಿಸಬಲ್ಲರು. ಅಡಿಗೆಯ ನಂತರ ಕಟ್ಟೆಯನ್ನು ತಕ್ಷಣವೇ ತೊಳೆದು (ಉಕ್ಕಿದ್ದು, ಚೆಲ್ಲಿದ್ದೂ ತಿಳಿಯದಂತೆ) ಸ್ವಚ್ಛಗೊಳಿಸಿ ಟೇಬಲ್ ಮೇಲೆ ಅಡಿಗೆಯನ್ನು ಸಜ್ಜುಗೊಳಿಸುತ್ತಾರೆ. ಎಲ್ಲ ಬಗೆಯ ವ್ಯಂಜನಗಳನ್ನು ಸ್ವಾದಿಷ್ಟವಾಗಿ, ಸದ್ದುಗದ್ದಲವಿಲ್ಲದೆ, ಅಲ್ಪಾವಧಿಯಲ್ಲಿ ಅಚ್ಚುಕಟ್ಟಾಗಿ ಮಾಡುವ ಅವರ ಅಡಿಗೆಯನ್ನು ನಳಪಾಕ, ಭೀಮಪಾಕದಂತೆ 'ಮೋಹನಪಾಕ'ವೆಂದು ಹೆಸರಿಸಿದರೆ ಉತ್ಪ್ರೇಕ್ಷೆಯಾಗಲಾರದು. ರವಿವಾರದ ರಾತ್ರಿಯಂದು ನಮಗಾಗಿ ಏನಾದರೊಂದು ವ್ಯಂಜನವನ್ನು ಮಾಡುವಲ್ಲಿ ಆನಂದಿಸುವ ನನ್ನವರು ಹೆಂಡತಿ–ಮಕ್ಕಳು ಊರಲ್ಲಿಲ್ಲದಾಗ ಅಡುಗೆ ಮನೆಯತ್ತ ಮುಖ ಕೂಡ ತಿರುಗಿಸುವದಿಲ್ಲ.

ಒಮ್ಮೊಮ್ಮೆ ಅಡಿಗೆ–ಕೆಲಸ ಮಾಡಿ ಬೇಸತ್ತ ನಾನು ''ಆರಾಮ ಗಂಡಸಾಗಿ ಹುಟ್ಟಬೇಕಾಗಿತ್ತು'' ಎಂದು ಗೊಣಗಿದಾಗ ''ಅಯ್ಯೋ, ಮ್ಹಾರಾಯಳ, ಆಫೀಸಿನ್ಯಾಗ ದುಡಿಯೋದರಾಗ ಏನು ಸುಖ ಅದ? ನಾ ಏನಾರು ನಿನ್ಹಂಗ ಹೆಂಗಸಾಗಿದ್ದ ಅಂದ್ರ ಒಂದು ತಾಸಿನ್ಯಾಗ ಅಡಿಗಿ–ಕೆಲಸಾ ಮುಗಸಿ ಆರಾಮ ಗೆಳತೇರ ಜೋಡಿ ಹರಟಿ ಹೊಡಕೋತ, ಮಂದಿ ಕಾರಭಾರ ಮಾಡಕೋತ ಕೂಡತಿದ್ದೆ'' ಎಂದು ಚುಡಾಯಿಸುತ್ತಾರೆ. ಹೇಗಿದೆ ನಳಪಾಕ ಅಲ್ಲ ಮೋಹನಪಾಕ ಚರಿತೆ?

—ಶೈಲಾ ಭಬ್ಬಿ

## ಉಪ್ಪಿಟ್ಟಿನ ಅವಾಂತರ

ಅಂದು ಬೇಸಿಗೆಯ ರಜಾ ದಿನ. ಶಾಲೆಗಳಿಗೆ ಬಿಡುವು. ನಮ್ಮ ಮನೆಯಲ್ಲಿ ರಜಾದಿವಸಗಳಲ್ಲಿ ಸಾಯಂಕಾಲದ ಸಮಯ ತಿಂಡಿ ಮಾಡುವ ಅಭ್ಯಾಸ. ಸ್ಕೂಲು ರಜೆ ಶುರುವಾಗಿದ್ದ ಹುಡುಗರಿಗೆ ಒಂದೊಂದು ಬಗೆಯ ತಿಂಡಿ ಮಾಡುತ್ತಿದ್ದೆ. ನಮ್ಮ ಯಜಮಾನರಿಗೂ ಸಹ ಸ್ವಲ್ಪ ಬಾಯಿ ಚಪಲ. ಹಾಗಾಗಿ ತಿಂಡಿ ಮಾಡುವ ಪರಿಪಾಠವಿತ್ತು. ನಮ್ಮ ಯಜಮಾನರಿಗೆ ಸ್ವಲ್ಪ ಅಡಿಗೆ ಮನೆ ಹುಚ್ಚು. ನಾನು ತಿಂಡಿ ತಯಾರು ಮಾಡುವ ಸಮಯದಲ್ಲೆಲ್ಲಾ ಅಡಿಗೆ ಮನೆಗೆ ಧಾಳಿ ಮಾಡಿ, ಅದು ಹೀಗೆ ಅದು ಹಾಗೆ ಎಂದು ಒಲೆಯ ಮೇಲೆ ಏನಾದರೂ ಒಗ್ಗರಣೆಗೆ ಇಟ್ಟಿದ್ದರೆ, ನನಗೆ ಕಾಣದ ಹಾಗೆ ಇನ್ನು ಸ್ವಲ್ಪ ತುಪ್ಪವನ್ನೋ ಅಥವಾ ಎಣ್ಣೆಯನ್ನೋ ಹಾಕುವುದು. ಇಲ್ಲವೇ ಸಾಂಬಾರಿಗೆ ಇನ್ನು ಸ್ವಲ್ಪ ಉಪ್ಪನ್ನು ಹುಯ್ಯುವುದೋ ಅಂತೂ ಯಾವುದಾದರೊಂದು ರೀತಿಯ ಸಹಾಯವನ್ನು ಮಾಡುತ್ತಿದ್ದರು. ನನಗಾದರೂ ಯಾಕಪ್ಪ ಇವರು ಅಡಿಗೆ ಮನೆಗೆ ಬರುತ್ತಾರೆ ಎನ್ನುವಂತಾಗುತ್ತಿತ್ತು.

ಅಂದು ಭಾನುವಾರ ಬೇರೆ. ಸ್ಕೂಲು, ಆಫೀಸ್ ಎನ್ನುವ ಯೋಚನೆ ಬೇರೆ ಇಲ್ಲ. ಸರಿ ನಿಧಾನವಾಗಿ ಎದ್ದರಾಯಿತು ಎಂದುಕೊಂಡು ಮಲಗಿದೆ. ಎದ್ದಾಗಲೇ 8 ಗಂಟೆಯಾಗಿತ್ತು. ಸರಿ, ಟಿ.ವಿ. ಪ್ರೋಗ್ರಾಂ ಬೇರೆ.. ಕೇಳಬೇಕೇ, ತಿಂಡಿ ಮಾಡುವ ಗೋಜಿಗೆ ಹೋಗದೆ ಒಟ್ಟಿಗೆ ಅಡುಗೆ ಮಾಡಿ ಮುಗಿಸಿದೆ. ನಾವೆಲ್ಲರೂ ಊಟ ಮಾಡುವ ವೇಳೆಗೆ 12 ಗಂಟೆಯಾಗಿತ್ತು. ಊಟ ಮಾಡಿ ಪಾತ್ರೆಗಳನ್ನು ಗಲಬರಿಸಿ ಅಡುಗೆ ಮನೆ ಕ್ಲೀನ್ ಮಾಡಿ 1.30 ಗಂಟೆಗೆ ಮತ್ತೆ ಟಿ.ವಿ. ಮುಂದೆ ಕೂತೆ. ಫಿಲ್ಮ್ ನೋಡುತ್ತಿದ್ದಂತೆ ಕಣ್ಣೆಳೆತ ಶುರುವಾಯಿತು. ಸರಿ ಹೇಗೂ ಭಾನುವಾರ. 5 ಗಂಟೆಗೆ ತಿಂಡಿ ರೆಡಿ ಮಾಡಿದರಾಯಿತು. ಆಮೇಲೆ ಎಂದು ಮಲಗಿದೆ. ಅಂದು ಟಿ.ವಿ.ಯಲ್ಲಿ ರಾಜಕುಮಾರ್ ಫಿಲಂ ಬೇರೆ. ಸರಿ ಎಂದು ಮಲಗಿದೆ. ಎಚ್ಚರವಾದಾಗ ಫಿಲಂ ಶುರುವಾಗಿತ್ತು. ಫಿಲಂ ನೋಡುವ ಯೋಚನೆ ಮಾಡದೆ ನೆಟ್ಟಗೆ ಅಡುಗೆ ಮನೆಗೆ ಧಾವಿಸಿದೆ. ನೋಡಿದರೆ ಉಪ್ಪಿಟ್ಟು ರೆಡಿಯಾಗಿದೆ. (ನನ್ನ ಯಜಮಾನರು ನನಗೆ ಆಶ್ಚರ್ಯಪಡಿಸಬೇಕೆಂದು ಮಕ್ಕಳನ್ನು ಸೇರಿಸಿಕೊಂಡು ಉಪ್ಪಿಟ್ಟು ತಯಾರು ಮಾಡಿದ್ದರು.) ನನಗೆ ಒಂದೇ ಖುಷಿ. ತಿಂಡಿ ರೆಡಿ ಮಾಡುವ ಯೋಚನೆ ತಪ್ಪಿತು ಎಂದು. ಸರಿ ಫಿಲಂ ನೋಡುತ್ತಿದ್ದಂತೆ ಎಲ್ಲರಿಗೂ ಉಪ್ಪಿಟ್ಟಿನ ಸಮಾರಾಧನೆ ಯಾಯಿತು. ಮಧ್ಯಾಹ್ನ ಬೇಗನೆ ಊಟ ಮಾಡಿದ್ದರಿಂದ ಎಲ್ಲರಿಗೂ ಹೊಟ್ಟೆ ಹಸಿವು ಬೇರೆ. ಮತ್ತೆ ಟಿ.ವಿ. ನೋಡುವ ಖುಷಿಯಲ್ಲಿ ತಿಂಡಿಯ ರುಚಿಯೇ ಗೊತ್ತಾ ಗಲಿಲ್ಲ. ತಿಂಡಿ ತಿಂದು ನೀರು ಕುಡಿದು ಸುಧಾರಿಸಿ ಕೊಳ್ಳುತ್ತಿದ್ದಂತೆಯೇ ಶುರುವಾಯಿತು ಹೊಟ್ಟೆಯ ತಳಮಳ. ಗಡಬಡ ಎಲ್ಲ ರೀತಿಯ ಶಬ್ದಗಳು. ಬಾತ್‌ರೂಂಗೆ ಬಿಡುವೆ ಇಲ್ಲದಂತಾಗಿ ಕೊನೆಗೆ ನಮ್ಮ ಮನೆಯ ಹತ್ತಿರದ ಪರಿಚಯಸ್ಥ ಡಾಕ್ಟರ್ ಅವರ ಹತ್ತಿರ ಚಿಕಿತ್ಸೆ ಪಡೆದು ಮನೆಗೆ ಬರುವ ವೇಳೆಗೆ ರಾಜ್‌ಕುಮಾರ್ ಅವರ ಫಿಲಂ ಮುಗಿದಿತ್ತು. ಸರಿ ಇಷ್ಟೇ ನಮ್ಮ ಭಾನುವಾರದ ಮನರಂಜನೆ ಎಂದುಕೊಂಡು ಹಾಸಿಗೆ ಹಿಡಿದೆವು. ಆದದ್ದು ಇಷ್ಟೇ. ನಮ್ಮ ಯಜಮಾನರು ಉಪ್ಪಿಟ್ಟು ಮಾಡುವ ಆತುರ ಗಡಿಬಿಡಿಯಲ್ಲಿ



ಮೂರ್ತಿ

ರಿಫೈಂಡ್ ಆಯಿಲ್‌ಗೆ ಬದಲಾಗಿ ಹರಳೆಣ್ಣೆಯನ್ನು ಹಾಕಿ ತಿಂಡಿ ತಯಾರು ಮಾಡಿದ್ದರು. ಉಪ್ಪಿಟ್ಟು ರುಚಿ ಬರಲೆಂದು ಬೇರೆ ಚೆನ್ನಾಗಿ ಕಾಯಿ ತುರಿ, ನಿಂಬೆ ಹಣ್ಣು ಹಿಂಡಿದ್ದರು. ನನಗೆ ಆಶ್ಚರ್ಯಪಡಿಸಲು ಹೋಗಿ ಆಪತ್ತು ಕಾದಿತ್ತು. ನನಗೋ 'ಸಾಕಪ್ಪ ಸಾಕು ಈ ಉಪ್ಪಿಟ್ಟಿನ ಅವಾಂತರ. ಇನ್ನೆಂದೂ ನೀವು ಅಡುಗೆ ಮನೆ ಕಡೆ ತಲೆ ಹಾಕಬೇಡಿ' ಎಂದು ತಾಕೀತು ಮಾಡಿದೆ. ಅಂದೇ ಕೊನೆ. ಇದುವರೆಗೂ ನಮ್ಮ ಯಜಮಾನರು ಉಪ್ಪಿಟ್ಟು ಮಾಡುವ ಸಾಹಸಕ್ಕೆ ಹೋಗಿಲ್ಲ. ಈಗಲೂ ಸಹ ನಾವು ಉಪ್ಪಿಟ್ಟು ತಿನ್ನುವಾಗಲೆಲ್ಲ ನಮ್ಮ ಯಜಮಾನರ ನಳಪಾಕದ ನೆನಪೇ ನೆನಪು.

**–ಭಾರತಿ ಎಸ್. ಮೂರ್ತಿ**
**ಬೆಂಗಳೂರು.**

## ಬ್ರಹ್ಮಚಾರಿಗಳ ಸಂಗಾತಿ

ಈಗಿನ ಕಾಲದ ಹುಡುಗಿಯರೆಲ್ಲ ಇಷ್ಟಪಡುವಂತೆ ನಾನು–ನನ್ನವರು ಇಬ್ಬರೇ ಇರುವ ಸಂಸಾರ ನನ್ನದು. ಅತ್ತೆ ಮಾವ ಇಲ್ಲದ ಮನೆ ಮೊದಲು ಬೇಸರ ವೆನಿಸಿದರೂ, ಪುಟ್ಟ ಸಂಸಾರ–ಪತಿಯ ಸಹಕಾರ ಬೇಗನೇ ಹಿಡಿಸಿತು.

ಎಲ್ಲ ಗಂಡಸರಂತೆ ಇವರು ಅಡುಗೆ ಮನೆಗೆ ಪರಕೀಯರಲ್ಲ. ಬದಲು ಆಫೀಸಿನಿಂದ ಸುಸ್ತಾಗಿ ಬಂದರೂ, ಕಾಲು ತೊಳೆದು ನೇರ ಅಲ್ಲೇ ಬಂದು ಕೂರುವವರು. ಮೊದಮೊದಲು ಕಾಫಿಗೆ ಬೆರೆಸುವಾಗ ಅಷ್ಟು ಸಕ್ಕರೆ ಸಾಕೆ? ಅಂತ ಪರೀಕ್ಷಾ ದೃಷ್ಟಿಯಿಂದ ಕೇಳುವುದು ಕೈಕಾಲು ನಡುಗಿಸುತ್ತಿತ್ತು, ಕಿರಿಕಿರಿಯಾಗು ತ್ತಿತ್ತು. ಇವರ ಉತ್ಸಾಹ ನನಗೆ ಮುಜುಗರ. ನಮ್ಮ ಅತ್ತಿಗೆಯ ಸಲಹೆಯಂತೆ ಇವರ ಈ ಹೊಸ ಉತ್ಸಾಹ ವನ್ನು ಸಣ್ಣ ಪುಟ್ಟ ಕೆಲಸ ಹೇಳುವುದರ ಮೂಲಕ ಸಾರ್ಥಕ ಸಹಕಾರವನ್ನಾಗಿ ಪರಿವರ್ತಿಸಿದೆ. ಕ್ರಮೇಣ ಕಾಫಿ ಮಾಡುವುದರಲ್ಲಿ ಪರಿಣತರಾದದ್ದಷ್ಟೇ ಅಲ್ಲ, ಬ್ರಹ್ಮಚಾರಿ ಜೀವನದಲ್ಲಿ ತಾವು ಕಲಿತಿದ್ದ ತಿಂಡಿಗಳನ್ನು ಮಾಡಿ ಹಾಕಲೂ ಮುಂದಾದರು! ಇವರ ಕಿಚಡಿಯ ಪ್ರಾವೀಣ್ಯ ನನ್ನನ್ನು ದಂಗುಬಡಿಸಿತ್ತು.

ಈಚೆಗೆ ನನಗೆ ಮೂರು ತಿಂಗಳಾಗಿದ್ದಾಗ ಸ್ವಲ್ಪ ವ್ಯತ್ಯಾಸವಾಗಿ ಡಾಕ್ಟರರು ಬೆಡ್ ರೆಸ್ಟ್ ಹೇಳಿದ್ದರು. ಆಗ ಅನಿವಾರ್ಯವಾಗಿ ಎಲ್ಲಕ್ಕೂ ಇವರೇ ಮುಂದಾಗ ಬೇಕಾಯ್ತು. ನ್ಯೂಕ್ಲಿಯರ್ ಸಂಸಾರದ ಕಷ್ಟಗಳು ಅನುಭವಕ್ಕೆ ಬರತೊಡಗಿತು. ಆದರೆ ಇವರು ಎದೆ ಗುಂದಲೇ ಇಲ್ಲ. ಪೂರ್ತಿ ತನಗೇ ಅಡುಗೆಯ ಜವಾಬ್ದಾರಿ ಬಂತಲ್ಲಾ, ಸಂಪೂರ್ಣ ಸ್ವಾತಂತ್ರ್ಯ ಸಿಕ್ಕಿತಲ್ಲಾ ಎಂದು ತುಂಬಾ ಉತ್ಸಾಹಪಟ್ಟರು. ಮೊದಲ ಒಂದು ವಾರ ಬರೀ ಬೇಳೆ–ತರಕಾರಿ ಮತ್ತು ಅನ್ನ ಬೇಯಿಸಲು ಹೇಳಿದೆ. ಅದಕ್ಕೆ ಗೊಜ್ಜು, ಚಟ್ನಿಪುಡಿ, ಬೇಳೆ ನೀರಿಗೆ ಮೆಣಸಿನಕಾಳುಪುಡಿ, ಉಪ್ಪು ಹಾಕಿ ತಿಂದೆವು. ಉತ್ಸಾಹ ಸ್ವಲ್ಪವೂ ಜಗ್ಗದ್ದು ನೋಡಿ, ನಿಮಗೆ ತೋರಿದ್ದು ಮಾಡಿ. ಆದರೆ ಸಪ್ಪೆ ಬೇಳೆಕಟ್ಟನ್ನು ಎರಡು ಲೋಟ ತೆಗೆದಿಡಿ ಎಂದು ಹೇಳಿದೆ.

ಬೆಳಿಗ್ಗೆ ಮುಂಚೆಯೇ ಆಫೀಸಿಗೆ ಹೋಗಬೇಕಾದ್ದರಿಂದ, ಕುಕ್ಕರಿನಲ್ಲಿ ಅನ್ನ ಮತ್ತು ಬೇಳೆ–ತರಕಾರಿ ಬೇಯಿಸಿಟ್ಟು ಬಿಡುತ್ತೇನೆ, ತಿಂಡಿಗೆ ದಿನವೂ ಉಪ್ಪಿಟ್ಟು ಮಾಡ್ತೇನೆ, ಭಾನುವಾರ ಮಾತ್ರ ಬೇರೆ ತಿಂಡಿ ಎಂದು ಹೇಳಿದರು.

ಉಪ್ಪಿಟ್ಟಿಗೆ 'ಬ್ರಹ್ಮಚಾರಿಗಳ ಸಂಗಾತಿ' ಎಂಬ ಬಿರುದು ಕೊಟ್ಟರು ಬೇರೆ. ದಿನವೂ ಉಪ್ಪಿಟ್ಟು ತಿನ್ನುವ ಗ್ರಹಚಾರ ಬಂತಲ್ಲಾ ಅಂದುಕೊಂಡೆ.

ಆದರೆ ತಗೊಳ್ಳಿ, ನನಗೆ ಆಶ್ಚರ್ಯ ಕಾದಿತ್ತು. ಒಂದು ದಿವಸ ಟೊಮೆಟೋ ಉಪ್ಪಿಟ್ಟು, ಮರುದಿನ ಸಾದಾ ಉಪ್ಪಿಟ್ಟು. ವಿವಿಧ ತರಕಾರಿಗಳೆಲ್ಲ ಉಪ್ಪಿಟ್ಟಿನಲ್ಲಿ ಕಾಣತೊಡಗಿದುವು. ತರಕಾರಿ ಜಾಸ್ತಿ ಆದಾಗ ಪಲ್ಯದ ಥರ ಆಗಿಬಿಡುತ್ತಿತ್ತು. ಒಂದು ದಿನ ನೀರು ಜಾಸ್ತಿಯಾಗಿ ಕೊತ ಕೊತ ಅನ್ನುವಾಗ ಅದನ್ನು ಎಲೆಯ ಮೇಲೆ ತಟ್ಟಿ ಕಾವಲಿಯ ಮೇಲೆ ತುಪ್ಪ ಸವರಿ ಅದನ್ನು ರೊಟ್ಟಿಯಂತೆ ಹಾಕಿ "ಉಪ್ಪಿಟ್ಟು ರೊಟ್ಟಿ" ಅಂತ ಹೇಳಿಕೊಟ್ಟರು! ಉಪ್ಪು ಹುಳಿ ಖಾರದ ಪ್ರಮಾಣದ ಅನುಭವ ಹೇಗೋ ಅವರಿಗೆ ಒಲಿದಿದ್ದರಿಂದ ಹಾಗೂ ನನಗೆ ಹಸಿವೆ ಜೋರಾಗಿ ಇರುತ್ತಿದ್ದುದರಿಂದ ಏನು ಕೊಟ್ಟರೂ ಗಬಗಬ ತಿನ್ನುತ್ತಿದ್ದೆ. ಇನ್ನೊಂದು ದಿನ ಹೀಗೇ ನೀರಾದಾಗ ಅವಲಕ್ಕಿ ಹುರಿದು ಬೆರಸಿ "ಗರಿಮುರಿ ಉಪ್ಪಿಟ್ಟು" ಎಂದರು! ಸಕ್ಕರೆಯನ್ನು ಉದುರಿಸಿದ್ದರಿಂದ ಒಂದು ತರಹ ಚೆನ್ನಾಗಿತ್ತು. ಗೊಜ್ಜವಲಕ್ಕಿ ಮಾಡಿದಂತೆ ಒಮ್ಮೆ ಗೊಜ್ಜುಪ್ಪಿಟ್ಟು ಮಾಡಿದ್ದರು!

ಪ್ರತಿ ಶನಿವಾರ ಅವರ ಸ್ನೇಹಿತೆ ಒಬ್ಬರಿಂದ ನಾಚಿಕೆ ಪಡದೆ ಕೇಳಿ ತಿಂಡಿಗಳ ವಿವರ ಬರೆದು ತಂದು ಭಾನುವಾರ ಪ್ರಯೋಗಿಸುತ್ತಿದ್ದರು. ಆದರೆ ಇವರಿಗೆ ತಿಂಡಿ ಮಾಡಿ ಅದಕ್ಕೆ ಪ್ರತ್ಯೇಕವಾಗಿ ಚಟ್ನಿ–ಗೊಜ್ಜು ಅಥವಾ ಪಲ್ಯ ಮಾಡುವುದು ಬೇಸರ. ಎಲ್ಲವೂ ಸ್ವಯಂಪೂರ್ಣವಾಗಿದ್ದರೆ ಖುಷಿ. ಹೀಗಾಗಿ ಅವರಿಗೆ ಮೆಚ್ಚಿದ ಸಮೋಸಾ, ಕಟ್ಲೆಟ್, ತರಕಾರಿ ಪರೋಟಗಳ ಮೆರವಣಿಗೆ ನಡೆಯಿತು. ಒಮ್ಮೆ ಮಾತ್ರ ನಾನ್ ಮಾಡಿದ್ದರು. ಅದಕ್ಕೆ ತಿನ್ನಲು ಅಂಗಡಿಯಿಂದ ತಂದಿದ್ದ ಪುಳಿಯೋಗರೆ ಗೊಜ್ಜನ್ನು ಹಾಕಿದಾಗ ಮಾತ್ರ ಬೇಸರವಾಯಿತು. ಆದರೆ ಇದನ್ನು ಊಹಿಸಿದ್ದ ಅವರ ಸ್ನೇಹಿತೆ ಮೊದಲೇ ಕೊಡುಬಳೆ ಕಳಿಸಿದ್ದರು.

ಅಂತೂ ಬೇಸರವಿಲ್ಲದೆ ಅಡುಗೆ ಮನೆಯಲ್ಲೇ ಹುಟ್ಟಿ ಬೆಳೆದವರಂತೆ ಉತ್ಸಾಹದಿಂದ ಇವರು ಓಡಾಡುವುದು ನೋಡಿದಾಗ ಕಣ್ಣು ತುಂಬಿ ಬರುತ್ತದೆ. ಅಡುಗೆ ಮನೇನ ನಿನಗಿಂತ ಕ್ಲೀನಾಗಿ ಇಟ್ಟಿದ್ದೇನೆ ಅಂತ ಮೂದಲಿಸುವಾಗ ಸಿಟ್ಟು ಬರುವುದಿಲ್ಲ.

**–ತಿರುಮಲೇಶ್ವರಿ ವಿಠಲ್**

*(ಮುಂದಿನ ಸಂಚಿಕೆಯಲ್ಲಿ)*

# ದೀಪಾವಳಿಗೆ ಹೂಗಳ ರಂಗೋಲಿ









ಹಬ್ಬ ಹರಿದಿನಗಳ ಆಚರಣೆಯೊಂದಿಗೆ ಮನೆಯನ್ನು ಅಲಂಕರಿಸುವುದೂ ಸಂಪ್ರದಾಯ. ಮುಂಬಾಗಿಲಲ್ಲಿ ಹಸಿರೆಲೆಯ ತೋರಣವಾದರೆ ಅಂಗಳದಲ್ಲಿ ಕಂಗೊಳಿಸುವುದು ರಂಗೋಲಿಯ ಚಿತ್ತಾರ. ಪ್ರಕೃತಿ ಸಹಜವಾದ ಬಣ್ಣಗಳಿರುವ ಹೂವು ಎಲೆ ಮತ್ತು ಬೀಜಗಳನ್ನು ವಿವಿಧ ಆಕೃತಿಗಳಲ್ಲಿ ಜೋಡಿಸುವುದರಿಂದಲೂ ಈ ರಂಗೋಲಿಯ ಅಂದ ಆಕರ್ಷಣೆಯನ್ನು ಹೆಚ್ಚಿಸಬಹುದು.

ದೀಪಾವಳಿಯ ಸ್ವಾಗತಕ್ಕೆ ಇಂತಹ ಸುಂದರ ರಂಗೋಲಿಯ ಚಿತ್ರಗಳು ಇಲ್ಲಿವೆ. ಇದರ ರಚನೆಗೆ ಬಳಸಿರುವ ಎಲೆ ಬೀಜ ಮತ್ತು ಹೂಗಳು – ಜೀನಿಯಾ, ಸೇವಂತಿಗೆ, ಕಡ್ಲೆಹೂವು, ಗೊಂಡೆಹೂವು, ಬಿಳಿಮುಸಂಡಾ, ಕ್ರೋಟನ್, ಮಧುಮಾಲತಿ, ಬೋಗನ್‌ವಿಲಾ ಆಕಾಶಬಳ್ಳಿಯ ಎಲೆಗಳು ಹಾಗೂ ಕಾಡು ಹೂಗಳ ಬೀಜಗಳು.

ಯಜ್ಞಾವತಿ ಕೇಶವ್ ಕಂಗೇನ್

ಧಾರಾವಾಹಿ

# ಸಪ್ತಸ್ವರ

—ಗೀತಾ ಸೀತಾರಾಮ್

ನನ್ನ ಮನೆಗೆ ಬಂದ ಭಾಗ್ಯದೇವತೆಯೇ ಬೆನ್ನು ತಿರುಗಿಸಿ ಹೋಗುವಂತಾಯ್ತು ನನಗೆ. 'ನೀನು ಪೂಜಿಸುವ ಗೋಪಾಲಕೃಷ್ಣ ನಿನ್ನನ್ನು ರಕ್ಷಿಸಿದನೇ' ಎಂದು ಏಸುಕ್ರಿಸ್ತ ಗಹಗಹಿಸಿ ನಕ್ಕಂತಾಯಿತು ನನಗೆ. ನಾನು ಉನ್ಮತ್ತಳಂತೆ ಓಡಿಹೋಗಿ ಅವನ ಕೈ ಹಿಡಿದು ಹೇಳಿದೆ. "ನಿಲ್ಲು ಜೇಮ್ಸ್, ನೀನಿಲ್ಲದೆ ನಾನು ಇರಲಾರೆ ಎನಿಸುತ್ತಿದೆ. ಇಷ್ಟು ದಿನ ನಿನ್ನನ್ನು ಕಾಣದೆ ಬದುಕಿದ್ದ ನಿಜ. ಆದರ ಅದಕ್ಕೊಂದು ಅರ್ಥವಿರಲಿಲ್ಲ. ಇದೀಗ ನನ್ನ ಬದುಕಿಗೊಂದು ಅರ್ಥ ಕಾಣಿಸುತ್ತಿದೆ. ಜಾತಿ ಯಾವುದಾದರೇನು? ನಿನ್ನಲ್ಲಿರುವ ಹೃದಯ, ಅದರ ಅಮೃತತ್ವದ ಅರ್ಥವಾಗಿದೆಯಲ್ಲ ನನಗೆ. ನಿನ್ನ ದೈವತ್ವ, ನನ್ನ ಜಾತಿಯ ಎಷ್ಟು ಮಂದಿಗಿದೆ? ನನಗಾಗಿ ನೀನು ಇಷ್ಟು ಆಸಕ್ತನಾಗಿ ಬಂದಿರುವಾಗ, ನಾನು ಜಾತಿಯ ನೆಪವೊಡ್ಡಿ ಇಲ್ಲ ಎನ್ನಲಾರೆ. ನಾನು ನಿನ್ನವಳಾಗಲು ಸಿದ್ಧಳಿದ್ದೇನೆ ಜೇಮ್ಸ್' ಪ್ರೀತಿಯಿಂದ ಅವನ ತೋಳಿಗೆ ನನ್ನ ಮುಖವನ್ನು ಉಜ್ಜಿದೆ.

ಜೇಮ್ಸ್ ತನ್ನೆರಡೂ ಕೈಗಳಲ್ಲಿ ನನ್ನ ಮುಖ ಹಿಡಿಸಿಕೊಂಡು ನನ್ನ ಕಣ್ಣಳಲ್ಲಿ ತನ್ನ ಒಲವಿನ ದೃಷ್ಟಿ ನೆಟ್ಟು ಹೇಳಿದ 'ಶ್ರುತಿ, ನನ್ನ ಬದುಕಿನ ಆಧಾರ ಶ್ರುತಿ ನೀನಾಗುತ್ತೇನೆಂದು ಭರವಸೆ ನೀಡುತ್ತಿರುವಾಗ ಇನ್ನು ನನ್ನಂತಹ ಪುಣ್ಯಶಾಲಿ ಬೇರೆ ಯಾರಿದ್ದಾರೆ? ನಾನು ನಿನ್ನ ಧರ್ಮ, ಸಂಸ್ಕೃತಿಯನ್ನು ಯಾವ ಕಾರಣಕ್ಕೂ ಅವಹೇಳನ ಮಾಡುವುದಿಲ್ಲ. ನಿನ್ನ ನಂಬಿಕೆಗಳಿಗೆ ಅಡ್ಡಿ ಬರುವುದಿಲ್ಲ. ಇದೇ ಸಹನೆಯ ನಿಲುವನ್ನು ನನ್ನ ಧರ್ಮದ ಬಗ್ಗೆಯೂ ನೀನು ತಳೆಯುವೆ ಎಂಬ ನಂಬಿಕೆ ನನಗಿದೆ. ಇನ್ನು ನಾವಿಬ್ಬರು ಒಂದಾಗಲು ಅಡ್ಡಿಯೇನಿದೆ?'

ಜೇಮ್ಸ್‌ನ ಭರವಸೆಯ ಮಾತಿಗೆ ನಾನು ಸೋತೆ. ಅವನ ಪ್ರೇಮಹಸ್ತದ ನೆರಳಿನಲ್ಲಿ ನಾನು ನನ್ನ ದುಃಖವನ್ನೆಲ್ಲಾ ಮರೆತೆ. ಅವನ ವಿಶಾಲವಾದ ಎದೆಯಲ್ಲಿ ಹುದುಗಿ ನನ್ನ ನೋವೆಲ್ಲಾ ಇಂಗಿ ಹೋಗುವಷ್ಟು ಅತ್ತುಬಿಟ್ಟೆ. ಅವನ ಅಧರಗಳ ಬಿಸಿಗೆ ಬೆಣ್ಣೆಯಂತೆ ಕರಗಿಹೋದೆ.

ಮಧುರ ಲಹರಿಗಳ ದಾಳಿಯಲ್ಲಿ ಅದೆಷ್ಟೋ ಹೊತ್ತು ನನ್ನನ್ನೇ ನಾನು ಮರೆತಿದ್ದೆ. ಇಂದಿಗೆ ನನ್ನ–ಜೇಮ್ಸ್‌ನ ಮದುವೆಯಾಗಿ ಹದಿನಾರು ವರ್ಷಗಳಾದುವು. ಓಹ್! ನನ್ನ ಜೀವನದಲ್ಲೇ ಅತ್ಯಂತ ಸ್ಮರಣೀಯ ದಿನಗಳವು. ಸುಖ ಇರುವುದು ವಿದ್ಯೆಯಲ್ಲಲ್ಲ, ಮತದಲ್ಲಲ್ಲ, ಹಣದಲ್ಲಲ್ಲ, ಕಾಣುವ ಕಣ್ಣುಗಳಲ್ಲಿ, ಅರ್ಥ ಮಾಡಿಕೊಳ್ಳುವ ಹೃದಯದಲ್ಲಿ, ಇದು ನನ್ನ ಸ್ವಾನುಭವ.

ನಾನು ಅನ್ಯಮತದವನನ್ನು ಪ್ರೀತಿಸಿ–ಮದುವೆಯಾಗುತ್ತೇನೆಂದಾಗ, ಬಿಂದೂ, ರಜನಿ, ಪೂರ್ಣ ನನ್ನೀ ನಿರ್ಧಾರಕ್ಕೆ ಸಂಪೂರ್ಣ ಬೆಂಬಲ ಕೊಟ್ಟರು. ನಮ್ಮ ಪ್ರೇಮಫಲಗಳಾದ ಜೋಸೆಫ್, ಆಶಾರಿಗೆ ಉಭಯ ಧರ್ಮಗಳ ಒಳಿತನ್ನು ಹೇಳಿಕೊಟ್ಟಿದ್ದೇವೆ.

ಹಣದಲ್ಲಿ ನಾನೆಂದೂ ಉರುಳಾಡಲಿಲ್ಲ. ಅದಕ್ಕಾಗಿ ಆಶಿಸಲೂ ಇಲ್ಲ. ಹಣಕ್ಕಿಂತ, ವಿದ್ಯೆಗಿಂತ ಹೃದಯಕ್ಕೇ ಹೆಚ್ಚು ಬೆಲೆ ಕೊಟ್ಟೆ. ಅದಕ್ಕಾಗಿ ನಾನೆಂದೂ ಪಶ್ಚಾತ್ತಾಪ ಪಡಲಿಲ್ಲ. ಬದಲಿಗೆ, ನನ್ನ ಆಯ್ಕೆಗೆ ಸಂತಸಪಟ್ಟಿದ್ದೇನೆ. ಜೇಮ್ಸ್‌ನ ನಿರ್ಮಲ ಪ್ರೇಮಗಂಗೆಯಲ್ಲಿ ಮೀಯುತ್ತಿರುವ ನಾನು ಪರಮಸುಖಿ.

ರಜನಿ :

ಕವಿತಾಳ ಮದುವೆಯ ಕರೆಯೋಲೆ ಕೈ ಸೇರಿದಾಗ ಎಲ್ಲರಿಗಿಂತ ಹೆಚ್ಚು ವಿಸ್ಮಿತಳಾದವಳು ನಾನು. ಬದುಕಿನ ಕರಾಳ ಮುಖವನ್ನು ಕಂಡು ಕಂಗೆಟ್ಟು, ಮದುವೆಯೇ ಬೇಡ ಎಂದು ನಿರ್ಧರಿಸಿದ ಕವಿತಾ, ಬಿಂದೂ, ಪೂರ್ಣ, ಶ್ರುತಿಯರ ಮಾತನ್ನು ಲೆಕ್ಕಿಸದೆ ಕನ್ಯೆಯಾಗಿಯೇ ಉಳಿದಿದ್ದಳು.

ಅವಳು ನಮ್ಮ ಬ್ಯಾಂಕ್‌ನಿಂದ ವರ್ಗವಾಗಿ ಹದಿನೈದು ವರ್ಷಗಳೇ ಆಗಿರಬೇಕು. ಬ್ಯಾಂಕಿನ ಪರೀಕ್ಷೆಗಳನ್ನು ಪಾಸು ಮಾಡಿ, ಮಂಗಳೂರಿನ ಹೆಡ್ ಆಫೀಸ್‌ನಲ್ಲಿ ದೊಡ್ಡ ಹುದ್ದೆಯಲ್ಲಿದ್ದಾಳೆಂದೂ ತಿಳಿದಿತ್ತು.

ನನ್ನ–ವಿಶ್ವಾಸರ ಪುನರ್‌ವಿವಾಹವಾದಾಗ ಅವಳು ನಮ್ಮ ಬ್ರಾಂಚ್‌ನಲ್ಲಿಯೇ ಇದ್ದಳು. ನಾನು ವಿಶ್ವಾಸರನ್ನು ಮರುಮದುವೆಯಾಗುವೆನೆಂದಾಗ ಮೊದಲು ಪ್ರತಿಭಟಿಸಿದವಳು ಕವಿತಾ. 'ಗಂಡಿನ ಆಸರೆಯಿಲ್ಲದ ಹೆಣ್ಣು ಬದುಕಲು ಸಾಧ್ಯವೇ ಇಲ್ಲ ಎಂದು ನಿನ್ನ ಅಭಿಪ್ರಾಯವೇನು? ಮದುವೆಯ ಬಗ್ಗೆ ನಿನ್ನಂತಹ ಕಹಿ ಅನುಭವವುಳ್ಳವಳೂ, ಮತ್ತೊಮ್ಮೆ ಮದುವೆಯಾಗುತ್ತಿರುವುದು ಪ್ರಪಂಚದ ಅದ್ಭುತಗಳಲ್ಲಿ ಒಂದು' ಎಂದಿದ್ದಳು.

ಅದಕ್ಕೆ ನಾನು "ಹಾಗಲ್ಲ ಕವಿತಾ. ಹೆಣ್ಣು ಗಂಡಿನ ಆಸರೆಯಿಲ್ಲದೆ ಬದುಕಬಲ್ಲಳು ನಿಜ. ಆದರೆ ಯಾವ ತಪ್ಪನ್ನೂ ಮಾಡದ ವಿಶ್ವಾಸ, ಅವರು ಮಗಳು ವಿದ್ಯಾಳಿಗೆ ವಿಧಿಯಿತ್ತಿರುವ ಶಿಕ್ಷೆಯನ್ನು ನೋಡುವಾಗ, ಅವರಿಗೆ ಇಂತಹ ಶಿಕ್ಷೆ ತರವಲ್ಲ ಎನಿಸುತ್ತದೆ. ಅವರಿಗಾಗಿ ನಾನು ಮತ್ತೆ ಮದುವೆಯಾಗಲು ನಿರ್ಧರಿಸಿದ್ದೇನೆ. ವಿಶ್ವಾಸರ ಬಾಳಿನಲ್ಲಿ ವಿಶ್ವಾಸ ಮೂಡಿಸುವ ಜವಾಬ್ದಾರಿ ಹೊತ್ತಿದ್ದೇನೆ.

'ಕವಿತಾ, ನನ್ನ ಬದುಕಿಗೆ ಈಗ ಯಾವ ಅರ್ಥ ಇದೆ ಹೇಳು? ವಿಶ್ವಾಸರನ್ನು ಮದುವೆಯಾದರೆ ಅವರಿಗೊಂದು ಹೊಸ ಬಾಳಿಗೆ ನಾಂದಿ ಹಾಡಿದಂತಾಗುತ್ತದೆ. ವಿದ್ಯಾಳಿಗೆ ತಾಯಿಯ ಮಮತೆಯನ್ನು ತುಂಬಿಕೊಟ್ಟಂತಾಗುತ್ತದೆ. ಉಳಿದಿರುವ ಬಾಳನ್ನು ಉಪಯುಕ್ತವಾಗಿ ಕಳೆದಂತಾಗುವುದಿಲ್ಲವೇ ನೀನೇ ಹೇಳು?" ಎಂದಿದ್ದೆ.

"ಏನೋ ನಿನ್ನ ಧೈರ್ಯ ನನಗಿಲ್ಲ. ನಾವು ಎಂದಿದ್ದರೂ ಈ ನೀರಸ, ಅರ್ಥರಹಿತ ಬದುಕಿಗೇ ಹೊಂದಿಕೊಂಡು ಬದುಕುವವಳು. ಮದುವೆ ಎಂಬ ಮೂರಕ್ಷರಕ್ಕೂ ನನಗೂ ಬಹಳ ದೂರ. ಅದರ ಕಷ್ಟ, ಸುಖ, ನೋವು–ನಲಿವು ಯಾವುದೂ ಬೇಡಮ್ಮ ನನಗೆ" ಎಂದಿದ್ದ ಕವಿತಾ ಇಂದು, ಅದೂ ಈ ಮಧ್ಯ ವಯಸ್ಸು ದಾಟಿದ ಮೇಲೆ, ಮದುವೆಯಾಗುವ ನಿರ್ಧಾರ ಮಾಡಿದಳೇ!!?

ನಂಬಲೂ ಸಾಧ್ಯವಾಗುತ್ತಿಲ್ಲ! ಮನುಷ್ಯನ ಮನಸ್ಸಿನ ಏರಿಳಿತಗಳು ಯಾವ ಕ್ಷಣದಲ್ಲಿ ಹೇಗಿರುತ್ತದೆ ಎಂದೇ ತಿಳಿಯುವುದಿಲ್ಲ! ಶ್ರುತಿ ನೋಡಿದರೆ ಅನ್ಯ ಜಾತಿಯ ಜೇಮ್ಸ್‌ನನ್ನು ಮದುವೆಯಾದಳು!

ಶ್ರುತಿಯ ಮದುವೆಯ ವೇಳೆಗೆ ಕವಿತಾಳಿಗೆ ಹೈದರಾಬಾದಿಗೆ ವರ್ಗವಾಗಿತ್ತು. ಇಲ್ಲಿಯೇ ಇದ್ದಿದ್ದರೆ ಶ್ರುತಿಯೊಂದಿಗೂ ಜಗಳವಾಡುತ್ತಿದ್ದಳೇನೋ!

ಕವಿತಾ ಮದುವೆಯಾಗದಿರುವುದಕ್ಕೆ, ಸುಖ ವಂಚಿತಳಾಗುವುದಕ್ಕೆ ನಾವೆಲ್ಲ ಪರೋಕ್ಷ ಕಾರಣಗಳಾದೆವೋ ಎಂದು ನಮ್ಮೆಲ್ಲರಿಗೂ ಬೇಸರವಿತ್ತು. ಸದ್ಯ ಕವಿತಾ ಮದುವೆಯಾಗುತ್ತಿರುವುದು ನಮಗೆಲ್ಲಾ ಒಂದು ತುಂಬು ಸಂತಸದ ಸುದ್ದಿ.

ಅವಳು ಯಾವುದೋ ಪ್ರೇಮಜಾಲಕ್ಕೆ ಸಿಕ್ಕಿರಬೇಕು. ಅವಳಿಗೇ ಪತ್ರ ಬರೆದು, ವಿಶದವಾಗಿ ಬರೆಯುವಂತೆ ಹೇಳಬೇಕು. 'ಈ ವಯಸ್ಸಿನಲ್ಲಿ ಮದುವೆಯೇ?' ಎಂದು ಒಂದಿಬ್ಬರು ಮೂಗು ಮುರಿದದ್ದುಂಟು, ನಮ್ಮ ಬ್ಯಾಂಕ್‌ನಲ್ಲಿ. ಆದರೆ ನನಗೆ ಹಾಗನ್ನಿಸುವುದಿಲ್ಲ. ಮದುವೆ ಸಂತಾನಾಪೇಕ್ಷೆಯಿಂದಾಗಲೀ, ದೈಹಿಕ ಅವಶ್ಯಕತೆಗಳಿಗಾಗಿಯಾಗಲೀ ಮಾಡಿಕೊಳ್ಳಬೇಕಾದ ನಿರ್ಬಂಧವಲ್ಲ. ಅದು ಪರಸ್ಪರ ಅನುಕೂಲಕ್ಕಾಗಿ, ಅವಲಂಬನೆಗಾಗಿ, ಅರ್ಥಸಹಿತ ಬಾಳುವುದಕ್ಕಾಗಿ ಮಾಡಿಕೊಳ್ಳುವ ಒಂದು ಒಪ್ಪಂದ ಅಷ್ಟೆ.

ಇದಕ್ಕೆ ಜಾತಿ, ವಯಸ್ಸು, ಅಂತಸ್ತು ಯಾವುದೂ

ಇಲ್ಲಿಯವರೆಗೆ....

ಬದುಕಿನ ನಲವತ್ತೆದು ವಸಂತಗಳನ್ನು ಕಳೆದ ಕವಿತಾ ವಿದೇಶದಲ್ಲಿ ಅಂತರರಾಷ್ಟ್ರೀಯ ಬ್ಯಾಂಕಿಂಗ್ ಸಮ್ಮೇಳನ ಮುಗಿಸಿ ಬರುವಾಗ ಕೃಷ್ಣಮೂರ್ತಿಯವರ ಪ್ರೇಮಪಾಶದಲ್ಲಿ ಸಿಲುಕಿದಳು. ಅವರು ಅನುಕೂಲ ದಾಂಪತ್ಯದ ಕನಸು ಕಾಣತೊಡಗಿದರು. ಬಿಂದೂ ಮಕ್ಕಳನ್ನು ಹೆರದಿದ್ದರೂ ಸಾಕಿದ ಮಗು ರೇಖಾಳಿಂದಾಗಿ ಈಗ ಅಜ್ಜಿಯ ಪಟ್ಟ ಪಡೆದು ಸಂತೃಪ್ತಳಾಗಿದ್ದಾಳೆ. ಶ್ರುತಿಯ ಜೀವನದಲ್ಲಿ ಜೇಮ್ಸ್ ಪ್ರವೇಶಿಸಿದ್ದ. ಮಾತ್ರವಲ್ಲ ಅವಳ ಜೀವನದಲ್ಲಿ ಮೃದು ಮಧುರ ಶ್ರುತಿಯನ್ನೂ ಮೀಟಿದ್ದ.

—ಇನ್ನು ಮೇಲೆ

ಅಡ್ಡಿ ಬರುವ ಅಗತ್ಯವಿಲ್ಲ. ನಾನು ವಿಶ್ವಾಸರನ್ನು ಮದುವೆಯಾದಾಗ ನನಗೆ ಭವಿಷ್ಯದ ಬಗ್ಗೆ ಯಾವ ಕನಸುಗಳೂ, ಆಶೋತ್ತರಗಳೂ ಇರಲಿಲ್ಲ. ನನ್ನ ಮದುವೆ ಒಂದು ರೀತಿಯ 'ಸೀಮಿತ ಸಮಾಜಸೇವೆ' ಎಂದೇ ನನ್ನ ಅನಿಸಿಕೆ. ಅದಕ್ಕಾಗಿ ನಾನು ನನ್ನ ಸ್ವಾರ್ಥವನ್ನು ಸ್ವಲ್ಪ ಮಟ್ಟಿಗೆ ತ್ಯಾಗ ಮಾಡಬೇಕಾಗಿಯೂ ಬಂದಿತು.

ನಾನು ಒಪ್ಪಿದ್ದರೆ, ವಿಶ್ವಾಸರಿಗಿಂತ ಅನುಕೂಲರಾದ, ಅವಿವಾಹಿತ ತರುಣರು ನನ್ನನ್ನು ಮದುವೆಯಾಗಲು ಸಿದ್ಧರಿದ್ದರು. ಏಕೆಂದರೆ, ತಂದೆ–ತಾಯಿಯರಿಗೆ ಒಬ್ಬಳೇ ಮಗಳಾದ್ದರಿಂದ ನನ್ನ ಬಳಿ ಹೇರಳ ಹಣವಿತ್ತು.

ಆದರೆ ನಾನು ಬೆಲೆ ಕೊಟ್ಟದ್ದು ವಿಶ್ವಾಸರ ವಿಶ್ವಾಸಕ್ಕೆ. ನಾನು ನನ್ನನ್ನೇ ನೇಮಿಸಿಕೊಂಡದ್ದು ವಿದ್ಯಾಳ ಭವಿಷ್ಯವನ್ನು ರೂಪಿಸಲು. ಅದಕ್ಕಾಗಿ ವಿಶ್ವಾಸರ ಮಾತನ್ನು ಮೀರಿ ನಾನು ಗೆದ್ದಿದ್ದೇನೆ. ನಮ್ಮ ವಿವಾಹದ ನಂತರ ನಮ್ಮ ಮಧುಚಂದ್ರಕ್ಕೆ ನಾವು ಹೋದದ್ದು ವಿದ್ಯಾಳ ಜೊತೆ. ಅದೂ ನನ್ನದೇ ಅಪೇಕ್ಷೆ. ಅವಳನ್ನು ಅಜ್ಜಿಯ ಮನೆಯಲ್ಲಿ ಬಿಟ್ಟು ನಾವಿಬ್ಬರೇ ಮಧುಚಂದ್ರಕ್ಕೆ ಹೋದರೆ ಅವಳಿಗೆ ನನ್ನಲ್ಲಿ ಪ್ರೇಮ ಬೆಳೆಯುವ ಬದಲು ದ್ವೇಷ–ಮಾತ್ಸರ್ಯ ಬೆಳೆಯಬಹುದು ಎಂಬ ಕಾರಣದಿಂದ ನಾನು ಈ ವಿಚಾರವನ್ನು ವಿರೋಧಿಸಿ ಅವಳನ್ನು ಜೊತೆಗೇ ಕರೆದೊಯ್ದಿದ್ದೆ.

ನನಗೆ ವಿದ್ಯಾಳ ಮೇಲಿನ ಪ್ರೀತಿ ಎಂದಿಗೂ ತಗ್ಗಬಾರದೆಂಬುದಕ್ಕಾಗಿಯೇ ವಿಶ್ವಾಸರ ಇಚ್ಛೆಗೆ ವಿರೋಧವಾಗಿ ಗರ್ಭನಿಯಂತ್ರಣ ಮಾಡಿಸಿಕೊಂಡೆ. ಅವರಿಗೆ–ನನ್ನಿಂದ ಒಂದು ಗಂಡು ಮಗು ಪಡೆಯುವ ಹಂಬಲವಿತ್ತು. ಆದರೆ ವಿದ್ಯಾಳಿಗೆ ನಾನು ಬಲ ತಾಯಿಯಾಗಲಾರೆ ಎಂದಾಗ ಅವರೂ ಮೂಕರಾಗಿದ್ದರು.

ಬಿಂದು, ತನ್ನದೇ ಆದ ಮಗುವಿಗಾಗಿ ಹಂಬಲಿಸಿ, ಕಡೆಗೆ ಬೇರೊಬ್ಬಳು ಹೆತ್ತದ್ದನ್ನು ತನ್ನದೆಂದು ಭಾವಿಸಿ, ಲಾಲಿಸಿ, ಪೋಷಿಸಿದ್ದನ್ನು ನಾನೇ ಕಂಡಿದ್ದೇನೆ. ಅವಳಿಗಾದರೆ ಅದು ಅನಿವಾರ್ಯವಾಗಿತ್ತು. ಆದರೆ ನಾನು ಆ ಸ್ಥಿತಿಯನ್ನು ಸ್ವಇಚ್ಛೆಯಿಂದ ಆಹ್ವಾನಿಸಿಕೊಂಡೆ. ತನ್ನದೇ ರಕ್ತ ಮಾಂಸಗಳನ್ನು ಹಂಚಿಕೊಂಡು, ತನ್ನ ಉದರದಲ್ಲೇ ಬೆಳೆದು ಹೊರಬರುವ ಮಗು ಯಾವ ಹೆಣ್ಣಿಗೆ ಬೇಡ? ನನಗೆ ತಾನೆ ಬೇಕಿರಲಿಲ್ಲವೇ? ಮಾತೃತ್ವದ ಬಯಕೆ ನನಗೆ ತೀವ್ರವಾಗಿ ಇದ್ದದ್ದೇನೋ ನಿಜ.

ಆದರೆ ನನ್ನ ಹೊಟ್ಟೆಯಲ್ಲೇ ಮಗುವಾಗಿದ್ದರೆ, ವಿದ್ಯಾಳನ್ನು ನನಗೆ ಈಗಿನಂತೆ ಪ್ರೀತಿಸಲು ಸಾಧ್ಯವಿರುತ್ತಿತ್ತೇ? ವಿಶ್ವಾಸರಿಗೆ ನನ್ನ ಮೇಲಿರುವ ಪ್ರೀತಿ–ಗೌರವ ಈಗಿನಂತಿರುತ್ತಿತ್ತೇ? ಖಂಡಿತಾ ಇಲ್ಲ. ಈ ದೃಷ್ಟಿಯಿಂದ ನನ್ನ ತ್ಯಾಗವೂ ಒಂದು ರೀತಿಯಲ್ಲಿ ಸರಿಯೇ ಎನ್ನಿಸುತ್ತದೆ.

ವಿದ್ಯಾಳ ಮದುವೆಯಲ್ಲಿ ನಾವು ವಹಿಸಿದ ಪಾತ್ರ ಹೆಚ್ಚೇ ಎನ್ನಬಹುದು. ಯೌವನದ ಅಮಲಿನಲ್ಲಿ ನಾನು ಕಂಡ ಹುಚ್ಚು ಕನಸುಗಳಿಂದ ನನ್ನ ಮೇಲೆ ನಾನೇ ಚಪ್ಪಡಿ ಎಳೆದುಕೊಂಡದ್ದನ್ನು, ನಾನು ವಿದ್ಯಾ ವಯಸ್ಸಿಗೆ ಬಂದಾಗ, ಅವಳಿಗೆ ಮನಮುಟ್ಟುವಂತೆ ಹೇಳಿದ್ದೆ. ಅವಳದಕ್ಕೆ, 'ಮಮ್ಮೀ, ನೀನು ಯಾರೊಂದಿಗೆ ಮದುವೆಯಾಗು ಎನ್ನುತ್ತೀಯೋ ಅವರೊಂದಿಗೇ ಮದುವೆಯಾಗುತ್ತೇನೆ. ಇದರ ಸಂಪೂರ್ಣ ಜವಾಬ್ದಾರಿ ನಿನಗೆ–ಡ್ಯಾಡಿಗೆ ಬಿಟ್ಟಿದ್ದೇನೆ. ಸರಿಯಾ?' ಎಂದಿದ್ದಳು. ನನ್ನ ಕಣ್ಣೆದುರಿನಲ್ಲೇ ಬೆಳೆದು ದೊಡ್ಡವನಾದ ಶ್ರುತಿಯ ಅಣ್ಣನ ಮಗ ರವೀಂದ್ರನನ್ನು ನನ್ನ ಅಳಿಯನನ್ನಾಗಿ ಆಯ್ಕೆ ಮಾಡಿದವಳೂ ನಾನೇ. ಜೀವನದ ನೋವು–ನಲಿವುಗಳ ಪರಿಚಯವಿರುವ, ಸನ್ನಡತೆಯ ಹುಡುಗ ರವಿ. ಹುಡುಗ ಬುದ್ಧಿವಂತ ಕೂಡ. ಇದೀಗ ಅಮೆರಿಕದಲ್ಲಿ ಕಂಪ್ಯೂಟರ್ ಎಂಜಿನಿಯರ್ ಆಗಿದ್ದಾನೆ.

ಹಣ, ಹುಳಿತು ಬೀಳುವಷ್ಟು ನನಗೇ ಇದೆ. ಅದನ್ನು ನನ್ನ ವಿದ್ಯಾಳಿಗಲ್ಲದೇ ಇನ್ನಾರಿಗೆ ಕೊಟ್ಟೇನು? ಕಂಡು–ಕೇಳಿದ ಒಳ್ಳೆಯ ಹುಡುಗನೆಂದೇ ನಾನು ರವಿಯನ್ನು ಆರಿಸಿದ್ದು. ನನ್ನ ಆಯ್ಕೆಗೆ ವಿಶ್ವಾಸರೂ ಒಪ್ಪಿದಾಗ, ನಾವು ಶ್ರುತಿ–ಬಿಂದೂರ ಮೂಲಕ ರೇಖಾಳ ಪತಿಯೊಡನೆ ವ್ಯವಹರಿಸಿದೆವು.

ಕಳೆದ ರಜೆಯಲ್ಲಿ ರವಿ ಭಾರತಕ್ಕೆ ಬಂದಾಗ ವಿದ್ಯಾ–ರವೀಂದ್ರರ ಮದುವೆಯನ್ನು ನಿಷ್ಕರ್ಷೆ ಮಾಡಿದೆವು. ವಿದ್ಯಾಳ ಎಂ.ಬಿ.ಎ. ಇದೀಗ ಮುಗಿದಿದೆ. ಆಷಾಢ ಕಳೆದ ಮೇಲೆ ಅವರಿಬ್ಬರ ಮದುವೆ. ಆ ನಂತರ ಅವಳೂ ವಿದೇಶಕ್ಕೆ ಹಾರುವವಳೇ. ಆಗ ನನಗೆ ಪುನಃ ಬೇಸರ.

ವಿದ್ಯಾಳನ್ನು ನಾನು ಪ್ರೀತಿಸುವಷ್ಟೇ, ಅವಳೂ ನನ್ನನ್ನು ಹಚ್ಚಿಕೊಂಡಿದ್ದಾಳೆ. ನನ್ನ ಮಾತೃತ್ವದ ಬಯಕೆಯನ್ನು ಅವಳು ಇಂಗಿಸಿದ್ದಾಳೆ. ನನ್ನ ಮಮತೆಯ ವರ್ಷದಲ್ಲಿ ಮಿಂದು ಅವಳೂ ತೃಪ್ತಳಾಗಿದ್ದಾಳೆ.

(51ನೇ ಪುಟಕ್ಕೆ)



### ಲೋಕಸಭೆ ಪ್ರವೇಶಿಸಿದ ಮೊದಲ ಕುಟುಂಬ

ಗ್ವಾಲಿಯರ್‌ನ ರಾಜಕುಟುಂಬ – ಗ್ವಾಲಿಯರ್ ರಾಜಮಾತೆ ವಿಜಯರಾಜೆ ಸಿಂಧ್ಯಾ ಹಾಗೂ ಆಕೆಯ ಇಬ್ಬರು ಮಕ್ಕಳು – ಎಂಟನೇ ಚುನಾವಣೆಯಲ್ಲಿ ಗೆದ್ದು ಲೋಕಸಭೆಯನ್ನು ಪ್ರವೇಶಿಸಿ ಒಂದು ದಾಖಲೆಯನ್ನೇ ಮಾಡಿದೆ. ರಾಜಮಾತೆ ವಿಜಯಾರಾಜೆ ಸಿಂಧ್ಯಾ ಹಾಗೂ ಆಕೆಯ ಪುತ್ರಿ ವಸುಂಧರಾ ರಾಜೆ ಬಿ.ಜೆ.ಪಿ. ಅಭ್ಯರ್ಥಿಗಳಾಗಿ ಲೋಕಸಭೆ ಪ್ರವೇಶಿಸಿದರೆ, ಮಾಧವರಾವ್ ಸಿಂಧ್ಯಾ (ರಾಜ ಮಾತೆಯ ಪುತ್ರ) ಕಾಂಗ್ರೆಸ್ ಅಭ್ಯರ್ಥಿಯಾಗಿ ಲೋಕ ಸಭೆ ಪ್ರವೇಶಿಸಿ ಈಗ ಮಂತ್ರಿಯೂ ಆಗಿದ್ದಾರೆ.

# ಪ್ರಪಂಚ ಚಿತ್ರ

ನ್ಯೂಯಾರ್ಕ್‌ನಲ್ಲಿ ಗಿಜಿಗುಟ್ಟುವ ಚಿಕ್ಕ ಸಂದು ದಾಟುವುದಕ್ಕಾಗಿ ಮೇಲೆ ಒಂದು ಕಟ್ಟಡದಿಂದ ಇನ್ನೊಂದು ಕಟ್ಟಡಕ್ಕೆ ಸಂಪರ್ಕ ಕಲ್ಪಿಸುವ ಸೇತುವೆಗಳಿವೆ.



'ಸ್ಟ್ಯಾಚ್ಯು ಆಫ್ ಲಿಬರ್ಟಿ' ಹಿಂಭಾಗದ ಚಿತ್ರ



ಹಾಲಿವುಡ್‌ನಲ್ಲಿ ನೋಮ್ಯಾನ್ಸ್ ಚೈನೀಸ್ ಸಿನಿಮಾ ಥಿಯೇಟರ್



ಅಮೆರಿಕದಲ್ಲೂ ಭಿಕ್ಷುಕರು! ಸ್ಟ್ಯಾಚ್ಯು ಆಫ್ ಲಿಬರ್ಟಿಗೆ ಹೋಗುವ ಮಾರ್ಗದಲ್ಲಿ ಫೆರ್ರಿ ಸರ್ವೀಸ್‌ಗಾಗಿ ಕಾಯುವಾಗ ಭಿಕ್ಷುಕರ ಬಡಿವಾರ.



[illegible]

- [illegible]

(ಪುಟ 49ರಿಂದ)

ವಿಶ್ವಾಸನನ್ನೂ, ವಿದ್ಯಾಳನ್ನೂ ಸುಖವಾಗಿಟ್ಟುಕೊಳ್ಳುವುದರಲ್ಲೇ ನಾನು ನನ್ನ ಜೀವನದ ಸಾಫಲ್ಯವನ್ನು ಕಂಡುಕೊಂಡಿದ್ದೇನೆ. ನನ್ನ ಬದುಕಿಗೊಂದು ಅರ್ಥವನ್ನು ಕಲ್ಪಿಸಿಕೊಂಡಿದ್ದೇನೆ. ನನ್ನ ಬದುಕಿನ ನಾವೆಗೆ ನಾನೇ ಹುಟ್ಟು ಹಾಕಿ, ಅದರ ಗತಿಯನ್ನು ಬದಲಿಸಿದ್ದೇನೆ.

ಸ್ಮೃತಿ :

ಕವಿತಾಳ ಲಗ್ನಪತ್ರಿಕೆ ಕೈ ಸೇರಿದಾಗ ನನಗಾದ ಅಚ್ಚರಿ ಅಷ್ಟಿಷ್ಟಲ್ಲ. ಅವಳು ಈ ವಯಸ್ಸಿನಲ್ಲಿ ಮದುವೆಯಾಗುತ್ತಿದ್ದಾಳಲ್ಲಾ ಎಂಬ ಆಶ್ಚರ್ಯದ ಜೊತೆಗೆ, ನಾನಿರುವ ಸ್ಥಳವನ್ನು ಹೇಗೋ ಪತ್ತೆ ಹಚ್ಚಿದ್ದಾಳಲ್ಲಾ ಎಂದು.

ಕವಿತಾ ಇಂಥಹುದ್ದೊಂದು ನಿರ್ಧಾರಕ್ಕೆ ಬಂದೇ ಬರುತ್ತಾಳೆಂದು ನಾನೆಂದೋ ಊಹಿಸಿದ್ದೆ. ಒಂದು ಮಾವಿನ ಹಣ್ಣು ಕೊಳೆತು ಹೋಗಿದ್ದರೆ ಗೂಡೆಯಲ್ಲಿನ ಮಾವಿನ ಹಣ್ಣುಗಳೆಲ್ಲಾ ಕೊಳೆತಿವೆ ಎಂದರ್ಥವೇನು? ಮೇನಕಾ, ರಜನಿಯರ ಸೋಲಿಗೆ ಹೆದರಿ, ಗಂಡು ಜಾತಿಯನ್ನೇ ದ್ವೇಷಿಸಿದರೆ ಅದು ಮೂರ್ಖತನವಲ್ಲವೇನು?

ಹದವಾದ ಹಣ್ಣನ್ನು ಆಯ್ದುಕೊಂಡು, ಅದನ್ನು ಕಡೆತನಕ ಚೀಪುವ ಅದೃಷ್ಟವಿಲ್ಲದೆ ಕೈ ಜಾರಿ ಕೆಳಗೆ ಬೀಳಿಸಿಕೊಂಡ ಮಗುವಿನಂತಹ, ಹತಭಾಗ್ಯ ಸ್ಥಿತಿ ನನ್ನದು. ಆದರೆ ನನ್ನ ಈ ಕಥೆಯ ಪ್ರಾರಂಭವನ್ನು ನಾನು ಮರೆಯುವಂತೆಯೇ ಇಲ್ಲವಲ್ಲಾ!

ಅಂದು ನಾನು ಶ್ಯಾಮಸುಂದರನ ಪ್ರೀತಿಯ ಅಮೃತಧಾರೆಯಲ್ಲಿ ಅಷ್ಟೊಂದು ಮಿಂದಿರದಿದ್ದರೆ, ಇಂದು ಈ ವಿರಹದ ಬೆಂಕಿಯಲ್ಲಿ ಬೆಂದೂ ಬದುಕಿರುತ್ತಿದ್ದೆನೇ? ನನ್ನ ಪಾಲಿಗೆ ನಿರಂತರ ವೀಣಾಗಾನ. ಇಂದು ನನ್ನ ಬಾಳವೀಣೆಯನ್ನು ಮೀಟುವವರಿಲ್ಲದಿದ್ದರೂ, ನನ್ನ ಕಿವಿಗೆ ಆ ಮಧುರ ವೀಣಾಗಾನ ಕೇಳುತ್ತಲೇ ಇದೆ.

ನಾನು ಪಡೆದ ಈ ಅಪೂರ್ವ ಸ್ಮೃತಿ, ಕವಿತಾಳ ಪಾಲಿಗೆ ಇಲ್ಲವಲ್ಲಾ ಎಂದು ನಾನದೆಷ್ಟೋ ಬಾರಿ ಕೊರಗಿದ್ದೆ. ಇದೀಗ ತಡವಾಗಿಯಾದರೂ ಅವಳಿಗೆ ಈ ಭಾವಾನುಭವ ಲಭ್ಯವಾಯಿತಲ್ಲಾ ಎಂದೇ ನನಗೆ ಸಂತಸ.

ಹುಚ್ಚು ಹುಡುಗಿ! ಬೀಳಬಹುದೆಂಬ ಹೆದರಿಕೆಯಿಂದ ಮಗು ಹೆಜ್ಜೆಯಿಡುವುದನ್ನೇ ಬಿಟ್ಟುಬಿಡುತ್ತದೇನು? ಜೀವನವೂ ಹಾಗೇ ತಾನೇ? ಇಲ್ಲಿ ಏಳುವುದು, ಬೀಳುವುದು, ಇದ್ದದ್ದೇ. ಹೆದರದೆ ಮುನ್ನುಗ್ಗುವ ಎದೆಗಾರಿಕೆಯಿದ್ದರೆ ಯಾವ ಸಂದರ್ಭದಲ್ಲೂ ಗೆದ್ದು ಬರಬಹುದು.

ಹಣ್ಣು, ಪ್ರೇಮದ ಇನ್ನೊಂದು ಹೆಸರು. ಅದನ್ನು ಅವಳು ಯಾವುದೇ ರೂಪದಲ್ಲಿ, ಯಾವುದೇ ಸಮಯದಲ್ಲಿ ತೂಗಿಸಲಿಲ್ಲವೆಂದರೆ ಅವಳು ಹೆಣ್ಣೆಂಬ ಪದಕ್ಕೇ ಅಪವಾದವಾದಾಳು. ಈ ನಿತ್ಯಸತ್ಯವನ್ನು ಅವಳಿಗೆ ಅರಿವು ಮಾಡಿಕೊಟ್ಟ ಅದಾರೋ 'ಮೂರ್ತಿ' ಅವಳ ಪಾಲಿನ ದೈವವೇ ಸರಿ.

ಅವಳು ಸಂಸಾರಕ್ಕೆ ಹೆಜ್ಜೆಯಿಡುವ ವೇಳೆಗೆ ನಾನು ಜೀವನದ ಸಿಹಿ–ಕಹಿಯನ್ನೆಲ್ಲಾ ಉಂಡು ಅದರಿಂದ ಹೊರಬಂದಿದ್ದೇನೆ. ನನ್ನ ಪಾಲಿಗೆ ಶ್ಯಾಮ ಅಮರನೇ ಆದನು. ಅವನ ನೆನಪು ನನಗೆ ಉಸಿರಾಟದಷ್ಟೇ ಅಗತ್ಯವಾದರೂ, ಪ್ರಪಂಚದ ಕಣ್ಣಿಗೆ ನಾನು ವಿಧವೆ ತಾನೆ? ಗಂಡನಿಲ್ಲದ ಹೆಣ್ಣನ್ನು ಅನುಕಂಪದಿಂದ ಕಾಣುವ ಕಣ್ಣುಗಳು ಹಲವು. ಮೊದಲು ಈ ತರಹದ ಅನುಭವವಾದದ್ದು ನನಗೆ ಪೂರ್ಣಾಳ ಮನೆಯ ಹಿಂಬದಿಯಲ್ಲಿದ್ದಾಗ.

ಉತ್ತಮ ನಡತೆಯವರೇ ಆಗಿದ್ದ ಪೂರ್ಣಾಳ ಪತಿ ನನ್ನ ಅಸಹಾಯಕತೆಯನ್ನು ಅಪಾರ್ಥ ಮಾಡಿಕೊಂಡು, ನನ್ನ ಮೇಲಿನ ಅತೀವ ಅನುಕಂಪದಿಂದ ದುಡುಕಿದರು. ಪೂರ್ಣಾಳ ಸಂಸಾರವನ್ನು ಮುರಿಯದಿರಲು ನನಗೆ ತೋಚಿದ ಒಂದೇ ಮಾರ್ಗ ಬೆಂಗಳೂರು ಬಿಡುವುದು.

ನಾನು ಹಾಗೆ ಹಠಾತ್ತನೆ ನಿರ್ಧರಿಸಿ ಮೂರು ತಿಂಗಳ ಕಂದ ಮುರಳಿಯೊಂದಿಗೆ ಬೊಂಬಾಯಿಗೆ ಬಂದದ್ದು ಒಂದು ವಿಧಕ್ಕೆ ಒಳ್ಳೆಯದೇ ಆಯ್ತು. ಶ್ಯಾಮನ ಭಾವ ಅತ್ತಿಗೆಯರಿಗೆ ಹೊರೆಯಾಗಲು ಇಚ್ಛಿಸದೆ, ಭಾವನಿಗೆ ತಿಳಿದ ಆಫೀಸಿನಲ್ಲಿ ಒಂದು ಸಣ್ಣ ಉದ್ಯೋಗ ದೊರಕಿಸಿಕೊಂಡೆ. ನಾಲ್ಕಾರು ವರ್ಷಗಳು ಯಾವ ತೊಂದರೆಯೂ ಇಲ್ಲದೆ ಕಳೆದವು. ಆದರೂ ಮುಂಬಯಿಯ ಲೋಕಲ್ ಟ್ರೇನ್‌ಗಳಲ್ಲಿ, ಆಫೀಸಿನಲ್ಲಿ ನನ್ನ ಯೌವನ ತುಂಬಿದ ದೇಹದ ಮೇಲೆ ವಕ್ರ ದೃಷ್ಟಿಗಳು ಅಸಹ್ಯವಾಗಿ ಹರಿದಾಡುವಾಗ ನನಗೆ ಮೈಯೆಲ್ಲಾ ಮುಳ್ಳಾಗುತ್ತಿತ್ತು.

ಒಂದು ದಿನ ಆಫೀಸಿನಲ್ಲಿ ನಾನು ಕಾಲಿಟ್ಟೊಡನೆ ಎಲ್ಲರೂ ಒಂದು ವಿಧವಾಗಿ ನನ್ನನ್ನು ನೋಡತೊಡಗಿದಾಗ ನಾನು ಕಸಿವಿಸಿಗೊಂಡಿದ್ದೆ. ಕಾರಣವೇನೆಂದು ನನ್ನ ಗೆಳತಿಯನ್ನು ಕೇಳಿದ್ದಕ್ಕೆ ಅವಳು 'ಕಂಗ್ರಾಟ್ಸ್ ಸ್ಮೃತಿ. ಅಂತೂ ನಮಗೂ ತಿಳಿಯದಂತೆ ಭಾರಿ ಹಕ್ಕಿಗೇ ಬಲೆ ಬೀಸಿದ್ದೀ' ಎಂದಳು. 'ಹಾಗಂದರೇನು?' ಎಂದೆ, ತಿಳಿಯದೆ.

'ಇಡೀ ಆಫೀಸು ಮಾತನಾಡುತ್ತಿರುವಾಗ ನಿನಗೆ ತಿಳಿಯದೆ ಸ್ಮೃತಿ. ಹೊಸ ಎಂ.ಡಿ. ನಿನ್ನನ್ನು ಮದುವೆಯಾಗ್ತಾರಂತೆ'

ನಾನು ನಿಂತಲ್ಲೆ ಬೆವತುಹೋದೆ. ಎಂತಹ ಅನೂಹ್ಯವಾದ ಸುಳ್ಳು. ನನಗೆ ಅಸಾಧ್ಯ ಕೋಪ ಬಂತು. ಅಸಹಾಯ ಹೆಣ್ಣೆಂದ ಮಾತ್ರಕ್ಕೆ, ಇಂತಹ ಸುಳ್ಳು ಸುದ್ದಿ ಹಬ್ಬಿಸಬಹುದೇ?

ತಕ್ಷಣವೇ ಎಂ.ಡಿಯ ಬಳಿಗೆ ಹೋದೆ. ನಯವಾಗಿಯೇ ಕೇಳಿದೆ. "ನಿಮ್ಮ ಕಿವಿಗೆ ಇಂತಹ ಸುದ್ದಿ ಬಿದ್ದಿದೆಯೇ? ನೀವಾಗಿ ಹಬ್ಬಿಸಿದ್ದೀರಾ? ಅಥವಾ ಕೇಳಿಯೂ ಸುಮ್ಮನಿದ್ದೀರಾ?'

'ಕ್ಷಮಿಸಿ ಮೇಡಂ. ನಾನೊಬ್ಬ ಅವಿವಾಹಿತ. ಈ ಕಂಪೆನಿಯಲ್ಲಿ ಕೆಲಸ ಮಾಡುವ ಯಾವುದಾದರೂ ಸುಂದರ–ಸುಸಂಸ್ಕೃತ ಹುಡುಗಿಯನ್ನು ಮದುವೆಯಾಗುವ ಅಭಿಪ್ರಾಯದಿಂದ ಇಲ್ಲಿರುವವರ ಭಾವಚಿತ್ರಗಳನ್ನು ಗುಟ್ಟಾಗಿ ತರಿಸಿಕೊಂಡು ನೋಡಿದೆ. ಅವುಗಳಲ್ಲಿ ನಿಮ್ಮದನ್ನು ಆರಿಸಿ ನನ್ನ ಪಿ.ಎ. ಬಳಿ ನಿಮ್ಮ ಪೂರ್ಣ ವಿವರಗಳನ್ನು ಸಂಗ್ರಹಿಸುವಂತೆ ಹೇಳಿದೆ. ಆಗ ತಿಳಿಯಿತು. ನೀವು ಒಬ್ಬ 'ಯಂಗ್ ವಿಡೋ' ಎಂದು. 'ಐ ಆ್ಯಮ್ ರಿಯಲಿ ಸಾರಿ. ಇಂಥದ್ದೊಂದು ಸಣ್ಣ ವಿಷಯ ಇಷ್ಟು ದೊಡ್ಡ ಸುದ್ದಿಯಾಗಿ ಹಬ್ಬಬಹುದೆಂದು ನಾನು ತಿಳಿದಿರಲಿಲ್ಲ. ಈಗಲೂ ನಿಮಗೆ ಮರುಮದುವೆಯಾಗುವ ಅಭಿಪ್ರಾಯವಿದ್ದರೆ ನಾನು ನಿಮ್ಮನ್ನು ಮದುವೆಯಾಗಲು ಸಿದ್ಧನಿದ್ದೇನೆ. ನಿಧಾನವಾಗಿ ಯೋಚಿಸಿ ಹೇಳಿ'

'ಇಲ್ಲಿ ಯೋಚಿಸುವುದಕ್ಕಾಗಲೀ, ತಿಳಿಸುವುದಕ್ಕಾಗಲೀ ಏನೂ ಇಲ್ಲ ಮಿ. ಶಿವಾನಂದಂ. ನನ್ನ ಪತಿಯಿಲ್ಲದೆ ಇದುವರೆಗೆ ಹೇಗೆ ಬದುಕಿದೆನೋ ಅದೇ ರೀತಿ ಮುಂದೆಯೂ ಬದುಕುವ ಆತ್ಮಸ್ಥೈರ್ಯ ನನಗಿದೆ. ಥ್ಯಾಂಕ್ಸ್ ಫಾರ್ ಯುವರ್ ಮರ್ಸಿ. ನಿಮ್ಮ ಅನುಕಂಪಕ್ಕೆ ಬೇರೆ ವ್ಯಕ್ತಿಯನ್ನು ಹುಡುಕಿಕೊಳ್ಳಿ' ಎಂದು ಹಾಗೆ ಹೇಳಿ ಹೊರಬಿದ್ದೆ. ನಾನು ಮರುದಿನವೇ ನನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟೆ.

ಮುಂಬಯಿಯಂತಹ ಸ್ಥಳದಲ್ಲಿ ಕೆಲಸವಿಲ್ಲದೆ ಕುಳಿತು ತಿನ್ನುವುದು ಅಪೇಕ್ಷಣೀಯ ವಿಚಾರವಾಗಿರಲಿಲ್ಲ. ಎಂತಲೇ ನಾನು ಚಿತ್ರಶಾಲೆಯೊಂದರಲ್ಲಿ ಆರ್ಟಿಸ್ಟ್ ಕೆಲಸಕ್ಕೆ ಸೇರಿಕೊಂಡೆ. ನನ್ನ ಕಲಾಸಕ್ತಿಗೊಂದು ಉತ್ತಮ ಮಾಧ್ಯಮ ಸಿಕ್ಕಿತೆಂದು ತುಂಬಾ ಸಂತಸಪಟ್ಟೆ.

ಆ ವೇಳೆಗೆ ಮುರಳಿ ಪಿ.ಯು.ಸಿ. ಮುಗಿಸಿ ಎಂಟ್ರೆನ್ಸ್ ಪರೀಕ್ಷೆಯನ್ನು ಪಾಸು ಮಾಡಿದ್ದ. ಅವನಿಗೆ ವೈದ್ಯಕೀಯ ಓದುವ ಅತೀವಾಸಕ್ತಿ. ಚಿತ್ರಶಾಲೆಯಲ್ಲಿ ನನಗೆ ಸಿಗುತ್ತಿದ್ದ ಸಂಬಳದ ಜೊತೆಗೆ ಬಟ್ಟೆ ಕಂಪೆನಿಗಳಿಂದ, ಜಾಹೀರಾತುಗಳಿಗಾಗಿ ಪ್ರತ್ಯೇಕ ಆರ್ಡರ್‌ಗಳು ಬರತೊಡಗಿದವು.

ಒಮ್ಮೆ ಯಾವುದೋ ಸೀರೆ ಕಂಪೆನಿಗಾಗಿ ವರ್ಣವಿನ್ಯಾಸವೊಂದನ್ನು ರಚಿಸುತ್ತಿದ್ದಾಗ ನನ್ನನ್ನು ಕಾಣಲು ಬಂದರು ಒಬ್ಬ ಕಂಪೆನಿಯ ಸೇಲ್ಸ್ ಮ್ಯಾನೇಜರ್.

## ಖ್ಯಾತ ಮೊಕದ್ದಮೆಗಳು
## ಜೇಮ್ಸ್ ಲಾಂಗ್ ವಿಚಾರಣೆ

ಬಾಬು ದೀನಬಂಧು ಮಿಟ್ಟರ್ ಖ್ಯಾತ ಬಂಗಾಲಿ ನಾಟಕಕರ್ತೃ. ಅವರು ಬರೆದ "ನೀಲದರ್ಪಣ್" (ಬಂಗಾಲಿ) ಎಂಬ ನಾಟಕವು 1860ರ ಸೆಪ್ಟೆಂಬರ್‌ನಲ್ಲಿ ಪ್ರಕಟಗೊಂಡಿತು. ಕುಖ್ಯಾತ ಇಂಡಿಗೋ ಬೇಸಾಯವನ್ನು ಹಾಗೂ ಬ್ರಿಟಿಷ್ ಪ್ಲಾಂಟರುಗಳ ದಬ್ಬಾಳಿಕೆಯನ್ನು ಪ್ರತಿಭಟಿಸುವ ಧೋರಣೆಯಲ್ಲಿ ಈ ನಾಟಕ ರೂಪುಗೊಂಡಿತ್ತು. ನಂತರ ಈ ನಾಟಕವನ್ನು ಬಂಗಾಲಿಯಿಂದ ಇಂಗ್ಲೀಷಿಗೆ ಭಾಷಾಂತರಿಸಲಾಯಿತು. ರೆವೆಂಡರ್ ಜೇಮ್ಸ್ ಲಾಂಗ್ ಎಂಬ ಬ್ರಿಟಿಷ್ ಮಿಷನರಿಯೊಬ್ಬರು ಭಾಷಾಂತರಗೊಂಡ ಈ ನಾಟಕಕ್ಕೆ ಮುನ್ನುಡಿ ಬರೆದರು ಮಾತ್ರವಲ್ಲ ತನ್ನ ಹೆಸರಿನಲ್ಲೇ ಅದನ್ನು ಪ್ರಕಟಿಸಿದರು. ಇದು ಇಂಡಿಗೋ ಪ್ಲಾಂಟರುಗಳನ್ನು ಕೆರಳಿಸಿತು. ಅವರು ಈ ನಾಟಕದ ಮುದ್ರಕರು ಹಾಗೂ ರೆವೆಂಡ್ ಲಾಂಗ್ ಮೇಲೆ ಮಾನನಷ್ಟ ಮೊಕದ್ದಮೆ ಹೂಡಿದರು. ಕಲ್ಕತ್ತಾದ ಉಚ್ಚ ನ್ಯಾಯಾಲಯ ಈ ನಾಟಕದ ಮುದ್ರಕರಿಗೆ 10/– ರೂ. ಹಾಗೂ ರೆವೆಂಡರ್ ಲಾಂಗ್ ಅವರಿಗೆ 1000/–ರೂ.ಗಳ ದಂಡ ವಿಧಿಸಿತು. ಜೊತೆಗೆ ರೆವೆಂಡರ್ ಲಾಂಗ್ ಅವರಿಗೆ ಒಂದು ತಿಂಗಳ ಸೆರೆಮನೆ ವಾಸವನ್ನು ವಿಧಿಸಲಾಯಿತು. ಈ ಮೊಕದ್ದಮೆ ಆಲಿಸಲು ಬಂದ ಹಲವರು ದಂಡ ತುಂಬಲು ಮುಂದೆ ಬಂದರು. ಹಾಗೆಯೇ ರೆವೆಂಡರ್ ಅವರ ಪರವಾಗಿ ವಕಾಲತ್ತು ನಡೆಸಿದ ಬಾಬು ಕಾಲಿ ಪ್ರಸನ್ನ ಸಿಂಹ ತಾವು ದಂಡ ತೆತ್ತರು. ಈ ಮಿಷನರಿಯ ಗೌರವಾರ್ಥ ಕಲ್ಕತ್ತಾದ ಒಂದು ರಸ್ತೆಗೆ ಜೇಮ್ಸ್ ಲಾಂಗ್ ಮಾರ್ಗ್ ಎಂದು ಹೆಸರಿಡಲಾಗಿದೆ.

ವಿಷಯವೇನೆಂದು ಕೇಳಿದಾಗ ಅವನು ಹತ್ತು ಸಾವಿರಕ್ಕೆ ನನಗೊಂದು ಚೆಕ್ ನೀಡಿ 'ಇದು ಅಡ್ವಾನ್ಸ್ ಹಣ. ಕೆಲಸ ಪೂರ್ಣವಾದ ಮೇಲೆ ನಿಮಗೆ ಮತ್ತೂ ಇಪ್ಪತ್ತು ಸಾವಿರ ಕೊಡುತ್ತೇನೆ'

ನನಗೆ ತಲೆ 'ಧಿಂ' ಎಂದಿತು. ಮೂವತ್ತು ಸಾವಿರ ರೂಪಾಯಿಗಳನ್ನು ನನಗೆ ಕೊಡಬಂದ ಈ ಮಹನೀಯರು ನನ್ನಿಂದ ಅಂತಹ ಮಹತ್ತರವಾದ ಕಲೆಯೇನನ್ನು ಆಶಿಸಬಹುದು ಎಂದು.

ಮೂವತ್ತು ಸಾವಿರವೆಂದರೆ ಮುರಳಿಯ ವೈದ್ಯಕೀಯ ಶಿಕ್ಷಣದ ಖರ್ಚಿಗಾಗುತ್ತೆ ಎಂದು ಯೋಚಿಸಿ ಹೇಳಿದೆ.

'ಅಡ್ವಾನ್ಸ್ ಇರಲಿ. ನಾನು ರಚಿಸಬೇಕಾದದ್ದೇನು ಎಂದು ತಿಳಿಸಿ. ನನ್ನಿಂದ ಸಾಧ್ಯವೇ ನೋಡೋಣ'

'ನಿಮ್ಮಿಂದ ಸಾಧ್ಯ. ಆದರೆ ಮನಸ್ಸು ಮಾಡಬೇಕಷ್ಟೆ'

'ಸಂಕೋಚಪಡದೆ ಹೇಳಿ. ನನ್ನಿಂದ ಸಾಧ್ಯವಾದರೆ ಮಾಡಿಕೊಡುತ್ತೇನೆ.'

'ಮತ್ತೇನಿಲ್ಲ. ನಮ್ಮ ಕಂಪೆನಿಯ ಸೇಲ್ಸ್ ತುಂಬಾ ಇಳಿದು ಹೋಗುತ್ತಿದೆ. ಇದಕ್ಕೆ ಮುಖ್ಯ ಕಾರಣ ನಮ್ಮ ಜಾಹೀರಾತುಗಳು ಆಕರ್ಷಕವಾಗಿಲ್ಲ ಎಂಬುದು. ಅದಕ್ಕಾಗಿ ನಿಮ್ಮ 'ಸೆಲ್ಫ್ ನ್ಯೂಡ್ ಪೋರ್ಟ್ರೈಟ್ಸ್'... ಐ ಮೀನ್... ನಿಮ್ಮ ನಗ್ನಚಿತ್ರಗಳನ್ನು ರಚಿಸಿಕೊಡಬೇಕು. ಅಷ್ಟೆ. ಕನ್ನಡಿಯೆದುರಿನಲ್ಲಿ ವಿವಿಧ ಭಂಗಿಗಳಲ್ಲಿ ನೀವು ನಗ್ನವಾಗಿ ನಿಂತು, ನಿಮ್ಮನ್ನು ನೀವೇ ಚಿತ್ರಿಸಿ ಕೊಟ್ಟರೆ ನಿಮಗೆ ಹಣ ಹೇರಳವಾಗಿ ಸಿಗುತ್ತೆ. ಬೇರೆ ಮಾಡೆಲ್‌ಗಳಿಗಿಂತ ನೀವು ಹೆಚ್ಚು ಸುಂದರವಾಗಿದ್ದೀರಿ. ಜೊತೆಗೆ ವಿಡೋ ಆಗಿರುವುದರಿಂದ ಪತಿಯ ಅಭ್ಯಂತರವೂ ಇಲ್ಲ. ಸ್ವತಃ ಆರ್ಟಿಸ್ಟ್ ಆಗಿರುವುದರಿಂದ ಮತ್ತೊಬ್ಬರ ಎದುರು ಮಾಡೆಲ್ ಆಗಿ ನಿಲ್ಲಬೇಕಾಗಿಲ್ಲ. ನೀವು ಮನಸ್ಸು ಮಾಡಿದರೆ...'

ಸಭ್ಯತನದ ಸೋಗಿನಲ್ಲಿದ್ದ ಅವನ ಧೂರ್ತತೆಯನ್ನು ಕಂಡು ನನ್ನ ಮೈ ನಖಶಿಖಾಂತ ಉರಿಯಿತು. ಅವನು ಕೊಟ್ಟ ಚೆಕ್ ಅನ್ನು ಚೂರು ಚೂರು ಮಾಡಿ ಅವನ ಮುಖಕ್ಕೆಸೆದೆ. ಇಂತಹ ದುರುದ್ದೇಶದವನನ್ನು ಕರೆತಂದದಕ್ಕಾಗಿ ಚಿತ್ರಶಾಲೆಯ ಮಾಲೀಕರ ಮೇಲೂ ನನ್ನ ಸಿಟ್ಟು ಮೇರೆ ಮೀರಿತು. ಮನೆಗೆ ಬಂದಾಗ ಅತ್ತಿಗೆಗೆ ನನ್ನ ಮುಖ ನೋಡಿಯೇ ಅನುಮಾನವಾಯ್ತು. 'ಯಾಕಮ್ಮಾ ಸ್ಮೃತಿ, ಏನಾಯ್ತು? ಆರೋಗ್ಯ ಸರಿಯಿಲ್ಲವಾ?' ಎಂದರು.

'ಇನ್ನು ಮೇಲೆ ನಾನು ಚಿತ್ರಶಾಲೆಗೆ ಹೋಗುವುದಿಲ್ಲ ಅತ್ತಿಗೆ' ಎಂದೆ ಕುರ್ಚಿಯಲ್ಲಿ ಕುಸಿಯುತ್ತಾ.

'ಅದ್ಯಾಕಮ್ಮಾ ಹೊತ್ತು ಕಳೆಯಲು ಅದೊಂದು ಸಾಧನವಾಗಿತ್ತಲ್ಲ' ಎಂದರು ಭಾವ.

'ಇಲ್ಲ ಭಾವ, ಕಲೆಗೆ ಸಲ್ಲಬೇಕಾದ ಗೌರವ ಸಿಗದಿರುವ ಈ ಪ್ರಪಂಚದಲ್ಲಿ ನಾನು ಹಣಕ್ಕಾಗಿ ಅದನ್ನು ಮಾರಲಾರೆ. ನನ್ನನ್ನೇ ವಂಚಿಸಿಕೊಳ್ಳಲಾರೆ' ಎಂದುಬಿಟ್ಟೆ.

ಅದೇ ತಾನೇ ರಿಟೈರಾಗಿದ್ದ ಭಾವ, ನನ್ನ ಮಾತಿಗೆ ಬೆಲೆಕೊಟ್ಟು ಮನೆಯಲ್ಲೇ 'ಬಾಟಿಕ್ ಪ್ರಿಂಟಿಂಗ್' ಉದ್ಯಮವೊಂದನ್ನು ಆರಂಭಿಸಿದರು. ನಾನು ಚಿತ್ರಶಾಲೆಗೆ ರಾಜೀನಾಮೆ ಕಳುಹಿಸಿದೆ. ನಾನು, ಮುರಳಿ, ಅತ್ತಿಗೆ, ಭಾವ ಎಲ್ಲರೂ ಸೇರಿ ಉದ್ಯಮವನ್ನು ಸಾಕಷ್ಟು ಚೆನ್ನಾಗಿಯೇ ನಡೆಸಿಕೊಂಡು ಬಂದೆವು. ಮುರಳಿಗೆ 'ನ್ಯಾಷನಲ್ ಮೆರಿಟ್ ಸ್ಕಾಲರ್‌ಷಿಪ್' ದೊರೆತದ್ದರಿಂದ ಅವನ ವೈದ್ಯಕೀಯ ವಿದ್ಯಾಭ್ಯಾಸ ನನಗೆ ಹೊರೆಯಾಗಲಿಲ್ಲ. ಅವನು ವಿಶ್ವವಿದ್ಯಾಲಯಕ್ಕೇ ಮೊದಲಿಗನಾಗಿ ಪಾಸು ಮಾಡಿದ.

ಈ ಮಧ್ಯೆ ಭಾವ, ಅತ್ತಿಗೆ ಒಬ್ಬರ ಹಿಂದೊಬ್ಬರು ಖಾಯಿಲೆ ಮಲಗಿ, ಪರಲೋಕವಾಸಿಗಳಾದರು. ಅದುವರೆವಿಗೂ ಅವರ ನೆರಳಿನಲ್ಲಿದ್ದ ನನಗೆ ಶ್ಯಾಮನ ಅಳಿವು ಅಷ್ಟಾಗಿ ಮನಸ್ಸಿಗೆ ತಟ್ಟಿರಲಿಲ್ಲ. ಆದರೆ ಅತ್ತಿಗೆ–ಭಾವ ಗತಿಸಿದಾಗ ನಾನು ನಿಜಕ್ಕೂ ಒಂಟಿ–ಅನಾಥೆ ಎಂಬ ಭಾವನೆ ನನ್ನನ್ನು ಕಾಡಿತು.

ಮುರಳಿಗೆ ಅಮೆರಿಕದಲ್ಲಿ ಉನ್ನತ ವ್ಯಾಸಂಗಕ್ಕೆ ಅವಕಾಶ ದೊರೆತಾಗ, ಅವನು ನನಗಾಗಿ ಅದನ್ನು ತಿರಸ್ಕರಿಸಿ, ಮುಂಬಯಿಯಲ್ಲೇ ಕೆಲಸಕ್ಕೆ ಸೇರುವುದರಲ್ಲಿದ್ದ. ಆದರೆ ಮುರಳಿ ಬೆಳೆದು ಮುಂದೆ ಬರಬೇಕಾದ ಹುಡುಗ. ನನಗಾಗಿ ಅವನ ಭವಿಷ್ಯ ಕಪ್ಪಾಗುವುದು ಬೇಡ ಎಂದು ಯೋಚಿಸಿದ ನಾನು ಬಾಟಿಕ್ ಉದ್ಯಮವನ್ನು ಮಾರಿ, ಹಣವನ್ನು ಮುರಳಿಯ ಹೆಸರಿನಲ್ಲಿ ಬ್ಯಾಂಕಿನಲ್ಲಿಟ್ಟೆ. ಭಾವನವರು ಬಹಳ ಕಷ್ಟದಿಂದ ಕೊಂಡಿದ್ದ ಮನೆಯನ್ನು ಮಾತ್ರ ಮಾರದೆ ಉಳಿಸಿಕೊಂಡೆ.

ಮುರಳಿಯನ್ನು ಅಮೆರಿಕೆಗೆ ಕಳುಹಿಸುವ ಮುನ್ನ, ನಾನು ಮೊದಲೇ ನಿರ್ಧರಿಸಿಕೊಂಡಂತೆ ಅಬು ಪರ್ವತದ ಬ್ರಹ್ಮಕುಮಾರಿ ಸಮಾಜದ ಶಾಂತಿಧಾಮಕ್ಕೆ ನನ್ನ ಹೆಸರನ್ನು ನೊಂದಾಯಿಸಿಕೊಂಡೆ. ಮುರಳಿಗೆ, ನಾನು ಒಂಟಿಯಾಗಿ ಮುಂಬಯಿಯಲ್ಲಿರುವುದಕ್ಕಿಂತ, ಇದು ಉತ್ತಮ ಎನಿಸಿರಬೇಕು, ಒಪ್ಪಿಕೊಂಡ.

–ಸಶೀಪ



ಮುಖಪುಟ ಲೇಖನ :

## ಸರ್ವತೋಮುಖ ಪ್ರತಿಭೆ
## ಎಸ್. ಉಮಾಮಹೇಶ್ವರಿ

ಸುಬ್ರಹ್ಮಣ್ಯಂ ಮದರಾಸಿನ ಖ್ಯಾತ ಕ್ರಿಮಿನಲ್ ಲಾಯರ್. ಅವರ ಪತ್ನಿ ಪದ್ಮ ನೃತ್ಯ ಕಲಾವಿದೆ ಹಾಗೂ ಚಿತ್ರಕಲೆಯಲ್ಲಿ ನುರಿತ ಮಹಿಳೆ. ಮದರಾಸಿನ ಕಾಯಿದೆಮಿಲ್ಲತ್ ಆರ್ಟ್ಸ್ ಕಾಲೇಜಿನಲ್ಲಿ ಪ್ರಥಮ ಬಿ.ಎ. ಓದುತ್ತಿರುವ ಇವರ ಮಗಳು 18ರ ಯುವತಿ ಎಸ್. ಉಮಾಮಹೇಶ್ವರಿ ತಂದೆ–ತಾಯಿಯರನ್ನು ಮೀರಿಸುವ ಲಕ್ಷಣಗಳನ್ನು ಈಗಾಗಲೇ ತೋರಿಸಿದ್ದಾಳೆ. ತಂದೆ ನ್ಯಾಯ ನೆಲೆ ನಿಲ್ಲಿಸುವ ಕೆಲಸ ಮಾಡಿದರೆ ಉಮಾಮಹೇಶ್ವರಿ ಸಮಾಜ ಸೇವೆ ಮಾಡುವ ಮೂಲಕ ಮತ್ತೊಂದು ರೀತಿಯಲ್ಲಿ ನ್ಯಾಯ ನೆಲೆಸುವಂತೆ ಮಾಡುತ್ತಿದ್ದಾಳೆ. ಸಮಾಜ ಇದನ್ನು ಗುರುತಿಸಿ ಗೌರವಿಸಿದೆ ಕೂಡ. ತಾಯಿಯಿಂದ ಚಿತ್ರಕಲೆ, ನೃತ್ಯಕಲೆಗಳನ್ನು ಬಳುವಳಿಯಾಗಿ ಪಡೆದ ಉಮಾಮಹೇಶ್ವರಿ ಹಾಡುಗಾರಿಕೆಯಲ್ಲಿ ಪ್ರವೀಣಳು. ನೃತ್ಯ–ಗೀತೆಗಳಿಗಂಟಿಕೊಂಡಂತೆ ಅಭಿನಯವೂ ಕರತಲಾಮಲಕ. ಇಂಗ್ಲೀಷ್ ನಾಟಕಗಳಲ್ಲಿ ಈಕೆ ಹಲವು ಪುರಸ್ಕಾರಗಳನ್ನು ಗೆದ್ದಿದ್ದಾಳೆ. ಭಾವಾವೇಶದ ಸನ್ನಿವೇಶಗಳಲ್ಲಿ ಈಕೆ ಎತ್ತಿದ ಕೈ. ಜಲವರ್ಣ, ತೈಲವರ್ಣ, ಫ್ಯಾಬ್ರಿಕ್ ಪೇಂಟಿಂಗ್‌ಗಳಲ್ಲಿ ಕುಶಲತೆ ಮೆರೆದ ಈಕೆ ಭಿತ್ತಿಪತ್ರ ವಿನ್ಯಾಸದಲ್ಲಿ ಕೈಚಳಕ ತೋರಿದ್ದಾರೆ. ವ್ಯಂಗ್ಯಚಿತ್ರ ರಚನೆಯಲ್ಲಿ ಉಮಾಮಹೇಶ್ವರಿ ತನ್ನ ಸಾಮರ್ಥ್ಯ ಮೆರೆದಿದ್ದಾಳೆ. ಕುಂಚ ಹಿಡಿದ ಈಕೆಯ ಕೈ ಲೇಖನಿ ಹಿಡಿದರೆ ಹೇಗಿರಬಹುದು! ಪ್ರಬಂಧ ಸ್ಪರ್ಧೆಯಲ್ಲೂ ಈಕೆ ತನ್ನ ಛಾಪನ್ನೊತ್ತಿದ್ದಾಳೆ. ವಯೋಸಹಜವಾಗಿ ಕ್ರೀಡೆಯಲ್ಲಿ ಈಕೆಗೆ ಆಸಕ್ತಿ ಮಾತ್ರವಲ್ಲ ಬ್ಯಾಡ್ಮಿಂಟನ್ ಆಟದಲ್ಲಿ ಬಹುಮಾನ ಗಳನ್ನೂ ಗೆದ್ದಿದ್ದಾಳೆ. ಹೀಗೆ ನೃತ್ಯ–ಗೀತೆ, ಅಭಿನಯ, ಚಿತ್ರಕಲೆ, ಲೇಖನ, ಸಮಾಜ ಸೇವೆಗಳಲ್ಲಿ ತನ್ನನ್ನು ತೊಡಗಿಸಿಕೊಂಡ ಈ ಯುವತಿಗೆ ವಿದ್ಯಾಭ್ಯಾಸಕ್ಕೆ ಪುರುಸೊತ್ತೆಲ್ಲಿ ಎಂದು ಕೇಳಬಹುದು. ಅಲ್ಲೂ ಉಮಾಮಹೇಶ್ವರಿ ಹಿಂದೆ ಬಿದ್ದಿಲ್ಲ. ಮಾಡೆಲಿಂಗ್‌ನಲ್ಲೂ ಈಕೆಗೆ ಆಸಕ್ತಿ ಇದೆ. ಮಾಡೆಲಿಂಗ್ ಸಿನಿಮಾಕ್ಕೆ ಸೋಪಾನ ಆಗಿರುವುದರಿಂದ ಚಿತ್ರರಂಗದಲ್ಲೇನಾದರೂ ಅದೃಷ್ಟ ಪರೀಕ್ಷಿಸುತ್ತಾರೆಯೋ ಎಂದರೆ "ಮಾಡೆಲಿಂಗ್‌ವರೆಗೂ ಸರಿ. ಮುಂದೆ ವಿದೇಶದಲ್ಲಿ ಎಂ.ಬಿ.ಎ. ಮಾಡಬೇಕೆಂದುಕೊಂಡಿದ್ದೇನೆ" ಎಂದು ತನ್ನ ಮಹತ್ವಾಕಾಂಕ್ಷೆಯನ್ನು ವ್ಯಕ್ತಪಡಿಸುತ್ತಾರೆ. ಈ ಸರ್ವತೋಮುಖ ಪ್ರತಿಭೆಯ ಯುವತಿಗೆ ವನಿತಾ ಭವ್ಯ ಭವಿಷ್ಯವನ್ನು ಹಾರೈಸುತ್ತದೆ.

ವರ್ಣಚಿತ್ರ : ಹರೀಶ್



# ಮೈಸೂರು ನಗರಪಾಲಿಕೆಗೆ ಉಪ ಮಹಾಪೌರರಾಗಿ ಟಿ. ಶಾರದಮ್ಮ



ಸ್ತ್ರೀ ಶಕ್ತಿಯ ದ್ಯೋತಕವಾಗಿರುವ ಸಮಾಜ ಸೇವಕಿ ಹಾಗೂ ಹಿರಿಯ ಅನುಭವಿ ರಾಜಕಾರಣಿ ಶ್ರೀಮತಿ ಟಿ. ಶಾರದಮ್ಮನವರು 1992ರ ಸಾಲಿನ ಮೈಸೂರು ನಗರಪಾಲಿಕೆಯ ಉಪ ಮಹಾಪೌರರಾಗಿ ಆಯ್ಕೆಯಾಗಿರುವುದು ಸಂತಸದ ಸಂಗತಿ.

ಜನ್ಮತಃ ಮೈಸೂರಿನವರಾದ ಶ್ರೀಮತಿ ಟಿ. ಶಾರದಮ್ಮ ತಮ್ಮ 28ನೇ ವಯಸ್ಸಿನಲ್ಲೇ ರಾಜಕೀಯ ರಂಗಕ್ಕೆ ಪದಾರ್ಪಣೆ ಮಾಡಿ, ರಾಜಕೀಯವಾಗಿ ಹಾಗೂ ಸಮಾಜ ಸೇವಕಿಯಾಗಿ ಮೈಸೂರು ಜನತೆಗೆ ಚಿರಪರಿಚಿತರಾಗಿದ್ದಾರೆ.

ನಗರದ ಕೃಷ್ಣಮೂರ್ತಿಪುರಂನ 16ನೇ ವಾರ್ಡಿನಿಂದ ಜನತಾದಳದ ಅಭ್ಯರ್ಥಿಯಾಗಿ ಎರಡು ಬಾರಿ ನಗರ ಪಾಲಿಕೆಯ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಇವರ ಆಯ್ಕೆಯು ಹಿಂದುಳಿದ ಜನಾಂಗಕ್ಕೆ ರಾಜಕೀಯದಲ್ಲಿ ಆದ್ಯತೆ ನೀಡಿದಂತಾಗಿದೆ. ಹಿಂದುಳಿದ ಕುರುಬ ಜನಾಂಗದ ಕೋಮಿನವರಾದ ಶಾರದಮ್ಮ ತಮ್ಮ ತಂದೆ ದಿ। ತಮ್ಮಯ್ಯನವರ ರಾಜಕೀಯ ಮುತ್ಸದ್ಧಿತನದಿಂದ ಹೆಚ್ಚು ಪ್ರೇರಣೆ ಪಡೆದಿದ್ದು ತಾವು ರಾಜಕೀಯಕ್ಕೆ ಇಳಿಯಲು ಸಾಧ್ಯವಾಯಿತೆಂದು ನುಡಿದರು. ಸೀನಿಯರ್ ಇಂಟರ್‌ಮೀಡಿಯೇಟ್‌ವರೆಗೂ ವಿದ್ಯಾಭ್ಯಾಸ ಪಡೆದಿದ್ದು, ಮಹಿಳಾಭಿವೃದ್ಧಿಯ ಬಗೆಗೆ ಹೆಚ್ಚಿನ ಕಾಳಜಿ, ಕಳಕಳಿಯನ್ನು ಹೊಂದಿದ್ದಾರೆ.

1992ರ ಸಾಲಿನಲ್ಲಿ ಜೂನ್ 30ರಂದು ನಡೆದ ಮೈಸೂರು ನಗರ ಪಾಲಿಕೆಯ ಚುನಾವಣೆಯಲ್ಲಿ ಕಾಂಗ್ರೆಸ್ಸಿನೊಂದಿಗೆ ಮಾಡಿಕೊಂಡ ಹೊಂದಾಣಿಕೆ ಹಾಗೂ ಜನತಾದಳದ ಸೌಹಾರ್ದತೆಯ ಫಲವಾಗಿ ಶಾರದಮ್ಮನವರನ್ನು ಒಮ್ಮತವಾಗಿ, ಅವಿರೋಧವಾಗಿ ಚುನಾಯಿಸಲಾಯಿತು. ಈ ಸಂದರ್ಭದಲ್ಲಿ ವನಿತಾ ಅವರನ್ನು [illegible] ಸಂದರ್ಶಿಸಿದಾಗ ಸಂತಸ ವ್ಯಕ್ತಪಡಿಸಿದ [illegible], ನೀವು ಮೇಯರ್ ಸ್ಥಾನಕ್ಕೆ ಸ್ಪರ್ಧಿಸಬಹುದಿತ್ತಲ್ಲಾ ಎಂದು ಪ್ರಶ್ನಿಸಿದಾಗ ನಗುತ್ತಾ "ಹೌದು, ಸ್ಪರ್ಧಿಸಬಹುದಾಗಿತ್ತು, ಆದರೆ ಇಂದಿನ ರಾಜಕೀಯ ಪ್ರಕ್ಷುಬ್ಧ ಸ್ಥಿತಿಯಲ್ಲಿ ಮೇಯರ್ ಸ್ಥಾನಕ್ಕೆ ನಾನು ಸ್ಪರ್ಧಿಸಲಿಲ್ಲ'' ಎಂದು ನುಡಿದರು.

ಪ್ರವಾಸಿ ಕೇಂದ್ರವಾದ, ಜಗತ್ತಿನ ಪ್ರವಾಸಿಗರನ್ನು ಆಕರ್ಷಿಸುವ ಮೈಸೂರು ನಗರದ ಸೌಂದರ್ಯವನ್ನು ಕಾಪಾಡುವಲ್ಲಿ ತಾವು ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದೀರಿ ಎಂದು ಕೇಳಿದ್ದಕ್ಕೆ, "ಮೈಸೂರು ನಗರ ಪಾಲಿಕೆಯು ಪ್ರಪ್ರಥಮವಾಗಿ ನಗರದ ಪ್ರಮುಖ ರಸ್ತೆ ಹಾಗೂ ಎಲ್ಲಾ ಬಡಾವಣೆಗಳಲ್ಲೂ ಸಹ ರಸ್ತೆ ರಿಪೇರಿ ಕಾರ್ಯಕ್ರಮವನ್ನು ಎತ್ತಿಕೊಂಡು, ರಸ್ತೆಗಳ ಸ್ವಚ್ಛತೆಗೆ ಹೆಚ್ಚಿನ ಆದ್ಯತೆ ನೀಡುತ್ತೇವೆ'' ಎಂದು ನುಡಿದರು.

ನಗರಪಾಲಿಕೆಯ ಸಾರ್ವಜನಿಕರ ಆರೋಗ್ಯ ಕ್ಷೇಮಕ್ಕಾಗಿ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ ಎಂಬ ಪ್ರಶ್ನೆಗೆ ಉತ್ತರಿಸುತ್ತಾ "ಮೊದಲಿಗೆ ರಸ್ತೆ ನೈರ್ಮಲ್ಯ ಕಾರ್ಯದ ಜೊತೆಗೆ ಅಲ್ಲಲ್ಲಿ ರಸ್ತೆಯಲ್ಲಿ ಆಗಿರುವ ಗುಂಡಿಗಳನ್ನು ಮುಚ್ಚಿಸಿ ಸೊಳ್ಳೆ ಹೆಚ್ಚದಂತೆ ನಗರ ಪಾಲಿಕೆಯ ಆರೋಗ್ಯ ಸ್ಥಾಯಿ ಸಮಿತಿಯಿಂದ ಡಿ.ಡಿ.ಟಿ. ಸಿಂಪಡಿಸುವಂತಹ ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ. ಅಲ್ಲದೆ ಕಸವನ್ನು ಕಂಡ ಕಂಡಲ್ಲೇ ಎಸೆಯದಂತೆ ಮಾಡುವ ಸಲುವಾಗಿ ಎಲ್ಲಾ ಬಡಾವಣೆಯ ಪ್ರತಿಯೊಂದು ಮನೆಗೂ ಕಸವನ್ನು ತುಂಬಿಸಲು ಗೋಣಿಚೀಲವನ್ನು ನಗರಪಾಲಿಕೆ ಒದಗಿಸಿದೆ. ಹೀಗೆ ಸಂಗ್ರಹಿಸಿದ ಕಸವನ್ನು ನಗರಪಾಲಿಕೆಯ ವಾಹನದಲ್ಲಿ ಸಾಗಿಸಲಾಗುವುದು. ಆದರೆ ನಮ್ಮ ಮಹಿಳೆಯರು ತಮ್ಮ ಮನೆಯಂಗಳ ಹಾಗೂ ತಮ್ಮ ಮನೆಯ ಮುಂದಿನ ರಸ್ತೆ, ಅಕ್ಕ ಪಕ್ಕಗಳನ್ನು ಚೊಕ್ಕಟವಾಗಿಟ್ಟುಕೊಳ್ಳಲು ಸಹಕರಿಸಿದರೆ ತಮ್ಮ ನಗರ ನೈರ್ಮಲ್ಯ ಕಾರ್ಯಕ್ರಮಕ್ಕೆ ಒಂದು ಅರ್ಥ ಬರುತ್ತದೆ. ಅಲ್ಲದೆ, ಸಾರ್ವಜನಿಕರ ಆರೋಗ್ಯ ರಕ್ಷಣಾ ಕಾರ್ಯಕ್ಕೆ ಸಹಕಾರಿಯಾಗುತ್ತದೆ'' ಎಂದು ನುಡಿದರು.

ನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ದಿನಸಿ ಅಂಗಡಿಗಳಲ್ಲಿ ವ್ಯಾಪಾರಸ್ಥರು ಅಧಿಕ ಲಾಭಕ್ಕಾಗಿ ಮಾಡುವ ಕಲಬೆರಕೆ ಆಹಾರ ಸಾಮಾಗ್ರಿಗಳ ಮಾರಾಟವನ್ನು ತಡೆಗಟ್ಟಲು ಹಾಗೂ ಸಾರ್ವಜನಿಕರ ಆರೋಗ್ಯ ರಕ್ಷಿಸಲು ಯಾವ ಯೋಜನೆಯನ್ನು ಹಮ್ಮಿಕೊಳ್ಳಲು ಸಾಧ್ಯವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಾ "ಇಂತಹ ಯಾವುದೇ ಆರೋಪಗಳು ಸಾರ್ವಜನಿಕರಿಂದ ಬಂಧರೆ, ಅಂತಹ ಅಂಗಡಿಗಳ ವ್ಯಾಪಾರಸ್ಥರಿಗೆ ಕಾನೂನು ಪ್ರಕಾರ ದಂಡ ಹಾಕುವುದಲ್ಲದೆ, ಇಂತಹ ಕಲಬೆರಕೆಯ ಆಹಾರ ದಿನಸಿಗಳನ್ನು ನಗರಪಾಲಿಕೆಯ ಪ್ರಯೋಗಾಲಯದಲ್ಲಿ ವೈಜ್ಞಾನಿಕವಾಗಿ ರಾಸಾಯನಿಕ ಪರೀಕ್ಷೆಗೆ ಒಳಪಡಿಸಲು ಕಾರ್ಯಕ್ರಮವನ್ನು ರೂಪಿಸುತ್ತೇವೆ.'' ಮರುಪ್ರಶ್ನೆಯಾಗಿ ಈಗಾಗಲೇ ಹತ್ತು ವರ್ಷಗಳಿಂದ ಈ ಪ್ರಯೋಗಾಲಯವು ಮುಚ್ಚಲ್ಪಟ್ಟಿರುವ ಬಗ್ಗೆ ಗಮನ ಸೆಳೆದಾಗ ತಮ್ಮ ಅಧಿಕಾರಾವಧಿಯಲ್ಲಿ ಪ್ರಯೋಗಾಲಯವನ್ನು ಪುನಃ ತೆರೆಯಿಸಿ, ಸೂಕ್ತ ಸಿಬ್ಬಂದಿ ನೇಮಕ ಮಾಡಿ, ಪ್ರಯೋಗಾಲಯವು ಸಮರ್ಪಕವಾಗಿ ಕಾರ್ಯ ನಿರ್ವಹಿಸುವಂತೆ ತಾವು ಕಾರ್ಯೋನ್ಮುಖರಾಗುತ್ತೇವೆಂದು ಉತ್ತರಿಸಿದರು.

ಮಹಿಳಾ ಕಾಲೇಜುಗಳ ಆವರಣದ ಗೋಡೆ, ಹಾಗೂ ಸಾರ್ವಜನಿಕ ಕಟ್ಟಡಗಳ ಮೇಲೆ ಅಂಟಿಸುವ ಅಶ್ಲೀಲ ಭಿತ್ತಿಚಿತ್ರಗಳನ್ನು ತಡೆಗಟ್ಟಲು ಯಾವ ಕ್ರಮ ಕೈಗೊಳ್ಳುವಿರೆಂದು ಕೇಳಿದ್ದಕ್ಕೆ, "ಈ ಬಗ್ಗೆ ನಗರಪಾಲಿಕೆಯು ಸೂಕ್ತ ಕ್ರಮವನ್ನು ಕೈಗೊಂಡು, ಇಂತಹ ಅಶ್ಲೀಲ ಭಿತ್ತಿ ಚಿತ್ರಗಳ ಅಂಟಿಸುವಿಕೆಯನ್ನು ಪೋಲೀಸರ ಸಹಾಯ ಪಡೆದು ಈ ಪಿಡುಗನ್ನು ಸಂಪೂರ್ಣವಾಗಿ ತೊಡೆದು ಹಾಕಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇವೆ'' ಎಂದು ಆಶ್ವಾಸನೆ ನೀಡಿದರು.

ಮಹಿಳೆಯ ಅಭಿವೃದ್ಧಿ ಬಗ್ಗೆ ಕಳಕಳಿ ಇರುವ ಈ ಉಪಮಹಾಪೌರರಾದ ಶಾರದಮ್ಮನವರು, ತಮ್ಮ ನಗರಪಾಲಿಕೆ ವ್ಯಾಪ್ತಿಯಲ್ಲಿರುವ ಶಿಶುವಿಹಾರ, ಶಾಲೆಗಳಲ್ಲಿ ಮಹಿಳೆಯರಿಗೆ ಎಷ್ಟು ಸ್ಥಾನ ನೀಡಿದ್ದೀರಿ? ಎಂಬ ಪ್ರಶ್ನೆಗೆ ಉತ್ತರವಾಗಿ ತಮ್ಮ ಕಾಲದಲ್ಲಿ ಪ್ರಥಮ ಆದ್ಯತೆಯನ್ನು ನೀಡಲಾಗುತ್ತದೆ ಹಾಗೂ ಸರ್ಕಾರ ನಿಗದಿ ಮಾಡಿರುವ ಶೇಕಡಾ 30 ರಷ್ಟು ಮೀಸಲಾತಿ ನೀತಿಯನ್ನು ಅನುಸರಿಸಲಾಗುವುದೆಂದು ಭರವಸೆ ನೀಡಿದರು. ಈ ಮೀಸಲಾತಿ ಅಡಿಯಲ್ಲಿ ರಾಜಕೀಯದಲ್ಲಿ ಮಹಿಳೆಗೆ ಸೂಕ್ತ ಸ್ಥಾನ ದೊರಕಿದೆಯೆ ಎಂದು ಕೇಳಿದ್ದಕ್ಕೆ ವಿಷಾದದಿಂದ ಈ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ಈ 20ನೇ ಶತಮಾನದಲ್ಲಿ ತಾರತಮ್ಯ ತೋರಿಸುತ್ತಾ ಕೇವಲ ಶೇಕಡಾ 10ರಷ್ಟು ಸ್ಥಾನವು ದೊರಕಿಲ್ಲಾ ಎಂದು ನುಡಿದರು. ಇಂದಿನ ಮಹಿಳೆಯರು ರಾಜಕಾರಣದಲ್ಲಿ ಸಕ್ರಿಯವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕೆಂದು ಇದಕ್ಕೆ ಪೂರಕವಾಗಿ ಆಕೆಯನ್ನು ಅಕ್ಷರಸ್ಥಳನ್ನಾಗಿ ಮಾಡಿ ಆರ್ಥಿಕವಾಗಿ ಸ್ವತಂತ್ರಳಾಗಿ ಮಾಡಿದಾಗ ಮಾತ್ರ ಮಹಿಳಾ ಕಲ್ಯಾಣ ಸಾಧ್ಯವೆಂದು ನುಡಿದರು.

—ವೈ.ಹೆಚ್. ಕುಮುದ

ವರ್ಣಚಿತ್ರ : ಎಸ್. ತಿಪ್ಪೇಸ್ವಾಮಿ

ಹಾಸ್ಯಲೇಖನ:

# ಬಾಲಾಯ ತಸ್ಮೈನಮಃ



–ಭುವನೇಶ್ವರಿ ಹೆಗಡೆ

ಗೋದತ್ತೆಯ ಉಸ್ತುವಾರಿಯಲ್ಲಿ ನನ್ನ ಮಗು ಒಂದು ವರ್ಷ ಪೂರೈಸಿ 'ಶಿಶು'ವಿನಿಂದ 'ಮಗು' ಪಟ್ಟಕ್ಕೆ ಪ್ರಮೋಶನ್ ಪಡೆದುಕೊಂಡಿತು. ಶಿಶುಸಹಜ ಹಂತಗಳಾದ 'ಪುಟ್ಟ ಕಣ್ಣೆಲ್ಲಿವೆ? ನಿನ್ನ ಮೂಗೆಲ್ಲಿದೆ ತೋರ್ಸು' ಹಂತ ದಾಟ 'ಟೀವಿಲಿ ಅಜ್ಜ ಕುಂಟ್ತಾ ಹೇಗೆ ನಡೀತಾನೆ ತೋರ್ಸು' ಹಂತಕ್ಕೆ ಬಂದು ತಲುಪಿಸಿದ್ದಾಗಿತ್ತು. ಆ ಅಜ್ಜ ಅದೇನು ಮೋಡಿ ಹಾಕಿದನೋ ಮಗುವಿಗೆ ಸುತ್ತಲಿನ ಎಲ್ಲ ಗಂಡಸರನ್ನು 'ಅಜ್ಜ' ಎಂದೇ ಕರೆಯತೊಡಗಿತು. ಸುಮಾರು ರಿಟೈರಾಗಲು ಬಂದವರನ್ನು ದಾರಿಯಲ್ಲಿ ಮಗು 'ಅಜ್ಜಾ' ಎಂದು ಮುಲಾಜಿಲ್ಲದೆ ಕರೆದಾಗ ಅಷ್ಟು ಭಯವಾಗುವುದಿಲ್ಲ. ಆದರೆ ಸ್ಮಾರ್ಟ್ ಆಗಿ ಬಟ್ಟೆ ಧರಿಸಿ ಬರುವ ಹುಡುಗ ನಮ್ಮ 'ಮೀಟರ್ ರೀಡರ'ನ್ನು ಒಳಗಿಂದಲೇ 'ಅಜ್ಜಾ. ಅಜ್ಜಾ' ಎಂದು ಕರೆದರೆ ಆತ ಸಿಟ್ಟಿಗೆದ್ದು ಸಿಕ್ಕಾಪಟ್ಟೆ ಕರೆಂಟು ಬಿಲ್ಲು ಬರೆದು ಹೋದರೆ ಎಂಬ ಭಯದಲ್ಲಿ ಅವನಿಗೆ ಕೇಳಿಸೋ ಹಾಗೆ "ಅಜ್ಜ ಅಲ್ಲ ಮರೀ. ಅಂಕಲ್ ಅಂಕಲ್" ಎಂದು ತಿದ್ದುಪಡಿ ಮಾಡುತ್ತಿದ್ದೆ.

ಇನ್ನೂ ಮಾತು ಬಾರದ ಕೂಸು ಕೇವಲ 'ಯೀಯ್ ಯೀಯ್' 'ಆಯ್ ಆಯ್' ಎಂಬ ಎರಡೇ ಶಬ್ದಗಳಲ್ಲಿ ತನಗೆ ಬೇಕಾದುದೆಲ್ಲವನ್ನೂ ಮಾಡಿಸಿಕೊಳ್ಳುವ 'ಭಾಷಾ ಸಂಕ್ಷಿಪ್ತತೆ'ಯನ್ನು ಮಗು ನಮಗೆ ತೋರಿಸಿಕೊಟ್ಟಿತು. ಆದರೆ ಜತೆಯಲ್ಲೇ ತನಗೆ ಅತಿ ದುಃಖವಾದಾಗ ಅಥವಾ ಅತಿ ಖುಶಿಯಾದಾಗ ಅಸಾಧ್ಯವಾಗಿ ಕಿರುಚುತ್ತ ತನ್ನನ್ನು ಎತ್ತಿಕೊಂಡವರನ್ನು ಪರಚುತ್ತ ಕಾಲು ಬಡಿಯುತ್ತ ಕೇಕೆ ಹಾಕುವುದನ್ನು ಕಲಿತುಬಿಟ್ಟಿತು. ಅವಳು ಎತ್ತಿ ಹಾಕಿ ಒದೆಯುತ್ತಾಳೆಂದು ಆಕರ್ಷಕ ವಸ್ತುಗಳನ್ನು ಮೇಲೆತ್ತಿಟ್ಟಾಗ, 'ಈಗಿಂದೀಗ ತನ್ನನ್ನು ಎತ್ತಿಕೊಂಡು ಹೊರಗಡೆ ಹೋಗಿ' ಎಂದವಳು ಆದೇಶವಿತ್ತಾಗ ದೊಡ್ಡವರು ನಿಧಾನಿಸಿದರೆ ತುಂಬ ದುಃಖವಾಗಿ ಕಿರುಚುತ್ತಾಳೆ. ನೂಲುಂಡೆಯೊಳಗಿನ ತೂತಿನಲ್ಲಿ ಪೆನ್ನಿನ ಮುಚ್ಚಳದಲ್ಲಿ ತನ್ನ ಕಿರುಬೆರಳು ತೂರಿಕೊಂಡರೆ ಸಾಕು ಖುಷಿಯಲ್ಲಿ ಕಿರುಚು. ಅಂತೂ ದಿನಕ್ಕೆರಡು ಸಲ ಈ ಕಿರುಚಿ ಪರಚು ಕಾರ್ಯಕ್ರಮ ನಡೆಯುತ್ತದೆಂದು ಹೇಳಲು ಬಾರದು.

ಈ ಹಂತಗಳನ್ನೆಲ್ಲ ದಾಟಿ ಮೂರು ವರ್ಷದ 'ಅನುಭವಿ ಬಾಲ' ಚಿನ್ನವನ್ನು ಕರೆದುಕೊಂಡು ನಮ್ಮಕ್ಕ ಬಂದಿಳಿದಾಗ ನಮಗೆಲ್ಲ ಸಾದಾ ಸಂತೋಷವಾದರೆ ನನ್ನ 'ಕಿರುಬಾಲ' ಕಿರುಚಿ ಪರಚಿ ಖುಶಿಪಟ್ಟಿತು.

ಚಿನ್ನ ಬಂದು ಮೂರು ಗಳಿಗೆಯಲ್ಲೇ ನಮ್ಮ ಮನೆಯಲ್ಲಿ ತನ್ನ ಚಕ್ರಾಧಿಪತ್ಯ ಸ್ಥಾಪಿಸಿಕೊಂಡು ಮೂಲೆಯಲ್ಲಿರುವ ಅಣುರೇಣು ತೃಣಗಳನ್ನೊಂದೂ ಬಿಡದೆ ಎದುರು ತಂದು ರಾಶಿ ಹಾಕಿಕೊಂಡು ಆಡತೊಡಗಿದ. ನನ್ನ ಮಗುವಿಗೀಗ ವಿಸ್ಮಯದಿಂದ ಕಿರುಚುವ ಅವಕಾಶ. ಗಾಜಿನ ಮೂರ್ತಿ ಅಲಾರಂ ಮೊದಲಾದ ವಸ್ತುಗಳನ್ನು ಒಡೆಯುತ್ತಾರೆಂದು ಮೇಲೆತ್ತಿಟ್ಟು ಇಬ್ಬರ ಅವಕೃಪೆಗೂ ತುತ್ತಾದೆವು. ಬಂದ ಒಂದು ದಿನಕ್ಕೇ ಚಿನ್ನ ನನ್ನ ಮಗುವಿನ 'ಗುರು'ವಾದ. ನಲ್ಲಿ ನೀರು ತಿರುಗಿಸಿ ಆಡುವುದು, ಸ್ಟೂಲು ಕುರ್ಚಿಗಳನ್ನು ನೆಲ ಗೀರುವಂತೆ ಎಳೆದು ಕೀ ಕೋಂ ಎಂದು ಕೂಗುವುದು ಒಣಗಿಸಿದ ಬಟ್ಟೆಯ ಹಿಂದೆ 'ಕೂಕೆ' ಆಡುವುದು ಟೇಬಲ್ಲು ಫ್ಯಾನಿಗೆ ಕೈಯಿಕ್ಕ ಹೋಗಿ ಹಿರಿಯರಿಗೆ ದೈಹಿಕಶ್ರಮ ನೀಡುವುದು ಮೊದಲಾದ ವಿದ್ಯೆಗಳನ್ನು ನನ್ನ ಬಾಲೆ ಅತಿಶೀಘ್ರ ಕಲಿತುಕೊಂಡಿತು. ಸ್ವರವೆತ್ತಿ ಬೈಯೋಣವೆಂದರೆ ಗೋದತ್ತೆಯ ಭಯ.



ಭುವನೇಶ್ವರಿ ಹೆಗಡೆ

"ಸಾಕು ಸುಮ್ಕಿರ್ರೇ. ಮಕ್ಕಳು ಅಂದ್ರೆ ದೇವರು ಅವು ಲೂಟಿ ಮಾಡದೇ ಇನ್ಯಾರು ಮಾಡ್ತಾರೆ? ಅವಕ್ಕೇನಾದರೂ ಬೈದಿರಿ ಅಂದ್ರೆ..."

ಎಂದು ನಮ್ಮನ್ನೇ ಗದರುತ್ತಿದ್ದರು. ಎರಡೂ ಬಾಲಗಳು ಗೋದತ್ತೆಗೇ ತಗುಲಿಕೊಂಡು ಕೈಗೆ ಸಿಕ್ಕ ವಸ್ತುಗಳನ್ನು ಧ್ವಂಸ ಮಾಡುತ್ತ ಕೇಕೆ ಹಾಕಿಕೊಂಡಿದ್ದವು. ಚಿನ್ನನ ಒಂದು ವಾರದ ತರಬೇತಿಯಲ್ಲಿ ನನ್ನ ಕೂಸು ತಿಂಗಳಿನ ಬೆಳವಣಿಗೆ ಗಳಿಸಿತು. ಅಂತೂ ಇಬ್ಬರು ಬಾಲರ ಹಾವಳಿಗೆ ಮನೆ ಹೊಂದಿಕೊಂಡಿ ತೆಂಬಷ್ಟರಲ್ಲಿ ನನ್ನ ಸ್ನೇಹಿತೆ ನಳಿನಾಕ್ಷಿ ತನ್ನ ಆರು ತಿಂಗಳ ಗೊಂಬೆಯೊಂದಿಗೆ ಬಂದಿಳಿದಳು. "ಅರ್ಜೆಂಟ್ ಕೆಲಸದ ನಿಮಿತ್ತ ಬಂದಿದೀನಿ ಕಣೆ. ಎರಡು ಮೂರು ದಿನ ನಿಮ್ಮ ಮನೇಲೇ ಠಿಕಾಣಿ" ಎನ್ನುತ್ತಲೇ ಒಳಬಂದಳು. ನಳಿನಾಕ್ಷಿ ಬಂದರೆ ನನಗೇ ಒಮ್ಮೊಮ್ಮೆ ಕಿರುಚುವಷ್ಟು ಸಂತೋಷವಾಗುತ್ತಿತ್ತು. (ಈ ಬಾರಿ ಅದನ್ನು ಮಾಡಲು ನನ್ನ ಮಗಳಿದ್ದಾಳಲ್ಲ.) ಈ ಬಾರಿ ಮುದ್ದಾದ ಮಗು ಬೇರೆ ಜತೆಗೆ.

"ತ್ರಿಮೂರ್ತಿಗಳಾದರು [illegible]" ಎಂದು [illegible] ನನ್ನ [illegible]

ಅಲ್ಲಾಡಿಸುವ, ಕಣ್ಣು ಪಿಳುಕಿಸುವ, ಅಳುವ ನಗುವ ಗೊಂಬೆಯನ್ನು ನೋಡಿ ವಿಸ್ಮಯದಿಂದ ಕೈಕಾಲು ಬಡಿಯುತ್ತ ಕೇಕೆ ಹಾಕಿ ಖುಶಿ ವ್ಯಕ್ತಪಡಿಸಿತು. ಮತ್ತು ಸುಮಾರು ಹೊತ್ತು ಅದನ್ನೇ ಮುಂದುವರಿಸಿತು. ಅದನ್ನು ಕೇಳಿದ ನಳಿನಾಕ್ಷಿಯ ಪಾಪುಗೆ ಅದೇನೆನ್ನಿಸಿತೋ ತಾನು ಉತ್ಸಾಹದಿಂದ 'ಕೀರ್ ಕೀಂ 'ಎನ್ನುತ್ತ ತನ್ನಮ್ಮನನ್ನು ಪರಚತೊಡಗಿತು. ಈ ಅವಕಾಶ ಚೆನ್ನ ಬಿಟ್ಟಾನೆಯೇ? ಅವನೂ ದನಿಗೂಡಿಸಿದ.

ಈ ಕಿರುಚಾಟದ ನಡುವೆ ಯೋಗಕ್ಷೇಮದ ಮಾತಿರಲಿ 'ಏನು ಕುಡೀತೀಯ?'' ಎಂದು ಕೇಳಿದ್ದೂ ಕೇಳಿಸದೆ ನಾವು ಕೊಟ್ಟ ಏನೋ ಒಂದನ್ನು ನಳಿನಾಕ್ಷಿ ಕುಡಿಯಬೇಕಾಯ್ತು.

ಮನೆ ಮೂರು ಮಕ್ಕಳಿಂದ ತುಂಬಿ ಗಿಲಿಗುಟ್ಟಿತು. ದೊಡ್ಡ ದೇವರು (ಚೆನ್ನೂ) ನಡು ಹಂತದ ದೇವರು (ನನ್ನ ಕೂಸು) ಹಾಗೂ ತೀರಾ ಚಿಕ್ಕ ದೇವರು (ನಳಿನಾಕ್ಷಿಯ ಪಾಪು) ಈ ಮೂವರು ತ್ರಿಮೂರ್ತಿಗಳ ಕೃಪೆಯಿಂದ ನಮ್ಮ ಮನೆಯ ಸಕಲ ಚರಾಚರ ವಸ್ತುಗಳಿಗೂ 'ಮೋಕ್ಷ' ಸಿಕ್ಕಿತು. ಪೆನ್ನು, ಇಂಕು ಬಾಟಲು, ಇಸ್ತ್ರಿಪೆಟ್ಟಿಗೆ ಮೊದಲಾದ ವಸ್ತುಗಳು ಈ ತ್ರಿಮೂರ್ತಿಗಳ ಕೃಪಾ ಕಟಾಕ್ಷಕ್ಕೊಳಗಾಗಿ 'ಪ್ರಾಣತ್ಯಾಗ' ಮಾಡಿದರೆ ಖುರ್ಚಿ ಸ್ಟೂಲು ಮೊದಲಾದ ಅಚಲ ವಸ್ತುಗಳಿಗೆ ಪ್ರಾಣ ಸಿಂಚನವಾಗಿ ಗಿರ್‌ಗಿರ್ರಕ್ ಸಪ್ಪಳ ಮಾಡುತ್ತ ಇಡೀ ಮನೆಯಲ್ಲಿ ಓಡಾಡತೊಡಗಿದವು. ಅವುಗಳನ್ನು ಸವಾರಿ ಮಾಡುವುದು ಸೀನಿಯರ್ ದೇವರು ಚೆನ್ನನ ಕೆಲಸವಾದರೆ ಅವನ್ನು ನೋಡಿ ಖುಷಿ ಪಟ್ಟು ಕೇಕೆ ಹಾಕುವುದು ಜ್ಯೂನಿಯರ್ ದೇವರುಗಳ ಕೆಲಸವಾಯ್ತು. ಅವಕ್ಕೇನಾದರೂ ದೇಹಾಪಾಯವಾಗದಂತೆ ಕಾಯ್ದುಕೊಳ್ಳುವದು ನಮ್ಮ ಪಾಲಿನ ಕೆಲಸ. ಅದಲ್ಲದೆ ತಮ್ಮ ಮನರಂಜನೆಯನ್ನು ಸದಾ ತಾಯಂದಿರು ನೋಡಿ ಆಸ್ವಾದಿಸಲೇಬೇಕೆಂಬ ಹಠ ಮಕ್ಕಳದ್ದು.

ತ್ರಿಮೂರ್ತಿಗಳ ತಿಂಡಿ ಹಾಲು ಬಾಲುಗಳಲ್ಲೇ ದಣಿದ ನಮಗೆ ನಳಿನಾಕ್ಷಿ ಬಂದಿದ್ದೇಕೆಂದು ಕೊನೆಗೂ ಕೇಳಲಾಗಲೇ ಇಲ್ಲ. ಸದಾ ಸಣ್ಣವುಗಳು ಮಲಗಲು ಒಂಚೂರೂ ಸಿದ್ಧವಿಲ್ಲದೆ ಇಡೀ ರಾತ್ರಿ ಬೇಕಾದರೂ ಆಟವಾಡಿ ದಣಿ(ಸ)ಯಲು ಸಿದ್ಧರೆಂಬಂತೆ ಆಡಿಕೊಂಡಿದ್ದವು. ಅವುಗಳನ್ನು ಎಳೆದು ತಂದು ಧಬ ಧಬ ತಟ್ಟಿ ಮಲಗಿಸಿದ ತಾಯಂದಿರಲ್ಲ ನಿದ್ರಾಸನ್ನಿ ಹಿಡಿದಂತೆ ಭೂಮಿಗೊರಗಿದೆವು.

ಬೆಳಿಗ್ಗೆ ಎದ್ದ ನಳಿನಾಕ್ಷಿ ತನಗೆ ದಂತವೈದ್ಯರ ಬಳಿ ಹೋಗಬೇಕೆಂದೂ,ಇನ್ನೂ ಹಲ್ಲು ಮೂಡದ ಹಸುಳೆ ಅಲ್ಲಿಗೇಕೆ ಮನೆಯಲ್ಲೇ ಬಿಟ್ಟುಹೋಗಲೇ ಎಂದಾಗ ಗೋದತ್ತೆ ಅದೇ ಸರಿಯೆಂದು ಆದೇಶಿಸಿ ತನ್ನ ಹಲ್ಲನ್ನೂ ತೋರಿಸಲೆಂದು ಹೊರಟು ನಿಂತರು. ಆಯ್ತು ಒಂದರ್ಧ ದಿನ ತಾನೆ ಹೇಗೋ ಸಂಭಾಳಿಸಿಕೊಳ್ತೀನಿ' ಎಂದು ಕಳಿಸಿ ದೇವರುಗಳತ್ತ ಗಮನ ಹರಿಸಿದೆ.

ರಾತ್ರಿಯಷ್ಟೇ ಬಂದಿದ್ದ ನಳಿನಾಕ್ಷಿ ತನ್ನ ಮಗುವಿನ ಬಯೋಡಾಟಾವನ್ನು ಕೊಟ್ಟಿರಲಿಲ್ಲ.ಆದರೂ ಹೋಗುವ ಗಡಿಬಿಡಿಯಲ್ಲಿ ಲೋಟ ಎತ್ತಿ ಕುಟ್ಟತೊಡಗಿದರೆ ಹಾಲು ಬೇಕೆಂದೂ, ತಲೆಯನ್ನು ಗೋಡೆಗೆ ಪದೇ ಪದೇ ಉಜ್ಜತೊಡಗಿದರೆ, ನಿದ್ದೆ ಬಂತೆಂದೂ ಎರಡೂ ತೋಳು ಚಾಚಿ 'ಊಂ ಊಂ'ಎಂದರೆ ಎತ್ತಿಕೊಂಡು ಹೊರಗೆ ಕರೆದುಕೊಂಡು ಹೋಗೆಂದೂ, ಆಳವಾದ ಹೂಂಕಾರಕ್ಕೆ ಮೊದಲಿಟ್ಟರೆ ಕಕ್ಕ ಬಂತೆಂದೂ ಹೇಳಿದಂತೆ ಎಂದು ವಿವರಿಸಿ ಹೋದಳು. ನನ್ನ ಮಗುವಿನ ಬಯೋಡಾಟಾ ಕೂಡ ಇದಕ್ಕೆ ಟ್ಯಾಲಿ ಆಗುತ್ತಿತ್ತಾದ್ದರಿಂದ ಸಮಸ್ಯೆಯಾಗಲಿಕ್ಕಿಲ್ಲವೆಂದು ಭಾವಿಸಿದೆ.

ತಾಯಿ ಹೊರಗೆ ಹೋದ ಬಗ್ಗೆ ಕಿಂಚಿತ್ತೂ ಕೇರ್ ಮಾಡದ ಚಿಲ್ಟಾರಿಯು ನಮ್ಮ ಸೀನಿಯರ್ ಮಕ್ಕಳ ಜತೆ ಆಡಲು ತೊಡಗಿದಾಗ ನನಗೆ ನೆಮ್ಮದಿಯಾಯ್ತು. ಹತ್ತು ನಿಮಿಷ ಆಟ ಮುಂದುವರಿಯಿತು. ಅಂದರೆ ಹತ್ತು ವಾರಪತ್ರಿಕೆಗಳಷ್ಟೇ ಚೂರಾದವು. ಅಷ್ಟರಲ್ಲಿ ನನ್ನ ಮಗಳು 'ಈಯಯ್ಯೀ' ಎಂದು ಅದೇನೋ ಕೂಗಿ ಹೇಳಿತು. ಇದುವರೆಗಿನ ಅವಳ ವೊಕ್ಯಾಬ್ಯುಲರಿಯಲ್ಲಿ ಈ ಸ್ವರಪುಂಜ ಕೇಳಿ ಬಂದಿರಲಿಲ್ಲ. ಹೊಸ ಸಂಗಾತಿಗಳು ಸಿಕ್ಕ ಭರದಲ್ಲಿ ಹೊರಬಿದ್ದ ಉದ್ಗಾರವಿರಬಹುದೆಂದು ಭಾವಿಸಿ ಅಲಕ್ಷಿಸಿದೆ. ಈಗ ಅವನ್ನೇ ಅನುಕರಿಸಿದ ಚಿಲ್ಟಾರಿ ನಂ. 3 ಸಹ 'ಈಯಯ್ಯೀ....' ಎನ್ನುತ್ತ ಅಳಲುಪಕ್ರಮಿಸಿತು. 'ಏನು ಬೇಕು ಪುಟ್ಟಮ್ಮ ಎಂದು ಬಣ್ಣಿಸಿ ಕೇಳ ಹೋದ ನನಗೆ 'ಕಿರುಚು ಪರಚು' ಮಾತ್ರ ಲಭಿಸಿದಾಗ ಕಂಗೆಟ್ಟೆ. 'ಈಯಯ್ಯೀ' ನಿಂತಿರಲಿಲ್ಲ.

''ಅವರೆಡಕ್ಕೂ ಬಿಸ್ಕತ್ ಬೇಕಂತೆ ಚಿಕ್ಕಮ್ಮ'' ಎಂದು ಅವರೆಡರ ಕೇರ್ ಟೇಕರ್ ಚೆನ್ನೂ ಆದೇಶಿಸಿದಾಗ ಎಲಾ ಈ ಬಾಲ (!) ಭಾಷೆ ಈ ಬಾಲನಿಗೆ ಹೇಗೆ ತಿಳೀತು ಅಂತ ಆಶ್ಚರ್ಯವಾಯ್ತು. ಸರಿ ಮೂರು ಬಿಸ್ಕತ್ ತೆಗೆದುಕೊಟ್ಟೆ. ಚಿಲ್ಟಾರಿಗಳೆರಡೂ ಬಿಸ್ಕತ್ತನ್ನು ಮೂಸಿಯೂ ನೋಡದೆ ಈಯಯ್ಯೀ ಮುಂದುವರಿಸಿದ್ದವು. 'ಹಾಳಾಗುತ್ತಲ್ಲ ಆಂಟಿ' ಎನ್ನುತ್ತ ಚೆನ್ನು ಮೂರೂ ಬಿಸ್ಕತ್ ತಿಂದ. ಅಳು ಮತ್ತೂ ಜೋರಾದಾಗ ಚೆನ್ನೂ ಮತ್ತೆ ಬಾಯ್ಬಿಟ್ಟ ದುಭಾಷಿಯ ಗತ್ತಿನಲ್ಲಿ.

"ಈಯಯ್ಯೀ ಎಂದರೆ ಇದಲ್ಲ ಚಿಕ್ಕಮ್ಮ ಪ್ಲಾಸ್ಟಿಕ್ ಡಬ್ಬದಲ್ಲಿರುವ ಚಾಕಲೇಟು ಬೇಕು ಎಂದು ಅಳ್ತಿದಾವೆ'' ಎಂದು ನಿಖರವಾಗಿ ಹೇಳಿದಾಗ,ನನಗೆ ಅನುಮಾನವಾದರೂ 'ಹೋಗಲಿ ನೋಡಿದರಾಯ್ತು' ಎಂದು ಮೂರು ಚಾಕಲೇಟು ತೆಗೆದುಕೊಟ್ಟೆ. ಚೆನ್ನೂಗೆ ಮೂರು ಚಾಕಲೇಟು ತಿನ್ನುವ ಅನಿವಾರ್ಯತೆ ಒದಗಿತೇ ವಿನಹ 'ಈಯಯ್ಯೀ' ನಿಲ್ಲಲಿಲ್ಲ.

ದೇವಭಾಷೆ ಸುಲಲಿತವಾಗಿ ಅರ್ಥವಾಗುತ್ತಿದ್ದ ಗೋದತ್ತೆ ಇದ್ದಿದ್ದರೆ ಸಮಸ್ಯೆಯಿರಲಿಲ್ಲ. ನನಗಿರುವ ಏಕೈಕ ದುಭಾಷಿ ಚೆನ್ನು ಒಬ್ಬನೇ. ಈ ಬಾರಿ ನಳಿನಾಕ್ಷಿಯ ಮಗು ದೊಡ್ಡ ಸ್ವರವೆತ್ತಿ 'ಈಯಯ್ಯೋ ಯ್ಯೋ ಯ್ಯೋ' ಎಂದು ದೀರ್ಘವಾಗಿ ಅಳತೊಡಗಿತು. ಅವನ್ನು




## ನ್ಯಾಷನಲ್ ನಿಪ್ಪೋ ಸ್ಮಾರ್ಟ್ ಕುಕ್ ಅಡಿಗೆ ಸ್ಪರ್ಧೆ

ಇಂಡೋ ಮಟ್ಸುಶಿಟಾ ಕಂಪೆನಿ ಹಲವು ಹೋಮ್ ಅಪ್ಲಾಯನ್ಸ್‌ಗಳನ್ನು ತಯಾರಿಸುವ ಸಂಸ್ಥೆ. ಜೊತೆಗೆ ಗೃಹಿಣಿಯರಿಗಾಗಿ ವ್ಯವಸ್ಥಿತವಾಗಿ, ಉಚಿತವಾಗಿ ಸ್ಮಾರ್ಟ್ ಕುಕ್ ಸರ್ಕಲ್ ಎಂಬ ಲಾಂಛನದಲ್ಲಿ ಅಡಿಗೆ ತರಗತಿಗಳನ್ನು ನಡೆಸುತ್ತದೆ. ಇವೆಲ್ಲ ಚಟುವಟಿಕೆಗಳ ಹಿಂದಿರುವ ವ್ಯಕ್ತಿ–ಶಕ್ತಿ ಚಂದ್ರಿಕಾ ಭಟ್.

ಈ ಸಂಸ್ಥೆ ದಿ. 6–9–92ರಂದು ಮದರಾಸಿನಲ್ಲಿ ಪ್ರಪ್ರಥಮ ಬಾರಿಗೆ ನ್ಯಾಷನಲ್ ನಿಪ್ಪೋ ಸ್ಮಾರ್ಟ್ ಕುಕ್ ಅಡಿಗೆ ಸ್ಪರ್ಧೆಯನ್ನು ನಡೆಸಿತು. ಈ ಸ್ಪರ್ಧೆಯಲ್ಲಿ ಭಾಗವಹಿಸುವವರು ಈ ಮೇಲೆ ಹೇಳಿದ ಸಂಸ್ಥೆ ತಯಾರಿಸಿದ ನ್ಯಾಷನಲ್ ನಿಪ್ಪೋ ಆಟೋಮ್ಯಾಟಿಕ್ ಎಲೆಕ್ಟ್ರಾನಿಕ್ ಕುಕ್ಕರನ್ನು ಉಪಯೋಗಿಸಬೇಕೆಂದು ಷರತ್ತು ಹಾಕಲಾಗಿತ್ತು. ಹಾಗೂ ಅದನ್ನು ಬಳಸಿ ಎರಡು ಗಂಟೆಗಳೊಳಗೆ ತಿನಿಸುಗಳನ್ನು ತಯಾರಿಸಲಾಯಿತು. ಭಾಗವಹಿಸಿದ 15 ಸ್ಪರ್ಧಿಗಳಲ್ಲಿ ಮೂವರು ಮಾಡಿದ ಅಡಿಗೆಯನ್ನು ತೀರ್ಪುಗಾರರು ಆಯ್ಕೆ ಮಾಡಿದರು. ಗೆದ್ದ ಅಭ್ಯರ್ಥಿಗಳಿಗೆ ಬಹುಮಾನ ವಿತರಿಸಲಾಯಿತು.

ಮೊದಲ ಬಹುಮಾನ :
**ಅಖಿಲಾ ಎಸ್. ರಾವ್** (ಮಧ್ಯ)
ಎರಡನೇ ಬಹುಮಾನ :
**ಅಲಕಾ ಪ್ರಕಾಶ್** (ಎಡಬದಿ)
ತೃತೀಯ ಬಹುಮಾನ :
**ಜಮುನಾ ಮಾಧವ್** (ಬಲಬದಿ)

## 'ಬಹುನಾಮಧಾರಿ'

*72 ವಯಸ್ಸಿನ ಪ್ರಭಾಕರ ಮುಖರ್ಜಿ ಖ್ಯಾತ ಕ್ರೈಂ ಕಥಾ ಲೇಖಕರು. ಗ್ಲೋಬ್ ಡಿಟೆಕ್ಟಿವ್ ಏಜೆನ್ಸಿ (ಪ್ರೈ) ಲಿಮಿಟೆಡ್ ಎಂಬ ಸಂಸ್ಥೆ 1982ರಿಂದ 89ರವರೆಗೆ ನಡೆಸಿದ "ಡಿಟೆಕ್ಟಿವ್ ಡೈಜೆಸ್ಟ್'' ಎಂಬ ಮಾಸಿಕಕ್ಕೆ ಕ್ರೈಂ ಕಥೆಗಳನ್ನು ಕಳಿಸುತ್ತಿದ್ದರು. ಒಂದು ಸಂಚಿಕೆಯಲ್ಲಿ ಒಬ್ಬ ಕತೆಗಾರನ ಒಂದು ಕಥೆ ಪ್ರಕಟವಾಗುವುದು ವಾಡಿಕೆ. ಆದರೆ ಕೆಲಬಾರಿ ಈ "ಡಿಟೆಕ್ಟಿವ್ ಡೈಜೆಸ್ಟ್''ನ ಹಲವಾರು ಸಂಚಿಕೆಗಳಲ್ಲಿ ಪ್ರತಿ ಸಂಚಿಕೆಯಲ್ಲೂ ಆರರಿಂದ ಎಂಟು ಕತೆಗಳನ್ನು ಇವರು ಬರೆದದ್ದುಂಟು. ಅರ್ಥಾತ್ ಆ ಪತ್ರಿಕೆ ಇವರನ್ನೇ ಅವಲಂಬಿಸಿತ್ತೆಂದರೆ ಅತಿಶಯೋಕ್ತಿಯಲ್ಲ. ಈ ಒಂದೇ ಪ್ರಕಾಶನಕ್ಕೆ ಅವರು 538ಕ್ಕೂ ಹೆಚ್ಚು ಕತೆಗಳನ್ನು ಬರೆದು ಕಳಿಸಿದ್ದಾರೆ. ಅವೆಲ್ಲವೂ ಪ್ರಕಟವಾಗಿ ಜನಪ್ರಿಯ ಆಗಿವೆ ಕೂಡ. ಅದಕ್ಕಾಗಿ ಅವರು ಮಾಡಿದ ಕೆಲಸವೆಂದರೆ 146 ಅಂಕಿತ ನಾಮಗಳನ್ನು ಉಪಯೋಗಿಸಿದ್ದು. ಬಹುನಾಮಧಾರಿ ಮುಖರ್ಜಿ ಸಾಹಿತ್ಯಲೋಕದ ಅಪರೂಪ ವ್ಯಕ್ತಿ.*

ಆದರದಿಂದ ಒಳಗೆ ಕರೆದು ಕೂರಿಸಿದರು. ಸಂಕೋಚದಿಂದ ಬೇಡಬೇಡವೆಂದರೂ ಕೇಳದೆ ಹೊಟ್ಟೆ ತುಂಬುವಷ್ಟು ಉಪ್ಪಿಟ್ಟು ಕೊಟ್ಟರು. ಪಾತಮ್ಮ ಉಪ್ಪಿಟ್ಟು ತಿನ್ನುತ್ತಾ ತಮ್ಮ ಕಥೆಯೆಲ್ಲಾ ಹೇಳಿಕೊಂಡು ಅತ್ತರು.

ಪಾತಮ್ಮನ ಕರುಣಾಜನಕ ಕಥೆ ಕೇಳಿ ಮರುಗಿದ ವಿಶಾಲಾಕ್ಷಮ್ಮ "ಪಾತಮ್ಮನೋರೇ, ನೀವು ಕಷ್ಟ ಪಡೋದಿಕ್ಕೆ ತಯಾರಾಗಿದ್ರೆ ನಾನು ನಿಮಗೆ ದಾರಿ ತೋರಿಸಬಲ್ಲೆ" ಎಂದರು.

"ಅಮ್ಮ ಭಿಕ್ಷೆ ಬೇಡೋ ಅಂತ ಹೀನ ಕೆಲಸಕ್ಕಿಂತ ಕಷ್ಟಪಟ್ಟು ದುಡಿಯೋದು ಮೇಲಲ್ಲವೇ? ಬಡತನ ನನ್ನ ಬುದ್ಧಿಗೆ ಮಂಕು ಕವಿಸಿತ್ತು. ಅದಕ್ಕೆ ಭಿಕ್ಷೆ ಬೇಡೋಕೆ ಹೊರಟೆ. ಮಕ್ಕಳು ಹೊಟ್ಟೆಗಿಲ್ಲದೆ ಸಾಯೋದನ್ನು ನೋಡೋ ಕಷ್ಟ ತಪ್ಪೋದಾದ್ರೆ, ನಾನು ಏನು ಕೆಲಸ ಮಾಡೋದಿಕ್ಕೂ ಸಿದ್ಧ" ಎಂದರು ಪಾತಮ್ಮ

"ನಮ್ಮ ಮನೆಯಲ್ಲಿ ಮೆಣಸಿನ ಪುಡಿ ಮುಗಿದು ಹೋಗಿದೆ. ನಾಳೆ ನಮ್ಮ ಮನೆಗೆ ಬಂದು ಮೆಣಸಿನ ಪುಡಿ ಮಾಡಿ ಕೊಡಿ. ಸೇರಿಗೆ ಎರಡು ರೂಪಾಯಿ ಕೊಡ್ತೀನಿ. ಹಾಗೇ ನನ್ನ ಪರಿಚಯದವರಿಗೂ ಗುರುತು ಮಾಡಿಸಿ ಕೊಡ್ತೀನಿ" ಎಂದರು.

ಪ್ರವಾಹದಲ್ಲಿ ದಿಕ್ಕಾಪಾಲಾಗಿ ಹೋಗುತ್ತಿದ್ದವನಿಗೆ ಹುಲ್ಲು ಕಡ್ಡಿಯ ಆಸರೆ ಸಿಕ್ಕಂತಹ ಅನುಭವ ಪಾತಮ್ಮನಿಗೆ. ಮೊದಲ ಬಾರಿ ನಾಲ್ಕು ಸೇರು ಮೆಣಸಿನ ಪುಡಿ ಕುಟ್ಟಿ ಎಂಟು ರೂಪಾಯಿ ಸಂಪಾದಿಸಿದರು. ವಿಶಾಲಾಕ್ಷಮ್ಮ ಒಂದು ಪಾವು ಮೆಣಸಿನ ಪುಡಿ, ಜೊತೆಗೆ ಒಂದು ಸೇರು ನುಚ್ಚು ಕೊಟ್ಟಾಗ ಪಾತಮ್ಮನಿಗೆ ಪರಮಾನಂದ. ಎಷ್ಟೋ ದಿನಗಳ ನಂತರ ಮನೆಯಲ್ಲಿ ಅಡಿಗೆ ಮಾಡಿ ಮಕ್ಕಳಿಗೆ ಹೊಟ್ಟೆ ತುಂಬಾ ಉಣ್ಣಲು ಬಡಿಸಿ, ಸಂತೋಷ ತಾಳಲಾಗದೆ ಗಳಗಳನೆ ಅತ್ತು ಬಿಟ್ಟರು.

ಹೀಗೆ ಶುರುವಾಯಿತು ಪಾತಮ್ಮನ ವೃತ್ತಿ. ಮೊದಮೊದಲು ಹತ್ತಾರು ಮನೆಗಳಿಗೆ ಮೆಣಸಿನ ಪುಡಿ, ಚಟ್ನಿ ಪುಡಿ ಮಾಡಿಕೊಡುತ್ತಿದ್ದರು. ವಿಶಾಲಾಕ್ಷಮ್ಮನ ನೇತೃತ್ವದಲ್ಲಿ ಪಾತಮ್ಮ ಚಕ್ಕುಲಿ, ಉಂಡೆ, ಹಪ್ಪಳ, ಸಂಡಿಗೆ, ಬಗೆ ಬಗೆಯ ಭಕ್ಷ್ಯಗಳನ್ನು ಅತ್ಯಂತ ನಾಜೂಕಾಗಿ, ರುಚಿಕರವಾಗಿ ಮಾಡುವುದನ್ನು ಕಲಿತರು. ಮೊದಮೊದಲು ಭಕ್ಷ್ಯಗಳನ್ನು ತಯಾರಿಸುವುದು ವಿಶಾಲಾಕ್ಷಮ್ಮನ ತುಂಬು ಸಂಸಾರಕ್ಕೆ ಮೀಸಲಾಗಿದ್ದರೂ, ನಂತರ ನಿಧಾನವಾಗಿ ಎಲ್ಲೆಡೆಗೆ ವಿಸ್ತರಿಸಿದರು. ಎರಡು ಮೂರು ವರ್ಷಗಳಲ್ಲಿ ಪಾತಮ್ಮ ಈ ವಿಷಯದಲ್ಲಿ ಭಾರೀ ನಿಪುಣತೆಯನ್ನು ಪಡೆದರು. ಉಣ್ಣಲು ತೊಂದರೆಯಿಲ್ಲ ಎನ್ನುವ ಮಟ್ಟಿಗೆ ಸಂಪಾದನೆ ಹೆಚ್ಚಾಯಿತು. ಶಾಲೆ ಬಿಡಿಸಿದ್ದ ಮಕ್ಕಳನ್ನು ಒಂದು ವರ್ಷದ ನಂತರ ಮತ್ತೆ ಶಾಲೆಗ ಕಳಿಸಲಾರಂಭಿಸಿದರು. ಮುಳುಗಿ ಹೋಗುತ್ತಿದ್ದ ತಮ್ಮ ಸಂಸಾರಕ್ಕೆ ಅನ್ನ ನೀಡಿದ ಅನ್ನಪೂರ್ಣೆ ಎಂದು ವಿಶಾಲಾಕ್ಷಮ್ಮನನ್ನು ದಿನವೂ ಕೃತಜ್ಞತೆಯಿಂದ ಸ್ಮರಿಸುತ್ತಿದ್ದರು.

ಹತ್ತು ವರ್ಷಗಳಲ್ಲಿ ಪಾತಮ್ಮನ ವೃತ್ತಿ ಬೃಹದಾಕಾರವಾಗಿ ಬೆಳೆದಿದೆ. ಹಬ್ಬ ಹುದಿನಗಳಲ್ಲಿ ಒಬ್ಬಟ್ಟು ಮಾಡುವುದರಿಂದ ಹಿಡಿದು ಮದುವೆ ಮುಂಜಿಗಳಿಗೆ ಚಕ್ಕುಲಿ ಉಂಡೆ, ಹಪ್ಪಳ, ಸಂಡಿಗೆ ಮಾಡಲು ಒಂದಲ್ಲ ಒಂದು ಕಡೆಯಿಂದ ಕರೆ ಬರುತ್ತದೆ. ಸಂಪಾದನೆಯೂ ಹೆಚ್ಚಿದೆ. ಬಡತನ, ಕೀಳರಿಮೆ ಮಾಯವಾಗಿ ಆತ್ಮವಿಶ್ವಾಸ ಮೂಡಿದೆ. ಇಷ್ಟೆಲ್ಲಾ ಕೆಲಸ ಮಾಡಬಲ್ಲ ತಾನು ಅದು ಹೇಗೆ ಭಿಕ್ಷಾವೃತ್ತಿಗೆ ಇಳಿದಿದ್ದೆ ಎಂದು ಎಷ್ಟೋ ಬಾರಿ ಪಾತಮ್ಮ ಯೋಚಿಸುತ್ತಾಳೆ. ಹಾಗೆ ಯೋಚಿಸಿದಾಗಲೆಲ್ಲಾ ಮನಸ್ಸು ನಾಚಿಕೆಯಿಂದ ಕುಗ್ಗಿ ಹೋಗುತ್ತದೆ. ದೇವರು ಆ ಮೂಲಕವೇ ಅಲ್ಲವೇ ವಿಶಾಲಾಕ್ಷಮ್ಮನ ಪರಿಚಯ ಮಾಡಿಸಿ ಒಂದು ದಾರಿ ತೋರಿಸಿದ್ದು ಎಂದು ಮತ್ತೆ ತಂತಾನೇ ಸಮಾದಾನ ತಂದುಕೊಳ್ಳುತ್ತಾರೆ. ಈಗ ಮಕ್ಕಳು ದೊಡ್ಡವರಾಗಿದ್ದಾರೆ. ಮಂಜುನಾಥ ಎಸ್.ಎಸ್.ಎಲ್.ಸಿ. ಮುಗಿಸಿ ಜೊತೆಯಲ್ಲೇ ಟೈಪಿಂಗ್, ಷಾರ್ಟ್‌ಹ್ಯಾಂಡ್ ಕಲಿತು ಕೆಲಸಕ್ಕೆ ಸೇರಿದ್ದಾನೆ. ಶ್ರೀನಾಥ ಪಿ.ಯು.ಸಿ.ಗೆ ಸೇರಿದ್ದಾನೆ. ಸರಳಾ ಎಸ್.ಎಸ್.ಎಲ್.ಸಿ.ಗೆ ಓದುತ್ತಿದ್ದಾಳೆ.

ಹತ್ತು ವರ್ಷದ ಹಿಂದೆ ಅಲ್ಲೋಲ ಕಲ್ಲೋಲವಾಗಿದ್ದ ತನ್ನ ಸಂಸಾರಕ್ಕೂ, ಇಂದು ನೆಮ್ಮದಿಯ ತಮ್ಮ ಪರಿಸ್ಥಿತಿಗೂ ಹೋಲಿಸಿಕೊಂಡು, ಮನಸ್ಸಿದ್ದರೆ ಮಾರ್ಗ ಎನ್ನುವುದು ಎಷ್ಟು ಸತ್ಯ ಎಂದುಕೊಳ್ಳುತ್ತಾರೆ.

ಇಷ್ಟು ವರ್ಷಗಳಿಂದ ಗಂಡನ ಸಮಾಚಾರವೇ ಇಲ್ಲವೇ ಹೋದರೂ, ಅವರು ಸತ್ತಿದ್ದಾರೆಂದು ಒಪ್ಪಲು ಮಾತ್ರ ಮನಸ್ಸು ಬಾರದು. ಅವರು ಬರುತ್ತಾರೆ, ಬಂದೇ ಬರುತ್ತಾರೆ ಎಂದು ದೃಢವಾಗಿ ನಂಬಿದ್ದಾರೆ. ಬಲವಂತವಾಗಿ ಧರಿಸಿದ ವಿಧವೆಯ ವೇಷ ಅವರನ್ನು ಶೂಲದಂತೆ ಇರಿಯುತ್ತದೆ. ತನ್ನ ಸೌಭಾಗ್ಯದ ಲಕ್ಷಣಗಳನ್ನು ತೆಗೆಯುವವರೆಗೆ ನಿತ್ಯವೂ ಬಂದು ಹೋಗುತ್ತಿದ್ದ ಜನರು, ಹಸಿವಿನಿಂದ ಬಳಲುತ್ತಿದ್ದ ತನ್ನ ಮಕ್ಕಳಿಗೆ ಒಂದು ದಿನ ಊಟ ನೀಡಲೂ ಮುಂದೆ ಬರಲಿಲ್ಲವಲ್ಲಾ ಎಂದುಕೊಂಡಾಗ ಮನಸ್ಸು ಕಹಿಯಾಗುತ್ತದೆ.

* * * *

ಗಂಡನ ನೆನಪಿನಿಂದ ತೇವವಾಗಿದ್ದ ಕಣ್ಣುಗಳನ್ನು ಸೆರಗಿನ ತುದಿಯಿಂದ ಒರೆಸಿಕೊಳ್ಳುತ್ತಿದ್ದಂತೆ ಮಂಜುನಾಥನ ಮಾತಿನಿಂದ ಬೆಚ್ಚಿ ವಾಸ್ತವ ಜಗತ್ತಿಗೆ ಮರಳಿದರು.

"ಬೇರೆಯವರ ಹೊಟ್ಟೆ ತುಂಬಿಸೋದ್ರಲ್ಲೇ ಇರ್ತೀಯೋ ಹೊರ್ತು ಮಗ ಹಸಿದು ಬಂದಿದಾನೇನ್ನೋ ಯೋಚನೇನೇ ನಿಂಗಿದ್ದ ಹಾಗಿಲ್ಲ" ಮಂಜುನಾಥನ ಹರಿತವಾದ ಮಾತು ಕೇಳಿ ಪಾತಮ್ಮ

"ಯಾಕೆ ಈ ನಡುವೆ ಹೀಗಾಡ್ತೀಯಾ ಮಂಜು? ನಿಮ್ಮಗಳ ಹೊಟ್ಟೆ ತುಂಬಿಸೋದಿಕ್ಕೇ ಅಲ್ವಾ ನಾನಿಷ್ಟೆಲ್ಲಾ ಕಷ್ಟ ಪಡೋದು. ಎಲ್ಲಾದ್ರೂ ತಾಯಿಯಾದವಳು ಮಕ್ಕಳ ಹೊಟ್ಟೆ ಮರೆಯೋದುಂಟಾ? ನಿನಗಿಷ್ಟವಾದ ಹುಗ್ಗಿ ಮಾಡಿಟ್ಟ ಮೇಲೆ ನಾನು ಒಬ್ಬಟ್ಟಿನ ಕೆಲಸಕ್ಕೆ ಕೂತಿದ್ದು" ಎಂದು ಪಾತಮ್ಮ ಮಗನ ತಟ್ಟೆಗೆ ಗಮಗಮಿಸುವ ಹುಗ್ಗಿಯನ್ನು ಹಾಕಿದಾಗ ಮಂಜುನಾಥ ಕರಗಿದ.

"ಅಮ್ಮ ಯಾಕೋ ಎಷ್ಟು ದಿನಾ ಆದ್ರೂ ನೀನು ಈ ಕೆಲಸ ಬಿಡಲ್ವಲ್ವಾಂತ ನಂಗೆ ಬೇಸರ ಆಗ್ತಿತ್ತು. ಏನೇನೋ ಮಾತಾಡ್ಬಿಟ್ಟೆ ಕ್ಷಮಿಸಿಬಿಡು" ಎಂದ ಮಂಜುನಾಥ ಮೆಲ್ಲಗೆ.

"ನೋಡು, ಈಗ ನೀನು ಟೈಪಿಂಗ್ ಕೆಲಸ ಬಿಟ್ಬಿಡು ಅಂದ್ರೆ ಬಿಡ್ತೀಯಾ?"

"ಖಂಡಿತಾ ಇಲ್ಲ"

"ಯಾಕೆ ಹೇಳು? ಅದರಲ್ಲಿ ನಿನ್ನ ಕೈ ಚಳಕ ಚೆನ್ನಾಗಿದೆ. ಜೀವನಕ್ಕೆ ಮಾರ್ಗ ತೋರ್ಸಿದೆ. ಹಾಗೇ ಈ ತಿಂಡಿ ಮಾಡೋದ್ರಲ್ಲಿ ನಾನು ನಿಪುಣೆ. ಅದ್ರಿಂದ ಮಾಡಿದ ಸಂಪಾದನೇಲೇ ನೀವೆಲ್ಲಾ ಬೆಳೆದು ದೊಡ್ಡವರಾದ್ರಿ. ಆದರೆ ನನ್ನ ಜವಾಬ್ದಾರಿ ಇನ್ನೂ ತೀರಿಲ್ಲಾ. ಅದೂ ಅಲ್ದೆ ನಾನು ಈ ಕೆಲಸ ಬಿಡ್ತೀನಂದ್ರೂ ಜನ ನನ್ನನ್ನು ಸುಮ್ನಿರೋಕೆ ಬಿಡಲ್ಲ. ಹಾಗಿದೆ ನಾನು ಮಾಡೋ ತಿಂಡಿಗಳಿಗೆ ಡಿಮ್ಯಾಂಡು" ಎಂದರು ಪಾತಮ್ಮ ಹೆಮ್ಮೆಯಿಂದ.

"ನಿನ್ನ ಮಾತು ನಿಜ ಕಣಮ್ಮ" ಎಂದ ಮಂಜುನಾಥ ತಗ್ಗಿದ ದನಿಯಲ್ಲಿ.

* * * *

ಹಬ್ಬದ ಹಿಂದಿನ ದಿನವೇ ಹೇಳಿ ಕಳಿಸಿ, ವಿಶಾಲಾಕ್ಷಮ್ಮ ಒಂದೂವರೆ ಸೇರು ತೊಗರಿ ಬೇಳೆ, ಬೆಲ್ಲ, ಏಲಕ್ಕಿ, ತೆಂಗಿನಕಾಯಿ, ಸ್ವಲ್ಪ ಎಣ್ಣೆ ಕೊಟ್ಟು, "ಇದರಲ್ಲಿ ಒಬ್ಬಟ್ಟು ಮಾಡಿ. ನಿಮ್ಮ ಮಕ್ಕಳಿಗಾಗಿ ಒಂದೈದು ಒಬ್ಬಟ್ಟು ತೆಗೆದಿಟ್ಟುಕೊಳ್ಳಿ. ಉಳಿದದ್ದನ್ನು ಸರಳಾ ಕೈಲಿ ಕಳುಹಿಸಿ" ಎಂದು ಹೇಳಿದ್ದರು. ಪ್ರತಿ ಹಬ್ಬದಲ್ಲೂ ಅವರು ಹೀಗೆಯೇ. ಅವರ ಔದಾರ್ಯದ ಮುಂದೆ ತಾನು ಚಿಕ್ಕವಳಾಗಿ ಬಿಡುತ್ತೇನೆ ಎಂದುಕೊಂಡೇ ಬೇಳೆಗೆ ಎಸರು ಇಟ್ಟರು. ಅವರು ಕೊಟ್ಟ ಬೇಳೆಯ ಜೊತೆಗೆ ಮತ್ತೊಂದು ಪಾವು ಸೇರಿಸಿದರು ತಮ್ಮ ಮನೆಗಾಗಿ. ಈ ಪ್ರಾಮಾಣಿಕತೆಯೇ ಅವರಿಗೆ ಒಳ್ಳೆಯ



## ಅತ್ಯಂತ ಕಿರಿಯ ಛಾಯಾಗ್ರಾಹಕಿ

*ಭೋಪಾಲದ ಶ್ರಾಸ್ತಿ ಜೈನ್ ಆರು ವರ್ಷದ ಬಾಲಕಿ. ಆದರೆ ಭಾರತದ ಅತ್ಯಂತ ಕಿರಿಯ ಆದರೆ, ನುರಿತ ವಿಖ್ಯಾತ ಛಾಯಾಗ್ರಾಹಕರಿಗಿಂತಲೂ ಹೆಚ್ಚು ಭಾವಚಿತ್ರಗಳನ್ನು ಸೆರೆಹಿಡಿದ ಛಾಯಾಗ್ರಾಹಕಿ. ಇದುವರೆಗೂ ಆಕೆ 3,500ಕ್ಕೂ ಹೆಚ್ಚು ಭಾವಚಿತ್ರಗಳನ್ನು ತೆಗೆದಿದ್ದಾಳೆ. ಅವುಗಳಲ್ಲಿ ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಆಕೆ ಎರಡು ರಾಷ್ಟ್ರೀಯ ಛಾಯಾಚಿತ್ರ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾಳೆ. ಈಕೆಯ ಸಾಧನೆಗೆ ಮಧ್ಯಪ್ರದೇಶ ಸರಕಾರ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.*

*ರಾಜೀವ ಗಾಂಧಿ, ಚಂದ್ರಶೇಖರ್, ಎಲ್.ಕೆ. ಅದ್ವಾನಿ, ಮಧು ದಂಡವತೆ, ನಜ್ಮಾ ಹೆಪ್ತುಲ್ಲಾ, ವಿವಿಯನ್ ರಿಚರ್ಡ್ ಹೀಗೆ ಇನ್ನೂ ಹಲವಾರು ವಿ.ಐ.ಪಿ.ಗಳ ಭಾವಚಿತ್ರಗಳನ್ನು ಈಕೆ ತನ್ನ ಕ್ಯಾಮರಾ ಮೂಲಕ ಸೆರೆಹಿಡಿದಿದ್ದಾಳೆ.*

ಹೆಸರು ಬರಲು ಕಾರಣ ಎಂದರೂ ತಪ್ಪಿಲ್ಲ.

ಹೊರಗಡೆ ಪಟಾಕಿಯ ಪಟ ಪಟ ಸದ್ದು ಸಂತಸದ ದೀಪಾವಳಿಯನ್ನು ಸಾರುತ್ತಿತ್ತು. ಆದರೆ ದೀಪಾವಳಿ ತನ್ನ ಮಟ್ಟಿಗೆ ಮಾತ್ರ ಹರ್ಷ ತರುವ ಹಬ್ಬವಲ್ಲ. ಬದಲಿಗೆ ನೋವಿನ ನೆನಪಾಗಿ ಕಾಡುತ್ತದೆ ಎಂದುಕೊಂಡರು ಪಾತಮ್ಮ ದೀಪಾವಳಿಗೆ ಎರಡು ದಿನ ಮುಂಚಿತವಾಗಿ ಅಲ್ಲವೇ. ಹತ್ತು ವರ್ಷದ ಹಿಂದೆ ಅವರು ಇಲ್ಲವಾದದ್ದು! ಏನಾಯಿತೋ? ಎಲ್ಲಿ ಹೋದರೋ? ಇದ್ದಾರೋ, ಇಲ್ಲವೋ? ಒಂದೂ ತಿಳಿಯದು. ತನ್ನ ಮನಸ್ಸಿಗೇನೋ ಭ್ರಮೆ. ಅವರಿನ್ನೂ ಎಲ್ಲೋ ಬದುಕಿದ್ದಾರೆ. ಎಂದು, ಹುಂ, ಬದುಕಿದ್ದರೆ ಬರುತ್ತಿರಲಿಲ್ಲವೇ ಎಂದು ಮತ್ತೊಂದು ಮನಸ್ಸು. ಈ ಯೋಚನೆಯಲ್ಲಿಯೇ ಒಬ್ಬಟ್ಟಿನ ಹೂರಣ ಮಾಡಿದರು. ಬೇಳೆ ಒಬ್ಬಟ್ಟೆಂದರೆ ಅವರಿಗೆ ಪಂಚಪ್ರಾಣ, ಎಂದುಕೊಂಡಾಗ ಕಣ್ಣಲ್ಲಿ ನೀರಾಡಿತು.

* * * *

ತಲೆಗೆ ಅಭ್ಯಂಜನ ಸ್ನಾನ ಮಾಡಿ, ಕೂದಲು ಒಣಗಿಸಿಕೊಳ್ಳುತ್ತಾ ಮುಂಬಾಗಿಲಲ್ಲಿ ನಿಂತಿದ್ದ ಸರಳಾ, ತಾಯಿಯನ್ನು ಕೇಳಿಕೊಂಡು ಬಂದ ಅಪರಿಚಿತ ವ್ಯಕ್ತಿಯನ್ನು ಕಂಡು ಒಳಗೋಡಿ ಬಂದಳು. ಬಂದು,

"ಬಾಮ್ಮ ನಿನ್ನನ್ನು ಹುಡುಕಿಕೊಂಡು ಯಾರೋ ಬಂದಿದಾರೆ'' ಎಂದಳು.

ಪಾತಮ್ಮ ಯಾರೋ ತಿಂಡಿಗೆ ಆರ್ಡರ್ ಕೊಡಕ್ಕೆ ಬಂದವರೇ ಇರಬೇಕು ಎಂದುಕೊಳ್ಳುತ್ತಾ ಕೈ ತೊಳೆದುಕೊಂಡು ಹೊರಗೆ ಬಂದು ನೋಡಿದರು.

ನೋಡಿ ಅವಾಕ್ಕಾಗಿ ನಿಂತರು. ಕಣ್ಣು ಹೊಸಕಿಕೊಂಡು ಸರಿಯಾಗಿ ನೋಡಿದರು. ಸಂದೇಹವೇ ಇಲ್ಲ. ಆದರೆ ಇದು ಸಾಧ್ಯವೇ ತಾವು ನೋಡುತ್ತಿರುವುದು ಸತ್ಯವೇ? ನಂಬಲಸಾಧ್ಯ ಎನ್ನುವಂತೆ ಮೂಕ ವಿಸ್ಮಿತರಾಗಿ ಪಾತಮ್ಮ ಸುಮ್ಮನೆ ನಿಂತು ಬಿಟ್ಟರು.

"ಪಾತೂ, ಅದ್ಯಾಕೆ ಹಾಗೆ ನೋಡ್ತಾ ನಿಂತು ಬಿಟ್ಟೆ. ನಿನ್ನ ಗಂಡನ್ನ ಮರೆತು ಬಿಟ್ಯಾ?'' ವೆಂಕಪ್ಪಯ್ಯ ಹತ್ತಿರ ಬಂದು ಕೈ ಹಿಡಿದು ಮೃದುವಾಗಿ ಕೇಳಿದರು.

"ಸರಳಾ, ನಿಮ್ಮಪ್ಪ ಕಣೆ,'' ಎಂದರು ಪಾತಮ್ಮ ಕಣ್ಣಲ್ಲಿ ಹರಿಯುತ್ತಿದ್ದ ಆನಂದಾಶ್ರುವನ್ನು ಒರೆಸುವ ಗೋಜಿಗೆ ಹೋಗದೆ.

"ಒಳಗ್ಬನ್ನೀಂದ್ರೆ – ಕೂತ್ಕೊಳ್ಳಿ, ಅಯ್ಯೋ ಎಷ್ಟೊಂದು ಸೊರಗಿ ಹೋಗಿದೀರಾ'' ಎನ್ನುತ್ತಾ ಪಾತಮ್ಮ ಗಂಡನನ್ನು ಒಳಗೆ ಕರೆದೊಯ್ದರು.

ಒಳಗೆ ಬಂದು ಕುಳಿತ ವೆಂಕಪ್ಪಯ್ಯ ದೂರ ನಿಂತಿದ್ದ ಮಗಳನ್ನು ಕಂಡು, "ಬಾಮ್ಮ ಸರಳಾ'' ಎಂದು ಬಳಿಗೆ ಕರೆದು ಮಗಳನ್ನಪ್ಪಿ, "ನಾನು ಪಾಪಿ ಕಣಮ್ಮಾ– ನಿಮ್ಮನ್ನೆಲ್ಲಾ ಅನಾಥರನ್ನಾಗಿ ಮಾಡಿ ಬಿಟ್ಟಿದ್ದೆ'' ಎಂದು ಕಣ್ಣೀರು ಸುರಿಸಿದರು.

"ಹೋಗಮ್ಮಾ ಸರಳಾ, ಕುಂಕುಮ ತೆಗೆದುಕೊಂಡು ಬಾ. ನಿನ್ನಮ್ಮನ ಹಣೆಗೆ ಇಡ್ತೀನಿ'' ಎಂದರು.

ಗಂಡನಾದವನು ಬದುಕಿದ್ದು, ಹೆಂಡತಿ ವೈಧವ್ಯದ ನೋವನ್ನು ಅನುಭವಿಸಬೇಕೆಂದರೆ ಅದು ವಿಧಿಯ ವಿಪರ್ಯಾಸವಲ್ಲದೆ ಮತ್ತೇನು ಎಂದುಕೊಂಡರು ವೆಂಕಪ್ಪಯ್ಯ. ಒಂಟಿಯಾಗಿ ಮೂರು ಮಕ್ಕಳನ್ನು ಸಾಕಬೇಕೆಂದರೆ ಹೆಂಡತಿ ಪಟ್ಟಿರಬಹುದಾದ ಕಷ್ಟ ಊಹಿಸಿಯೇ ಅವರ ಕಣ್ಣು ಹನಿಗೂಡಿತು. ಸೋಲೊಪ್ಪದೆ, ದಿಟ್ಟತನದಿಂದ ಜೀವನ ಎದುರಿಸಿದ ಆಕೆಯ ಮನೋಸ್ಥೈರ್ಯಕ್ಕೆ ಮನಸ್ಸು ಗೌರವದಿಂದ ಮಣಿಸಿತು.

"ಇರಿ. ಒಂದು ನಿಮಿಷ ಬಂದೆ'' ಎಂದು ಪಾತಮ್ಮ ಒಳಗೆ ಓಡಿ, ಡಬ್ಬಿಯಲ್ಲಿ ಮುಚ್ಚಿಟ್ಟಿದ್ದ ಮಾಂಗಲ್ಯಕ್ಕೆ ಅರಿಶಿನದ ದಾರ ಹಾಕಿ ಗಂಡನ ಕೈಲಿಟ್ಟರು. ಮಗಳು ತಂದಿಟ್ಟ ಕುಂಕುಮದ ಭರಣಿಯಿಂದ, ಹೆಂಡತಿಯ ಹಣೆಗೆ ಕುಂಕುಮವಿಟ್ಟು, ಮಾಂಗಲ್ಯ ಕಟ್ಟಿದಾಗ, ಪಾತಮ್ಮನ ಕಣ್ಣಿಂದ ಒಂದೇ ಸಮನೆ ಆನಂದಾಶ್ರು ಸುರಿಯಿತು. ಸರಳಾ ಅತ್ಯಂತ ಸಂಭ್ರಮದಿಂದ ಚಪ್ಪಾಳೆ ತಟ್ಟಿ, "ಅಪ್ಪ, ಅಮ್ಮಂಗೆ ಮತ್ತೆ ಮದುವೆ'' ಎಂದು ಕೂಗಿದಳು.

ಹೆಂಡತಿಯ ಕಣ್ಣೀರು ಒರೆಸಿದ ವೆಂಕಪ್ಪಯ್ಯ, "ಅಳ್ಬೇಡ ಪಾತೂ, ಇದು ಸಂತೋಷ ಪಡಬೇಕಾದ ಸಮಯ'' ಎಂದರು.

ಪಟಾಕಿ ತರಲು ಹೋಗಿದ್ದ ಮಂಜುನಾಥ, ಶ್ರೀನಾಥ ಮನೆಗೆ ಬಂದಾಗ ಅವರಿಗೆ ಭಾರೀ ಆಶ್ಚರ್ಯ. ಮಂಜುನಾಥ ತಟ್ಟನೆ ತಂದೆಯನ್ನು ಗುರುತಿಸಿದ. ಆದರೆ ಶ್ರೀನಾಥನಿಗೆ ತಂದೆಯ ನೆನಪು ಮಸುಕು ಮಸುಕಾಗಿತ್ತು. ಇಬ್ಬರೂ ತಂದೆಯನ್ನು ಕಂಡು ಸಂಭ್ರಮ ಪಟ್ಟರು. ತಮ್ಮೆತ್ತರಕ್ಕೆ ಬೆಳೆದು ನಿಂತ ಮಕ್ಕಳನ್ನು ನೋಡಿ ವೆಂಕಪ್ಪಯ್ಯನನಿಗೂ ಸಂತಸ.

ಹಬ್ಬದ ದಿನ ಊಟ ಮಾಡುತ್ತಾ ವೆಂಕಪ್ಪಯ್ಯ ತಮ್ಮ ಕತೆ ಹೇಳಿದರು. ಅಂದು ಊರಿಗೆ ಹೊರಟಾಗ ಬಸ್ಸು ಕಂದಕಕ್ಕೆ ಬಿತ್ತು. ಆಗ ತಮ್ಮ ತಲೆಗೆ ಏಟು ಬಿದ್ದು ತುಸು ಹೊತ್ತು ಜ್ಞಾನ ತಪ್ಪಿರಬೇಕು. ಎದ್ದಾಗ ತಾನು ಯಾರು, ಎಲ್ಲಿದ್ದೇನೆಂದು ಅರಿವಾಗದೆ ಎಲ್ಲೆಲ್ಲೋ ಅಲೆದಾಡಿ, ಹುಬ್ಬಳ್ಳಿ ಸೇರಿ ಅಲ್ಲಿ ಯಾವುದೋ ಸಣ್ಣ ಕೆಲಸದಿಂದ ಹೊಟ್ಟೆ ಹೊರೆಯುತ್ತಿದ್ದರು. ಕೆಲವೇ ದಿನಗಳ ಹಿಂದೆ, ಮಹಡಿ ಏರುತ್ತಿದ್ದಾಗ, ಇದ್ದಕ್ಕಿದ್ದಂತೆ ಕಾಲು ಜಾರಿ ಬಿದ್ದು, ಆಸ್ಪತ್ರೆ ಸೇರಿ, ಜ್ಞಾನ ಬಂದಾಗ ಸ್ವಲ್ಪ ಸ್ವಲ್ಪವಾಗಿ ಎಲ್ಲವೂ ನೆನಪಿಗೆ ಬಂತು. ತಕ್ಷಣವೇ ತಾವು ಹೆಂಡತಿ ಮಕ್ಕಳನ್ನು ಅರಸಿ ಬಂದಿದ್ದು ಎಂದು ಹೇಳಿದರು.

ಪಾತಮ್ಮ ಸಹ ತಮ್ಮ ಕಥೆ ಹೇಳಿಕೊಂಡರು.

"ದೀಪಾವಳಿ ಬಂದರೆ ಸಾಕು, ನನ್ನ ಮನಸ್ಸು ದುಃಖದಲ್ಲಿ ಮುಳುಗಿ ಹೋಗ್ತಿತ್ತು. ಆದರೆ ದೀಪಾವಳಿಯೇ ಮತ್ತೆ ನನ್ನ ಸೌಭಾಗ್ಯವನ್ನು ಮರಳಿ ತಂದಿದೆ. ಆ ದೇವರು ದೊಡ್ಡವನು. ಕೊನೆಗೂ ನನ್ನ ಪ್ರಾರ್ಥನೆ ಕೇಳಿದ'' ಎಂದರು.

"ಪಾತೂ, ನೀನು ಧೈರ್ಯಸ್ಥೆ ಕಣೆ. ಕಷ್ಟಪಟ್ಟು ಮಕ್ಕಳನ್ನು ಸಾಕಿ ನೆಲೆಗೆ ತಂದಿದೀಯ, ನೀನು ನನ್ನ ಪಾಲಿನ ಭಾಗ್ಯಲಕ್ಷ್ಮಿ'' ಎಂದು ವೆಂಕಪ್ಪಯ್ಯ ಹೆಮ್ಮೆಯಿಂದ ನುಡಿದರು. ಪಾತಮ್ಮನ ಕಣ್ಣಲ್ಲಿ ಧನ್ಯತೆಯ ಭಾವ ತುಂಬಿತ್ತು. ಸಾರ್ಥಕತೆಯ ಭಾವದಿಂದ ಹೃದಯ ತುಂಬಿ ಬಂದಿತ್ತು.

## ಆಸೆ, ಅಸ್ಥಿ ಮತ್ತು ಅಸ್ತಿತ್ವ

ಎಲ್ಲಿ ನೋಡಿದರೂ
'ಸ್ವಾರ್ಥ'ದ ಬಾಗಿಲಲ್ಲಿ
'ರಕ್ತದ ಸಾರಣೆ'ಯ ಮೇಲೆ
ಹಕ್ಕಿದ ರಾಶಿ ಎಲುಬುಗಳ ರಂಗವಲ್ಲಿ
ಬಯಸುವ, ರಕ್ಕಸ
ಹೊಡಿ ಬಡಿದಾಟ, ವಾಗ್ಯುದ್ಧಗಳ
ವೃತ್ತಿ, ಪ್ರವೃತ್ತಿ
ದಿನ ಬೆಳಗಾದರೆ ನೂರಾರು ಕೊಲೆ
ಅಯ್ಯೋ, ರಕ್ತದಾಹದ ಮತ್ತೆ
ದೇಹದ ತೀಟೆ ತೀರಿಸುವುದಕ್ಕಾಗಿ,
ಕಂಡವರ ಆಸ್ತಿ ಅಸ್ಥಿಗಳ ತಿಂದು
ತೇಗುವುದಕ್ಕಾಗಿ ಕೆಲವು, ಹಲವು
ಸ್ವ ಅಸ್ಥಿ ಅಂತಸ್ತುಗಳ ರಕ್ಷಣೆಗಾಗಿ
'ದೇಹ'ಗಳಾಗಿ ಜೀವ ಬಿಟ್ಟು
ಮಲಗುತಿವೆ ಹೆಜ್ಜೆ ಹೆಜ್ಜೆಗೂ
ಜೀವಂತಿಕೆಯ ಭಾವಗಳು.

ಇಷ್ಟೊಂದು ಅನಿವಾರ್ಯವೆ
ಮಿಡಿವ ಮನವ ಬಗೆವ ಕ್ರೌರ್ಯ?
ಏಕೆ? ಹೇಗೆ?
ಮುಗ್ಗರಿಸಿ ಬೀಳುವ
ಪ್ರಜ್ಞೆ ನೀಗಿ
ನುಗ್ಗುತಿದೆ ಜಗವೆಲ್ಲಿಗೆ?
ಅಳುವ ಕಣ್ಣೊರೆಸಿ, ನಕ್ಕು ನಗಿಸುವ
ಮಾನವೀಯತೆಯ ಉಸಿರಾಟ
ಮರೆತರೆ, ಮುಂದೊಂದು ದಿನ
ಮನುಸಂತತಿಯ ಗರ್ಭದಲಿ
ಹೊತ್ತ ತಪ್ಪಿಗೆ ಭೂಮಾತೆ
ನೊಂದು ಬಲಿಷ್ಠ ಕಾಲಚಕ್ರದಡಿ
ಮಲಗಿ ಬಲಿಯಾದಾಳು
ಜೋಕೆ!
ಕಳೆದುಕೊಂಡೇವು ನಾವೆಲ್ಲ
ನಮ್ಮ ಅಸ್ತಿತ್ವ!

**ಶ್ರೀಮತಿ ಗೀತಾ ಸದ್ಯೋಜಾತ.**



"ಅಕ್ಕನ ರೂಮಿನಲ್ಲಿ ಪಟಾಕಿ ಬಚ್ಚಿಡುವುದು ಬೇಡಾ ಅಂದ್ರೂ ನೀನು ಕೇಳಲಿಲ್ಲ. ಈಗ ನೋಡು ಭಾವ ಬಂದಾಗ್ಲಿಂದ ಅಕ್ಕ ರೂಮಿನ ಬಾಗ್ಲೇ ತೆಗೆದಿಲ್ಲ.''



# ನವ ದಂಪತಿಗಳು

ಚಿ। ಸೌ। ಕೆ. ಸುಧಾ ಮತ್ತು
ಚಿ। ಎನ್.ಡಿ. ಪ್ರಸಾದ್ ಅವರ ವಿವಾಹವು
ದಿ.1–11–1991ರಂದು ಭದ್ರಾವತಿಯ ಮಂಜುನಾಥಸ್ವಾಮಿ
ಕಲ್ಯಾಣ ಮಂಟಪದಲ್ಲಿ ವಿಜೃಂಭಣೆಯಿಂದ ನೆರವೇರಿತು.
ವಧುವಿನ ತಾಯಿ : ವಿ.ಬಿ. ಸುಶೀಲಬಾಯಿ
ವಧುವಿನ ತಂದೆ : ಎಂ.ಎಸ್. ಕೃಷ್ಣಮೂರ್ತಿ
ವರನ ತಾಯಿ : ಅನಸೂಯಮ್ಮ ವರನ ತಂದೆ : ಎನ್.ಸಿ. ನಾಗಪ್ಪ



ಚಿ। ಸೌ। ಸಂಧ್ಯಾರಾಣಿ ಹಾಗೂ ಚಿ। ಕಿಶೋರ್‌ಕುಮಾರ್ ಅವರ ವಿವಾಹವು ಪ್ರಜೋತ್ಪತ್ತಿ ಸಂವತ್ಸರದ ಸಪ್ತಮಿ ದಿ. 28–11–1991ರಂದು ಬೆಂಗಳೂರಿನ ಬನ್ನೇರುಘಟ್ಟದಲ್ಲಿರುವ ಶ್ರೀ ಶಾರದಾ ಕಲ್ಯಾಣಮಂಟಪದಲ್ಲಿ ವಿಜೃಂಭಣೆಯಿಂದ ನಡೆಯಿತು.
ವಧುವಿನ ತಾಯಿ : ಶ್ರೀಮತಿ ಜಯಲಕ್ಷ್ಮಿ ವರನ ತಾಯಿ : ಶ್ರೀಮತಿ ಸರೋಜಮ್ಮ
ವಧುವಿನ ತಂದೆ : ಸೋಮಶೇಖರ ರೆಡ್ಡಿ ವರನ ತಂದೆ : ಶ್ರೀ ಎ. ರಾಮಯ್ಯ ರೆಡ್ಡಿ



ಚಿ। ಸೌ। ಕವಿತಾ ಮತ್ತು ಚಿ। ಅನಿಲ್ ಇವರ ವಿವಾಹವು ದಿ.24–11–1991ರಂದು ಮುಂಬಯಿಯ ನ್ಯಾಷನಲ್ ಸೊಸೈಟಿಯ ಹೈಸ್ಕೂಲ್ ಮತ್ತು ಜ್ಯೂನಿಯರ್ ಕಾಲೇಜ್ ಹಾಲ್‌ನಲ್ಲಿ ವಿಜೃಂಭಣೆಯಿಂದ ನಡೆಯಿತು.
ವಧುವಿನ ತಾಯಿ : ಶ್ರೀಮತಿ ಯಶೋದಾ ಜಿ. ಕೋಟ್ಯಾನ್
ವಧುವಿನ ತಂದೆ : ಶ್ರೀ ಗುರುವ ಎಸ್. ಕೋಟ್ಯಾನ್
ವರನ ತಾಯಿ : ದಿ। ಶ್ರೀಮತಿ ರತಿ ಐ. ಪೂಜಾರಿ
ವರನ ತಂದೆ : ಶ್ರೀ ಐತ ಪೂಜಾರಿ



ಚಿ। ಸೌ। ಪೂರ್ಣಿಮ ಮತ್ತು ಚಿ। ಪಿ.ಎಸ್. ಸುರೇಶ್ ಅವರ ವಿವಾಹವು 18–11–1991ರಂದು ಪ್ರಜೋತ್ಪತ್ತಿ ನಾಮ ಸಂವತ್ಸರದ ಕಾರ್ತಿಕ ದ್ವಾದಶಿ [illegible] ಸುಬ್ರಹ್ಮಣ್ಯ ಕಲ್ಯಾಣ ನಿಲಯದಲ್ಲಿ ವೈಭವದಿಂದ ನೆರವೇರಿತು.
ವಧುವಿನ ತಾಯಿ : ಶಕುಂತಲ ವರನ ತಾಯಿ : ರವಮಾಮಣಿ
ವಧುವಿನ ತಂದೆ : ಕೆ.ಎನ್. ಸೂರ್ಯನಾರಾಯಣ ರಾವ್ ವರನ ತಂದೆ : ಪಿ.ಸಿ. [illegible]ಮೂರ್ತಿ



ಚಿ। ಸೌ। ಉಷಾ ಮತ್ತು ಚಿ। ಚಂದ್ರಶೇಖರ್ ಅವರ ವಿವಾಹವು ಪ್ರಜೋತ್ಪತ್ತಿ ಸಂವತ್ಸರದ ಕಾರ್ತಿಕ ಬಹುಳ ಚತುರ್ಥಿ 25–11–91ರಂದು ವಧುವಿನ ಸ್ವಗೃಹದಲ್ಲಿ [illegible]
ವಧುವಿನ ತಾಯಿ : [illegible]
ತಂದೆ : ದಿ। [illegible]
[illegible] ವರನ ತಂದೆ : ದಿ। [illegible]





# ಬಹುಮುಖ ಪ್ರತಿಭೆಯ ಸಮಾಜ ಸೇವಾಕರ್ತೆ

# ಶ್ರೀಮತಿ ಡಾ॥ ಪಿ.ವಿ.ರತ್ನ ಅರಸ್

ಸಿ ಸತ್ಯಾನಂದ

ಡಾ। ಶ್ರೀಮತಿ ಪಿ.ವಿ. ರತ್ನ ಅರಸ್‌ರವರು ಮೈಸೂರಿನವರು. 57 ವರ್ಷದ ರತ್ನ ಅರಸ್ ಉತ್ಸಾಹಿ, ಧೀಮಂತ ನಾಯಕಿ, ನಾನಾ ರಂಗಗಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವ ಒಬ್ಬ ಆದರ್ಶ ಮಹಿಳೆ.

ಇವರು ತಮ್ಮ ಬಾಲ್ಯ, ವಿದ್ಯಾಭ್ಯಾಸವನ್ನು ಶ್ರೀ ವಾಣಿವಿಲಾಸ ಅರಸು ಬಾಲಕಿಯರ ಶಾಲೆಯಲ್ಲಿ ಮುಗಿಸಿ, ಮಹಾರಾಣಿ ಪ್ರೌಢಶಾಲೆಯಲ್ಲಿ ಓದಿ ಉತ್ತೀರ್ಣರಾಗಿ ಮೈಸೂರು ಮಹಾರಾಣಿ ಕಾಲೇಜಿನಲ್ಲಿ ನಾಲ್ಕು ವರ್ಷಗಳ ವ್ಯಾಸಂಗ ಮಾಡಿ 1955ರಲ್ಲಿ ಬಿ.ಎ. ಪದವೀಧರೆಯಾದರು. ಒಂದನೇ ತರಗತಿಯಿಂದ ಹಿಡಿದು ಪದವಿ ಪರೀಕ್ಷೆ ಮುಗಿಯುವವರೆಗೂ ಪ್ರತಿಯೊಂದು ತರಗತಿಯಲ್ಲಿ ಮೂರು ನಾಲ್ಕು ಬಹುಮಾನಗಳನ್ನು ಆಟ ಹಾಗೂ ಪಾಠದ ಪರೀಕ್ಷೆಗಳಲಿ ಪಡೆದಿದ್ದಾರೆ. ಇವರು ಆಗಿನ ಕಾಲದ ಕ್ರೀಡಾಪಟು ವಾಗಿದ್ದರು. (ಕೇರಂ, ಡಿಸ್ಕಸ್ ಎಸೆಯುವುದು, ಬ್ಯಾಡ್‌ಮಿಂಟನ್, ತ್ರೋಬಾಲ್ ಇತ್ಯಾದಿ ಆಟಗಳು ಇವರ ಅಚ್ಚುಮೆಚ್ಚಿನವು.) 1954ರಲ್ಲಿ ಇವರಿಗೆ ಕೇಂದ್ರ ಸರ್ಕಾರದಿಂದ ಮೆರಿಟ್ ವಿದ್ಯಾರ್ಥಿ ವೇತನವು ಲಭಿಸಿತು.

1954ರಲ್ಲಿ ಶ್ರೀ ಕೆ. ಮಲ್ಲರಾಜೇ ಅರಸ್‌ರವರನ್ನು ಮದುವೆಯಾದರು. ಆಗ ಅವರು ರೇಷ್ಮೆ ಇಲಾಖೆಯ ಇನ್ಸ್‌ಪೆಕ್ಟರ್ ಆಗಿದ್ದರು. 5–6 ವರ್ಷಗಳ ದಾಂಪತ್ಯ ಜೀವನದಲ್ಲಿ ನೊಂದು ಬೆಂದು ಮಕ್ಕಳಿಗೆ ಸರಿಯಾಗಿ ಔಷಧೋಪಚಾರ ದೊರಕದೆ ಇದ್ದುದರಿಂದ ಬೇಸತ್ತು ಮನೆಯ ಹಿರಿಯರೊಡನೆ ವಾದ ಮಾಡಿ ಕಡೆಗೆ ಹೋಮಿಯೋಪತಿ (ಅಂಚೆ ಶಿಕ್ಷಣ) ಪರೀಕ್ಷೆಯಲ್ಲಿ ಓದಿ ಬರೆದು ಉತ್ತೀರ್ಣರಾದರು ಹಾಗೂ ಕುಂಭ



ಮೈಸೂರು ಅರಸು ಮಂಡಲದ ಸಂಘದವರಿಂದ ಸನ್ಮಾನ

ಕೋಣಂಗೆ ಹೋಗಿ ಪ್ರಾಕ್ಟಿಕಲ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ವೈದ್ಯವೃತ್ತಿ ಯನ್ನು ಮನೆಯಲ್ಲಿಯೇ ಆರಂಭಿಸಿದರು. ಇದು ಅವರ ಜೀವಮಾನದ ಮೊದಲನೆಯ ತಿರುವು ಎಂದರೆ ತಪ್ಪಾಗಲಾರದು. ಮಾಗಡಿಯಿಂದ ಶುರುವಾಗಿ ಚಿಂತಾಮಣಿ, ಮೂಗೂರು, ಕುದೇರು, ಚಿಕ್ಕಬಳ್ಳಾಪುರ, ಹೆಬ್ಬೂರು, ಆದಿಯಾಗಿ ಅವರ ಯಜಮಾನರು ಇರುವೆಡೆ ತಾವು ಇದ್ದು ಬಡ ಜನರ ಏಳಿಗೆಗಾಗಿ "ಅಮ್ಮಾಯ್ರವರು ನೀರು ಕೊಟ್ಟರೂ ಅಮೃತ" ಹಾಗೂ ಸರ್ಕಾರಿ ಆಸ್ಪತ್ರೆಯ ಟೋಪಿ ಗುಳಿಗೆಗಳಿಗಿಂತ ಅಮ್ಮಾಯ್ರವರು ಕೊಡುವ ಸಕ್ಕರೆಯ ಸಾಸಿವೆಯಂತಹ ಗುಳಿಗೆಯೇ ಮೇಲು'' ಎನ್ನುವ ಭಾವನೆ ಜನಗಳಲ್ಲಿ ಮೂಡಿತು. ಗೃಹಿಣಿಯಾಗಿ ಬೆಳಿಗೆ 7 ಗಂಟೆಗೆ ಮನೆ ಕೆಲಸ ಮುಗಿಸಿ ಬಂದು ರೋಗಿಗಳಿಗೆ ಚಿಕಿತ್ಸೆ ಪ್ರಾರಂಭಿಸಿದರೆ ಸಂಜೆ 7ರವರೆಗೂ ಬೇಸರಿಸದೆ ಬಡ



1990ರಲ್ಲಿ ರಾಜೀವಗಾಂಧಿ ಮೈಸೂರಿಗೆ ಬಂದಾಗ, ಅವರ ಜೊತೆ ಶ್ರೀಮತಿ ಪಿ.ವಿ.ರತ್ನಾ

ಕೂಲಿಕಾರರೇ ಆದಿಯಾಗಿ ಎಲ್ಲರಿಗೂ ತಾಳ್ಮೆಯಿಂದ ಚಿಕಿತ್ಸೆ ನೀಡುತ್ತಿದ್ದರು. ಅವರ ಮೃದು ನುಡಿ ಹಾಗೂ ಸೌಜನ್ಯದ ನಡವಳಿಕೆಗಳೇ ಜನರಿಗೆ ಅರ್ಧ ಔಷಧಿ ಯಂತಿತ್ತು ಹಾಗೂ ಹಸ್ತ ಗುಣವೂ ಕೂಡ.

ಶ್ರೀಮತಿ ಅರಸುರ ಜೀವನದಲ್ಲಿ ಎರಡನೇ ಮುಖ್ಯ ಘಟನೆಯೆಂದರೆ, ಈಗ್ಗೆ ಸುಮಾರು 18 ವರ್ಷಗಳ ಹಿಂದೆ ದಿವಂಗತ ಮಾಜಿ ಮುಖ್ಯಮಂತ್ರಿ ಶ್ರೀ ದೇವರಾಜ ಅರಸ್‌ರವರು ಇವರಿಗೆ ರಾಜಕೀಯ ಪ್ರವೇಶಕ್ಕೆ ನಾಂದಿ ಹಾಡಿದರು. ಹಾಗೂ ಮೈಸೂರಿನಲ್ಲಿನ ಶ್ರೀಮತಿ ಸೌಂದರ್ಯಮ್ಮ ವೆಂಕಟೇಶ್ ಮಾಜಿ ಪುರ ಸಭಾಧ್ಯಕ್ಷೆ ಮತ್ತು ಶ್ರೀ ಜಯದೇವರಾಜ ಅರಸ್, ಎಂ.ಎಲ್.ಎ.ರವರು ಶ್ರೀಮತಿ ರತ್ನಾ ಅರಸ್‌ರವರನ್ನು ಕಾಂಗ್ರೆಸ್ಸಿನ ಸಕ್ರಿಯ ಕಾರ್ಯಕರ್ತರನ್ನಾಗಿ ಮಾಡಿದರು. ಶ್ರೀಮತಿ ಸೌಂದರ್ಯಮ್ಮ ವೆಂಕಟೇಶ್‌ರವರು ಶ್ರೀಮತಿ ರತ್ನ ಅರಸ್‌ರವರ ಪ್ರತಿಭೆಯನ್ನು ನೋಡಿ ಮೈಸೂರು ನಗರದ ಮಹಿಳಾ ವಿಭಾಗದ ಕಾಂಗ್ರೆಸ್ ಅಧ್ಯಕ್ಷರಾಗಿ ಮಾಡಿದರು. ಹಾಗೂ ಶ್ರೀ ಜಯದೇವರಾಜ ಅರಸ್ ರವರು ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿನ ಉಪ ಸಮಿತಿಯ ಕಾರ್ಯದರ್ಶಿನಿಯಾಗಿ ಕೆಲಸ ಮಾಡಲು ಅವಕಾಶ ಕೊಟ್ಟರು. ಅಂದು ಪ್ರಾರಂಭ ವಾದದ್ದು ಇಲ್ಲಿಯವರೆವಿಗೂ ಅವರು ಉಪಾಧ್ಯಕ್ಷಿಣಿ ಯಾಗಿ ಮತ್ತು ಸದಸ್ಯೆಯಾಗಿ, ದಸರಾ ವಸ್ತು ಪ್ರದ ರ್ಶನದಲ್ಲಿ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

8 ವರ್ಷಗಳ ನಂತರ ಶ್ರೀಮತಿ ರತ್ನ ಅರಸ್‌ರವರನ್ನು ಮೈಸೂರು ಗ್ರಾಮಾಂತರ ಜಿಲ್ಲಾ ಮಹಿಳಾ ಕಾಂಗ್ರೆಸ್ ಅಧ್ಯಕ್ಷಿಣಿಯಾಗಿ ನಾಮಕರಣ ಮಾಡಿದರು. ಇದು ವರೆಗೂ ಅವರು ಕೆಲಸ ಮಾಡಿ ಪಕ್ಷಕ್ಕಾಗಿ ತಮ್ಮ ನಿಷ್ಠೆಯನ್ನು ವ್ಯಕ್ತ ಪಡಿಸಿದ್ದಾರೆ.

1978ರಿಂದ 1980ರವರೆವಿಗೆ ಕರ್ನಾಟಕ ರಾಜ್ಯ ಮಟ್ಟದ ಆಯ್ಕೆ ಸಮಿತಿಯಲ್ಲಿ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ) ಸದಸ್ಯೆಯಾಗಿ ಸತತ ವಾಗಿ ನಿಷ್ಪಕ್ಷಪಾತವಾಗಿ ಹಾಗೂ ಪ್ರತಿಫಲಾಪೇಕ್ಷೆ ಯಿಲ್ಲದೆ ಕೆಲಸ ಮಾಡಿದ್ದಾರೆ. ಅದೇ ಸಮಯದಲ್ಲಿ ಮೈಸೂರಿನ ಸರ್ಕಾರಿ ಸಾಂಕ್ರಾಮಿಕ ರೋಗಗಳ ಆಸ್ಪ ತ್ರೆಯ ಸಂದರ್ಶಕರ ಸಮಿತಿಯ ಸದಸ್ಯೆಯಾಗಿ ಆಸ್ಪತ್ರೆಯಲ್ಲಿ ಕೆಲವು ನ್ಯೂನತೆಗಳನ್ನು ಸರಿಪಡಿಸಿ ಮಾಡಿ ತೋರಿಸಿದ್ದಾರೆ.

ಶ್ರೀಮಾನ್ ಜಯದೇವರಾಜ ಅರಸ್‌ರವರು ಹೇಳುತ್ತಿದ್ದಂತೆ, "ನಿಸ್ವಾರ್ಥತೆಯಿಂದ, ನಿಷ್ಠೆಯಿಂದ ಕೆಲಸ ಮಾಡಿ. ಪದವಿ ತಾನೇ ತಾನಾಗಿ ಬರುತ್ತೆಯೆಂದು" ಅಂತೆಯೇ ಶ್ರೀಮತಿ ರತ್ನ ಅರಸ್‌ರವರನ್ನು ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಲಿಯ ಸದಸ್ಯರನ್ನಾಗಿ 1989ರಲ್ಲಿ ನಾಮಕರಣ ಮಾಡಿದರು. ಆ ಅವಧಿಯಲ್ಲಿ ಅವರು ಸರ್ಕಾರದ ಎಷ್ಟೋ ಕಾರ್ಯ ಗಳನ್ನು ಮೈಸೂರು ಜಿಲ್ಲೆಯಲ್ಲಿ ಕಾರ್ಯಗತ ಮಾಡಿದ್ದಾರೆ.

ಐದನೇಯ ಘಟನೆಯೆಂದರೆ 1990ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನ ವಜ್ರ ಮಹೋ ತ್ಸವದ ಸಂದರ್ಭದಲ್ಲಿ ಶ್ರೀಮತಿ ರತ್ನ ಅರಸ್‌ರವರನ್ನು ಕಾಲೇಜಿನ ಹಳೆಯ ಪ್ರತಿಭಾವಂತ ವಿದ್ಯಾರ್ಥಿನಿ ಹಾಗೂ ಅವರ ಅನೇಕ ಅತ್ಯುತ್ತಮ ಸೇವೆಯನ್ನು ಗುರುತಿಸಿ ಸನ್ಮಾನಿಸಿದುದು ಅವರ ಗೌರವಕ್ಕೆ ಮರುಗು ಕೊಟ್ಟಂತಾಗಿದೆ. ಇದಾದ ನಂತರ ಕೆಲವು ಸಂಘ ಸಂಸ್ಥೆಯವರು ಅವರನ್ನು ಸನ್ಮಾನಿಸಿ ತಮ್ಮ ಅಭಿ






ಸತಿಸಹಗಮನ ಪ್ರತಿಭಟನಾ ಮೆರವಣಿಗೆಯಲ್ಲಿ

1990ರಲ್ಲಿ ಮಹಾರಾಣಿ ಕಾಲೇಜಿನ ವಜ್ರಮಹೋತ್ಸವ ಸನ್ಮಾನ

ಮಾನವನ್ನು ವ್ಯಕ್ತಪಡಿಸಿದರು. ಇಷ್ಟೇ ಅಲ್ಲದೆ ಅವರ ದಕ್ಷತೆ ಮತ್ತು ಪ್ರಾಮಾಣಿಕತೆಯನ್ನು ಗುರುತಿಸಿ ಭಾರತದ ಕೇಂದ್ರ ಸರ್ಕಾರವು ಕಾವೇರಿ ಗ್ರಾಮೀಣ ಬ್ಯಾಂಕಿನ ನಿರ್ದೇಶಕರಾಗಿ ದಿನಾಂಕ 16–6–92ರಂದು ಅವರನ್ನು ನಾಮಕರಣ ಮಾಡಿದೆ. ಕಾವೇರಿ ಗ್ರಾಮೀಣ ಬ್ಯಾಂಕಿನ ಇತಿಹಾಸದಲ್ಲೇ ಇದುವರೆವಿಗೂ ಯಾವ ಮಹಿಳೆಯೂ ನಿರ್ದೇಶಕಿಯಾಗಿರಲಿಲ್ಲ. ಆ ಪ್ರಥಮ ಸ್ಥಾನವು ಇವರಿಗೆ ಲಭ್ಯವಾಗಿರುವುದು ಮಹಿಳೆಯರಿಗೆ ಹೆಮ್ಮೆಯ ವಿಷಯ.

ಇಷ್ಟಕ್ಕೆ ಸಾಲದೆಂಬಂತೆ ಅನಿರೀಕ್ಷಿತವಾಗಿ ದಿ. 17–6–92ರಲ್ಲಿ ಇವರನ್ನು ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ (ಕೇಂದ್ರ ಸಮಿತಿ) ಕಾರ್ಯಕಾರಿ ಸದಸ್ಯೆಯನ್ನಾಗಿ ನಾಮಕರಣ ಮಾಡಿದ್ದಾರೆ. ಈ ಎರಡೂ ಕ್ಷೇತ್ರಗಳಲ್ಲೂ ಇವರು ತಮ್ಮ ಕಾರ್ಯ ಸಾಧನೆಯನ್ನು ಅದರಲ್ಲೂ ಬಡವರಿಗೆ ಹೆಚ್ಚಾಗಿ ಸಹಾಯ ಮಾಡುತ್ತಾರೆಂದು ವಿಶ್ವಾಸವಿದೆ.

ಇವರ ಮತ್ತೊಂದು ಕ್ಷೇತ್ರವೆಂದರೆ, ಭಾರತ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ, ಮೈಸೂರು ಗ್ರಾಮಾಂತರ ಜಿಲ್ಲಾ ಗೈಡ್ಸ್ ಕಮೀಷನರ್ ಆಗಿ ಸುಮಾರು 10 ವರ್ಷಗಳಿಂದಲೂ ಸೇವೆ ಸಲ್ಲಿಸುತ್ತಾ ಇದ್ದಾರೆ. ಶಿಸ್ತಿನ ಸಿಪಾಯಿಯಂತೆ ಇವರು ಇನ್ನೂ ಹಲವು ಕ್ಷೇತ್ರಗಳಲ್ಲಿ ಅಂದರೆ ಅಖಿಲ ಭಾರತ ಮಹಿಳಾ ಸಮ್ಮೇಳನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಮೈಸೂರು–ಇಲ್ಲಿ ಜಂಟಿ ಕಾರ್ಯ ದರ್ಶಿಯಾಗಿ ಕೆಲಸ ಮಾಡುತ್ತಿದ್ದಾರೆ.

ಅರಸು ಮಂಡಲಿ ಸಂಘದಲ್ಲಿ ಉಪಾಧ್ಯಕ್ಷಿಣಿಯಾಗಿ ಹಾಗೂ ಅರಸು ಮಂಡಲಿ ಸಹಕಾರ ಸೊಸೈಟಿ ಲಿ., ನಲ್ಲಿ ಉಪಾಧ್ಯಕ್ಷಿಣಿಯಾಗಿ ಸೇವೆ ಸಲ್ಲಿಸಿ ಈಗ ಸಹಕಾರ ಸೊಸೈಟಿಯಲ್ಲೇ ನಿರ್ದೇಶಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀ ಶಿವಾನಂದ ವಿದ್ಯಾಸಂಸ್ಥೆಯ ಅಧ್ಯಕ್ಷಿಣಿ ಯಾಗಿದ್ದಾರೆ.

ಕೆ.ಆರ್. ಪೋಲೀಸ್ ಠಾಣೆಯ ನಾಗರೀಕ ಸಮಿತಿಯಲ್ಲಿ ಸುಮಾರು ವರ್ಷಗಳಿಂದಲೂ ಸದಸ್ಯೆ ಯಾಗಿ ತಮ್ಮ ಅತ್ಯಮೂಲ್ಯವಾದ ಸಲಹೆಗಳಿಂದ ಪೋಲೀಸ್ ಅಧಿಕಾರಿಗಳಿಂದಲೂ ಮಾನ್ಯತೆ ಗಳಿಸಿದ್ದಾರೆ.

ಶ್ರೀಮತಿ ರತ್ನ ಅರಸ್‌ರವರ ಕಾರ್ಯ[illegible] ಹಾಗೂ ಬಹುಮುಖದ ಪ್ರತಿಭೆಯು ಬೇರೆ ಮಹಿಳೆ ಯರಿಗೆ ದಾರಿ ದೀಪವಾಗಿದೆ. ಅವರ ನಿರಾಡಂಬರ ಜೀವನ ಸಹೃದಯತೆ, ಉತ್ಸಾಹ ಅವರಲ್ಲಿ ಸದಾ ತುಂಬಿ ತುಳುಕುತ್ತಿರುತ್ತದೆ. ಬೇಸರವೇ ಕಾಣದ ಶ್ರೀಮತಿ ಅರಸುರವರು ಸದಾ ನಗು ನಗುತ್ತಾ ಮಿತ ಭಾಷಿಣಿಯಾಗಿ, ಹಸನ್ಮುಖಿಯಾಗಿ ಪ್ರತಿಯೊಂದು ಕಾರ್ಯದಲ್ಲಿಯೂ ಶ್ರದ್ಧೆ, ಶಿಸ್ತನ್ನು ಅಳವಡಿಸಿ ಕೊಂಡಿದ್ದಾರೆ.

ಇಷ್ಟೆಲ್ಲಾ ಚಟುವಟಿಕೆಗಳ ಮಧ್ಯದಲ್ಲಿಯೂ ಇವರು ತಮ್ಮ ಸಂಸಾರದ ಜವಾಬ್ದಾರಿಯನ್ನು ಎಂದೂ ತೊರೆದವರಲ್ಲ.

"ದೇಹಕ್ಕೆ ವಯಸ್ಸಾಯಿತು; ಆದರೆ ಮನಸ್ಸಿಗೆ ಇನ್ನೂ ವಯಸ್ಸಾಗಿಲ್ಲ. ಕೆಲಸ ಮಾಡಲು ಉತ್ಸಾಹ, ಅವಕಾಶ, ಹೆಚ್ಚಿದೆ" ಎನ್ನುತ್ತಾರೆ ಶ್ರೀಮತಿ ರತ್ನಾ ಅರಸ್. ●



# ದೀಪಾವಳಿ ಸಿಹಿ ತಿಂಡಿಗಳು



ನರಕೇಶ್



ಕಲಕಿರಿ. ಈಗ ಹಾಲು ಒಡೆದು ಗರಣೆಯಾಗುತ್ತದೆ. ನಂತರ ಈ ಗರಣೆಯನ್ನು ಮಸ್ಲಿನ್ ಬಟ್ಟೆಯಲ್ಲಿ ಹಾಕಿ ಮಸ್ತು ಸಂಪೂರ್ಣ ಹೋಗಲಾಡಿಸಿರಿ. ಹಾಗೂ ಹಿಟ್ಟಿನಂತಾದ ಹಾಲಿನ ಗರಣೆಯನ್ನು ತಂಪಾಗಲು ಬಿಡಿ.

ಗುಲಾಬ್ ಭೋಗ್



ಪಾಕೀಜಾ



## ಗುಲಾಬ್ ಭೋಗ್

**ಆವಶ್ಯಕ ಸಾಮಗ್ರಿಗಳು :**

ಹಸುವಿನ ಹಾಲು 8 ಲೀಟರ್

ಆರೋರೋಟು – 60 ಗ್ರಾಂ

ಮ್ಯಾಂಗೋ ರೋಲ್



## ಚನ್ನಾ (ಗರಣೆ)ದಿಂದ ಮಾಡುವ ಸಿಹಿ ತಿಂಡಿಗಳು

1) ಗುಲಾಬ್ ಭೋಗ್ 2) ನರಕೇಶ್ 3) ದಿಲ್ ಬಹಾರ್, 4) ಪಾಕೀಜಾ 5) ಲ್ಯಾಪಟ್ 6) ಮ್ಯಾಂಗೋರೋಲ್

**ಚನ್ನಾ ತಯಾರಿಸುವ ವಿಧಾನ:**

ಹಾಲನ್ನು ಚೆನ್ನಾಗಿ ಕುದಿಸಿರಿ. ನಂತರ ಅದಕ್ಕೆ ಅರ್ಧ ಬಾಟಲ್ ಬಿಳಿ ವಿನೇಗರ್ ಬೆರೆಸಿ ಚೆನ್ನಾಗಿ

ಚಿತ್ರಗಳು :
ಡಿ.ಸಿ. ನಾಗೇಶ್

ಸಕ್ಕರೆ – 5 ಕಿಲೋ (ಪಾಕಕ್ಕೆ)
ಕೆಲ ಹನಿ ಪನ್ನೀರು
ಚಿಟಿಕೆ ಬೇಕಿಂಗ್ ಪೌಡರ್

**ತಯಾರಿಸುವ ವಿಧಾನ:**

ಚನ್ನಾ (ಗರಣೆ) ಮಾಡುವ ವಿಧಾನವನ್ನೂ ಈ ಮೊದಲೇ ತಿಳಿಸಿಯಾಗಿದೆ. ಈ ಚನ್ನಾವನ್ನು ಹದವಾಗಿ ನಾದಿರಿ. ಜೊತೆಗೆ ಆರಾರೋಟು ಬೆರೆಸಿ ಕಣಕವನ್ನು ತಯಾರಿಸಿರಿ. ನಂತರ ಈ ಕಣಕವನ್ನು ಬೇರೆ ಬೇರೆ ಆಕಾರದಲ್ಲಿ ಅಂದರೆ ನರಕೇಶ್‌ಗೆ ತತ್ತಿಯಂತೆ, ಆ್ಯಪಲ್‌ಗೆ ಗುಂಡಗೆ, ದಿಲ್‌ಬಹಾರ್‌ಗೆ ತ್ರಿಕೋನಾಕೃತಿಯಲ್ಲಿ ಹೀಗೆ ವಿವಿಧಾಕಾರಗಳಲ್ಲಿ ಮಾಡಬೇಕು.

ಹೀಗೆ ಬೇರೆ ಬೇರೆ ಆಕಾರಗಳಲ್ಲಿ ತಯಾರಿಸಿದ ಚನ್ನಾವನ್ನು ಸಕ್ಕರೆಯ ಪಾಕದಲ್ಲಿ ಹಾಕಿ ಸಣ್ಣ ಉರಿಯಲ್ಲಿ ಬೇಯಿಸಬೇಕು. ಹಾಗೂ ಇಳಿಜಾರು ತಟ್ಟೆಯಲ್ಲಿ ಪಾಕ ಸಂಪೂರ್ಣ ಇಳಿದುಹೋಗುವಂತೆ ಇವನ್ನು ಅದರಲ್ಲಿಡಬೇಕು.










## ನರಕೇಶ್

ತತ್ತಿಯಾಕಾರದಲ್ಲಿ ಬೇಯಿಸಿದ ಚನ್ನಾವನ್ನು ತೆಗೆದುಕೊಳ್ಳಿರಿ. ಹಾಗೂ ಹರಿತವಾದ ಚಾಕುವಿನಿಂದ ಅವುಗಳನ್ನು ಉದ್ದವಾಗಿ ತುಂಡರಿಸಿರಿ. ನಂತರ ಇದರಲ್ಲಿ (ಒಂದು ಹೋಳಿನ ಮೇಲೆ) ಮಂದವಾಗಿ ಕಲಸಿಟ್ಟ ಸಂದೇಶ್ (ಚನ್ನಾ)ವನ್ನೂ ಸವರಿ ಅದಕ್ಕೆ ಇನ್ನೊಂದು ಹೋಳನ್ನು ಸೇರಿಸಿ ಒತ್ತಿ ಮೇಲೆ ತುರಿದ ಬಾದಾಮಿ, ಪಿಸ್ತಾ, ಕೇಸರಿ ಬಳೆ ಇಟ್ಟು ಅಲಂಕರಿಸಿರಿ.

## ಪಾಕೀಜಾ

ಇದು ಸ್ಯಾಂಡ್‌ವಿಚ್‌ನಂತೆ ತ್ರಿಕೋನಾಕಾರದ್ದಾಗಿದೆ. ಇದರ ಮೇಲೆ ಬಣ್ಣ ಹಾಕಿದ ಖೋವಾವನ್ನು ಹರಡಿರಿ. ನಂತರ ಅದರ ಮೇಲೆ ಇನ್ನೊಂದನ್ನು (ತ್ರಿಕೋನಾಕಾರದ) ಇಟ್ಟು ಮುಚ್ಚಿರಿ. ಅಡಿಯಲ್ಲಿಡುವ ತ್ರಿಕೋನಾಕಾರದ ಪಾಕೀಜಾ ತಯಾರಿ.

ಇದರ ಮೇಲೆ ಮಲಾಯಿ ಹಾಕಿ. ತುರಿದ ಪಿಸ್ತಾ, ಬಾದಾಮಿ ಹಾಗೂ ಯಾಲಕ್ಕಿ ಪುಡಿ ಮತ್ತು ಕೇಸರಿ ಎಳೆಗಳನ್ನು ಇಟ್ಟು ಅಲಂಕರಿಸಿರಿ.

## ಆ್ಯಪಲ್‌ಗೆ

**ಅವಶ್ಯಕ ಸಾಮಗ್ರಿಗಳು :**

ಚನ್ನಾ – 1 ಕಿಲೋ
ಹಿಟ್ಟು – 60 ಗ್ರಾಂ
ಒಂದು ಚಿಟಿಕೆ ಬೇಕಿಂಗ್ ಪೌಡರ್

**ತಯಾರಿಸುವ ವಿಧಾನ :**

ಈ ಮೇಲೆ ತೋರಿಸಿದ ಮಿಶ್ರಣವನ್ನೆಲ್ಲ ಒಟ್ಟಿಗೆ ಸೇರಿಸಿ ಚೆನ್ನಾಗಿ ನಾದಿ ಗುಂಡಗೆ ಉಂಡೆಗಳನ್ನಾಗಿ ಮಾಡಿ. (ಇದಕ್ಕೆ ನಿಮಗಿಷ್ಟವಾದ ಬಣ್ಣ ಹಾಕಬಹುದು) ನಂತರ ಇವನ್ನು ಸಕ್ಕರೆ ಪಾಕ (ಒಳ್ಳೆಯ ಕಂಬಿ ಪಾಕ)ದಲ್ಲಿ ಹಾಕಿ ಬೇಯಿಸಿರಿ. ನಂತರ ಹೊರತೆಗೆದು ಆರಲು ಬಿಟ್ಟು ಮೇಲೆ ತುರಿದ ಕೊಬ್ಬರಿಯನ್ನು ಬೀರಿ ಅಲಂಕರಿಸಿರಿ.

## ಮ್ಯಾಂಗೋ ರೋಲ್

ಇದೊಂದು ಪೂರ್ತಿ ಖೋವಾ ಖಾದ್ಯ. ಮೊದಲು ಸ್ವಲ್ಪ ನುಣ್ಣಗಿನ ಖೋವಾ ತೆಗೆದುಕೊಂಡು ಅದಕ್ಕೆ ತುರಿದ ಪಿಸ್ತಾ ಮತ್ತು ಒಂದು ಹನಿ ಹಸಿರು ಬಣ್ಣ ಬೆರೆಸಿರಿ. ನಂತರ ಖೋವಾವನ್ನು ಸಕ್ಕರೆ ಪನ್ನೀರು ಮತ್ತು ಏಲಕ್ಕಿ ಪುಡಿಗಳೊಂದಿಗೆ ಬೆರೆಸಿ ಬೇಯಿಸಬೇಕು. ಹೀಗೆ ಬೇಯಿಸಿದ ಖೋವಾವನ್ನು ತುಪ್ಪ ಸವರಿದ ಸಮತಟ್ಟಾದ ಟ್ರೇಯಲ್ಲಿ ಸಮತಟ್ಟಾಗಿ ಹರಡಿರಿ. (ಸ್ಟೀಲ್ ಉರುಳೆಯನ್ನು ಅದರ ಮೇಲೆ ಉರುಳಿಸಿ) ನಂತರ ಸ್ವಲ್ಪ ಸಾದಾ ಖೋವಾವನ್ನು (ಇದನ್ನು ಬಣ್ಣ ಹಾಕದೆ ಸಕ್ಕರೆ, ಪನ್ನೀರಿನೊಂದಿಗೆ ಬೇಯಿಸಬೇಕು) ಇದರ ಮೇಲೆ ಸಮತಟ್ಟಾಗಿ ಹರಡಿ. ಅದು ಕೆಳಗಿನ ಪಟ್ಟಿಯನ್ನು ಪೂರ್ತಿಯಾಗಿ ಮುಚ್ಚಬೇಕು. ನಂತರ ಕೊನೆಯ ಪದರಿಗಾಗಿ ಖೋವಾದಲ್ಲಿ ಸ್ವಲ್ಪ ಮ್ಯಾಂಗೋ ಎಸೆನ್ಸ್, ಹಾಗೂ ಸ್ವಲ್ಪ ಕಿತ್ತಳೆ ಬಣ್ಣ ಸೇರಿಸಿ (ಸಕ್ಕರೆಯ) ಬೇಯಿಸಿ ಈ ಸಾದಾ ಖೋವಾ ಪದರಿನ ಮೇಲೆ ಅದು ಮುಚ್ಚುವಂತೆ ಹರಡಿರಿ.

ಈಗ ಮೊದಲನೆಯದು ಪಿಸ್ತಾ ಪಟ್ಟಿ

ಎರಡನೆಯದು ಸಾದಾ ಪಟ್ಟಿ

ಮೂರನೆಯದು ಮ್ಯಾಂಗೋ ಎಸೆನ್ಸ್ ಹಾಕಿದ ಕಿತ್ತಳೆ ಪಟ್ಟಿ

ಹೀಗೆ ಈ ಮೂರು ಪದರಗಳ ಖೋವಾ (ಮ್ಯಾಂಗೋ ರೋಲ್)ವನ್ನು ತಣ್ಣಗಾಗಲು ಬಿಡಿ. ನಂತರ ಸುಂದರವಾಗಿ ಕತ್ತರಿಸಿ ತಿನ್ನಲು ನೀಡಿ.

ಸೌಜನ್ಯ : ತಾಜ್ ರೆಸಿಡೆನ್ಸಿ, ಬೆಂಗಳೂರು

## ಪಾಪಡಿ

**ಅವಶ್ಯಕ ಸಾಮಗ್ರಿಗಳು :**

1/2 ಕೆ.ಜಿ. ಬಾಂಬೆ ಬೇಸಿನ್ (ಕಡಲೆಹಿಟ್ಟು)
5 ಗ್ರಾಂ ಜೀರಿಗೆ
5 ಗ್ರಾಂ ಓಮ (ಅಜಿವಾನ)
ಹಿಂಗು ರುಚಿಗೆ ತಕ್ಕಷ್ಟು

**ತಯಾರಿಸುವ ವಿಧಾನ :**

ಕಡಲೆ ಹಿಟ್ಟಿಗೆ ಜೀರಿಗೆ, ಓಮ, ಉಪ್ಪು ಮತ್ತು ಹಿಂಗು ಹಾಗೂ ಸಮಪ್ರಮಾಣದಲ್ಲಿ ನೀರು ಮತ್ತು ಎಣ್ಣೆ ಹಾಕಿ ಚಪಾತಿ ಹಿಟ್ಟಿನ ಹದಕ್ಕೆ ಕಲಸುವುದು. ನಂತರ ಚಪಾತಿ ತರಹ ಲಟ್ಟಿಸಿ ಬೇಕಾದ ಆಕಾರದಲ್ಲಿ ಕತ್ತರಿಸಿ ಎಣ್ಣೆಯಲ್ಲಿ ಕರಿಯುವುದು.

## ಕಚ್ಚಾ ಚೂಢಾ

ತೆಳು ಅವಲಕ್ಕಿಯನ್ನು ಸಣ್ಣ ಕಾವಿನಲ್ಲಿ ಹುರಿಯುವುದು. ಆಮೇಲೆ ಶುಂಠಿ, ಹಿಂಗು, ಸಾಸಿವೆ, ಹಸಿಮೆಣಸು, ಉಪ್ಪು ಮತ್ತು ಅರಿಶಿನ, ಹುರಿಗಡಲೆ ಒಗ್ಗರಣೆ ಹಾಕಿ ಹುರಿದಿರುವ ಅವಲಕ್ಕಿಯನ್ನು ಇದರೊಂದಿಗೆ ಬೆರೆಸುವುದು.

## ಆಲೂ ಮಿಕ್ಸ್‌ಚರ್

**ಅವಶ್ಯಕ ಸಾಮಗ್ರಿಗಳು :**

ಆಲೂಗೆಡ್ಡೆ
Icing Sugar
ಗೋಡಂಬಿ, ದ್ರಾಕ್ಷಿ

**ಮಾಡುವ ವಿಧಾನ :**

ಆಲೂಗೆಡ್ಡೆ ಸಿಪ್ಪೆ ತೆಗೆದು ತುರಿದು, ತೊಳೆಯಬೇಕು. ನೀರೆಲ್ಲಾ ಹೋಗುವವರೆಗೆ ಜರಡಿಯಲ್ಲಿ ಬಸಿದು, ಆಮೇಲೆ ಎಣ್ಣೆಯಲ್ಲಿ ಕರಿಯಬೇಕು. ನಂತರ ಒಗ್ಗರಣೆಯೊಂದಿಗೆ Icing Sugar ಹಾಕಿ ಬೆರೆಸುವುದು.

– ಕೆ. ಗೋಪಾಲ್ ಸೌಜನ್ಯ : ನ್ಯೂ ಶಾಂತಿಸಾಗರ್

# ಹೊಸರುಚಿ

## ಹಬ್ಬಕ್ಕೆ ಮಾಡುವ ಮೂಡೆ ಮತ್ತು ಕೊಟ್ಟೆ ಕಡುಬು

ಹಬ್ಬವೆಂದರೆ ಯಾರಿಗೆ ತಾನೆ ಆನಂದವಾಗದು? ಮಕ್ಕಳಿಗಂತೂ ಉಂಡೆ,ಚಕ್ಕುಲಿ, ಹೋಳಿಗೆ, ಕಡುಬು, ಮೆಲ್ಲುವ ಕನಸು. ಗೃಹಿಣಿಯರಿಗೆ ಅಟ್ಟದಿಂದ್ದ ಹಿಡಿದು ಅಂಗಳದವರೆಗೆ ಮನೆ ಸ್ವಚ್ಛ ಮಾಡುವ, ದೇವರ ನೈವೇದ್ಯಕ್ಕೆ ಅಣಿಗೊಳಿಸುವ ಸಂಭ್ರಮ. ಇನ್ನು ಅಜ್ಜಿ ಯಿದ್ದಲ್ಲಿ ಅತ್ತಿಂದಿತ್ತ ಓಡಾಡುತ್ತಾ, "ಏನಮ್ಮಾ ಹಬ್ಬದೂಟಕ್ಕೆ ಮೂಡೆ, ಕೊಟ್ಟೆ ಕಡುಬು ಮಾಡಲು ಮರೀಬೇಡ'' ಎಂದು ಗಡಿಬಿಡಿಯಲ್ಲಿರುವ ಸೊಸೆಗೆ ಆದೇಶ ನೀಡಲು ಮರೆಯುವುದಿಲ್ಲ.

ಸಾಮಾನ್ಯವಾಗಿ ಹಬ್ಬಗಳಂದು ದಕ್ಷಿಣ ಕನ್ನಡದ ಮನೆಮನೆಗಳಲ್ಲಿ ಮೂಡೆ ಮತ್ತು ಕೊಟ್ಟೆಕಡುಬುಗಳನ್ನು ತಯಾರಿಸುವುದು ವಾಡಿಕೆಯಂತಿದೆ. ರುಚಿಯಲ್ಲಾಗಲೀ ಬಣ್ಣದಲ್ಲಾಗಲೀ ಇದು ಇಡ್ಲಿಯನ್ನೇ ಹೋಲುತ್ತಿರುವುದ ಲ್ಲದೆ ಇದರ ತಯಾರಿಕೆಗೆ ಬಳಸುವ ಸಾಮಗ್ರಿಗಳೂ (1ಸೇರು ಅಕ್ಕಿಗೆ ಅರ್ಧ ಸೇರು ಉದ್ದಿನ ಬೇಳೆ) ಕೇವಲ ಅಕ್ಕಿ ಹಾಗೂ ಉದ್ದಿನ ಬೇಳೆಯೇ ಆಗಿರುತ್ತದೆ. ಆದರೂ ಮುಂಡಿಗೆ ಮತ್ತು ಹಲಸಿನ ಮರದ ಎಲೆಗಳಿಂದ ಬೇಯಿಸುವ ಈ ಕಡುಬಿಗಿರುವ ಸ್ವಾದವೂ ವಿಶೇಷವಾದುದು. ಜತೆಗೆ ಹುಳಿ, ತೆಂಗಿನಕಾಯಿ ಚಟ್ನಿಯೋ ಅಥವಾ ಕಾಯಿಹಾಲು, ಪಾಯಸವೋ ಇದ್ದಲ್ಲಿ ಇದರ ಸವಿ ಇನ್ನಷ್ಟು ಹೆಚ್ಚುವುದು.

**ಕೊಟ್ಟೆ ಕಡುಬು**

ಇದು ಹಲಸಿನ ಮರದ ಎಲೆಗಳ ತೊಟ್ಟೆಯಿಂದ ಬೇಯಿಸುವ ಕಡುಬು. ಒಂದೇ ಅಳತೆಯ ನಾಲ್ಕು ಎಲೆಗಳನ್ನು ಆರಿಸಿ ಉದ್ದಗಲಕ್ಕಿಟ್ಟು ಅವುಗಳ ತುದಿಗೆ ಕಡ್ಡಿ (ಸೋಗೆ ಅಥವಾ ಬಿದಿರಿನ ಕಡ್ಡಿ)ಯಿಂದ ಚುಚ್ಚಿ (ತಟ್ಟೆ, ತೊಟ್ಟೆ, ಕೊಟ್ಟೆ) ಬೇಕಿದ್ದ ಆಕಾರ ಕೊಡುವುದು. ಇಂತಹ ತಟ್ಟೆಗಳಲ್ಲಿ ಹಿಟ್ಟು ಹಾಕಿ ಹಬೆಯಲ್ಲಿ ಬೇಯಿಸಿದ್ದನ್ನು ಕೊಟ್ಟೆ ಕಡುಬು ಎನ್ನುವರು.

**ಮೂಡೆ**

ಇದನ್ನು ಮುಂಡಿಗೆ ಮರದ ಎಲೆಗಳ ಲೋಟ ಗಳಿಂದ ಬೇಯಿಸುವರು. ಮೈತುಂಬಾ ಮುಳ್ಳು ಹೊತ್ತಿರುವ ಈ ಎಲೆಗಳಿಂದ ಈ ಕಲೆಗಳನ್ನು ತಯಾ ರಿಸುವುದು ಬಹಳ ಕಷ್ಟಕರವಾದರೂ ಹಳ್ಳಿಯ ಹೆಂಗಸರು ಈ ಕಾರ್ಯದಲ್ಲಿ ನಿಪುಣೆಯಾಗಿರುವರು. ಗದ್ದೆ ಬಯಲುಗಳಲ್ಲಿ ಮುಳ್ಳಿನ ಪೊದೆಯಂತೆ ಬೆಳೆ ಯುತ್ತಿರುವ ಈ ಮರಗಳಿಂದ ಎಲೆ ಕತ್ತರಿಸಿ ತರುವುದೇ ಬಹು ದೊಡ್ಡ ಸಾಹಸದಂತಿದೆ. ಕೈಗಳ ಪೂರ್ತಿ ಮುಳ್ಳಿನ ಗಾಯಗಳೊಂದಿಗೆ ಪೊದೆಯಲ್ಲಿ ಅಡಗಿರುವ ಹಾವು, ವಿಷಜಂತುಗಳ ಭಯ ಬೇರೆ. ಆದರೂ ತುಳುನಾಡಿನಲ್ಲಿ ಹಬ್ಬ ಹುದಿನಗಳ ಸಂಭ್ರಮದೊಂದಿಗೆ ಮೂಡೆಗೂ ಪ್ರಥಮ ಸ್ಥಾನವಿದೆ.

ಕೊಯ್ದು ತಂದ ರಾಶಿ ಎಲೆಗಳಲ್ಲಿ ಉದ್ದಕ್ಕೂ ಸಾಲುಗಟ್ಟಿರುವ ಮುಳ್ಳನ್ನು ಕೆರೆದು ತೆಗೆದು ಬಿಸಿಲಿನಲ್ಲಿ ಒಣಗಿಸುವರು. ಬಳಿಕ ಸುರುಳಿಯಾಗಿ ಸುತ್ತಿಟ್ಟುಕೊಂಡು ಬಿದಿರ ಕಡ್ಡಿಯ ಸಹಾಯದಿಂದ ಮೊಳಕೈ ಗಾತ್ರದ ಕೊಟ್ಟೆಗಳನ್ನು ತಯಾರಿಸುವರು. ಇಂತಹ ನೂರಾರು ಕೊಟ್ಟೆಗಳ ಹೆಡಿಗೆ ಹೊತ್ತು ಮಾರಾಟಕ್ಕಾಗಿ ಹಳ್ಳಿಯಿಂದ ಪೇಟೆಗೆ ಬರುತ್ತಿರುವವರನ್ನು ಹಬ್ಬದ ಒಂದೆರಡು ದಿನಗಳ ಮೊದಲಿನಿಂದಲೇ ಇಲ್ಲಿ ಕಾಣಬಹುದು. ಆದರೆ ಇವುಗಳನ್ನು ಖರೀದಿಸುವಾಗ ಬೆಳಕಿಗೆ ಹಿಡಿದು ಚೆನ್ನಾಗಿ ಪರೀಕ್ಷಿಸಬೇಕು. ಇಲ್ಲವಾದಲ್ಲಿ ಚಿಕ್ಕ ತೂತು ಇದ್ದರೂ ಸಾಕು ಹಿಟ್ಟೆಲ್ಲಾ ಸೋರಿ ಹೋಗಿ 'ಎಲ್ಲಾ ಬಣ್ಣ ಮಸಿ ನುಂಗಿತು' ಎನ್ನುವಂತಾಗುತ್ತದೆ.

ಹಿಂದೆ ಪಾತ್ರೆಗಳ ಬಳಕೆ ಬಹಳ ಕಡಿಮೆಯಿದ್ದ ಕಾಲದಲ್ಲಿ ಎಲೆಗಳಿಂದ ತಟ್ಟೆ ಬಟ್ಟಲುಗಳ ಆಕೃತಿಗಳನ್ನು ರಚಿಸಿ ಅದರಲ್ಲಿ ಕಡುಬು ತಯಾರಿಸುವ ವಿಧಾನ ಬೆಳೆದು ಬಂದಿರಬಹುದು. ಅಥವಾ ದೇಹಕ್ಕೆ ಅವಶ್ಯ ವಿರುವ ಜೀವಸತ್ವಗಳ ಸೇವನೆಗಾಗಿ ನಮ್ಮ ಪೂರ್ವಿಕರು ಹಸಿರೆಲೆಗಳನ್ನು ಈ ರೀತಿಯಾಗಿ ಉಪಯೋಗಿಸುವ ಉದ್ದೇಶವನ್ನಿಟ್ಟುಕೊಂಡಿರಲೂಬಹುದು. ಅಂತೂ ಇಂದಿನ ಆಧುನಿಕ ಯುಗದಲ್ಲಿ ಕುಕ್ಕರ್ ಮತ್ತು ಇಡ್ಲಿ ಸ್ಟ್ಯಾಂಡ್‌ಗಳಿಗೆ ಕೊರತೆ ಇಲ್ಲದಿದ್ದರೂ ಮೂಡೆ ಮತ್ತು ಕೊಟ್ಟೆ ಕಡುಬುಗಳನ್ನು ಎಲೆಗಳ ತಟ್ಟೆ, ಕೊಟ್ಟೆಗಳಲ್ಲಿ ಬೇಯಿಸುವುದು ಇಂದಿಗೂ ಒಂದು ಸಂಪ್ರದಾಯದಂತೆ ನಡೆದು ಬಂದಿರುತ್ತದೆ.

**ಯಜ್ಞಾವತಿ ಕೇಶವ್ ಕಂಗನ್**
ಮಂಗಳೂರು

## ತಂಬುಳಿಗಳು

### ಬೆಳ್ಳುಳ್ಳಿ ತಂಬುಳಿ :

**ಸಾಮಾನು :** ಎರಡು ಎಸಳು ಬೆಳ್ಳುಳ್ಳಿ, ಎರಡು ತುರಿ ತೆಂಗಿನಕಾಯಿ, ಉಪ್ಪು, ಹಿಂಗು, ಒಗ್ಗರಣೆಗೆ ಸಾಸಿವೆ, ಒಣಮೆಣಸು, ಎಣ್ಣೆ, ಹುಳಿ ಮಜ್ಜಿಗೆ.

**ವಿಧಾನ :** ಬೆಳ್ಳುಳ್ಳಿ ತೆಂಗಿನ ತುರಿಗೆ ಹಾಕಿ ನುಣ್ಣಗೆ ರುಬ್ಬಿ. ರುಚಿಗೆ ತಕ್ಕಷ್ಟು ಉಪ್ಪು ಹಾಕಿ. ಇಂಗು, ಹುಳಿಮಜ್ಜಿಗೆ ಹಾಕಿ ಕಲಡಿಸಿ ಸಾಸಿವೆ ಒಗ್ಗರಣೆ ಕೊಡಿ.

### ಈರುಳ್ಳಿ ತಂಬುಳಿ :

**ವಿಧಾನ :** ಒಂದು ದೊಡ್ಡ ಈರುಳ್ಳಿ ಸಿಪ್ಪೆ ತೆಗೆದು, ತುಂಡು ಮಾಡಿ ತೆಂಗಿನ ತುರಿ ಸೇರಿಸಿ ನುಣ್ಣಗೆ ರುಬ್ಬಿ. ಉಪ್ಪು, ಹಿಂಗು, ಹುಳಿ ಮಜ್ಜಿಗೆ ಹಾಕಿ ಕಲಡಿಸಿ ಸಾಸಿವೆ ಒಗ್ಗರಣೆ ಕೊಡಿ.

### ಶುಂಠಿ ತಂಬುಳಿ :

**ವಿಧಾನ :** 1/4 ಇಂಚು ಉದ್ದದ ಶುಂಠಿಯನ್ನು ಸಣ್ಣಗೆ ಹೆಚ್ಚಿ ತೆಂಗಿನ ತುರಿಯೊಂದಿಗೆ ನುಣ್ಣಗೆ ರುಬ್ಬಿ. ಉಪ್ಪು, ಹಿಂಗು, ಹುಳಿಮಜ್ಜಿಗೆ ಹಾಕಿ ಕಲಡಿಸಿ ಸಾಸಿವೆ ಒಗ್ಗರಣೆ ಕೊಡಿ. ಇದೇ ರೀತಿ ನೆಲ್ಲಿಕಾಯಿಯಿಂದ ತಂಬುಳಿ ಮಾಡಬಹುದು.



### ಸಂಬರಬಳ್ಳಿ ಸೊಪ್ಪಿನ ತಂಬುಳಿ :

**ಸಾಮಾನು :** 8–10 ಸೊಪ್ಪಿನ ಎಲೆ, 1/2 ಟೀ ಸ್ಪೂನ್ ಜೀರಿಗೆ, ಒಂದು ಟೀ ಸ್ಪೂನ್ ತುಪ್ಪ, ತೆಂಗಿನ ಕಾಯಿ ಎರಡು ತುರಿ, ಉಪ್ಪು, ಹಿಂಗು, ಹುಳಿಮಜ್ಜಿಗೆ.

**ವಿಧಾನ :** ಸೊಪ್ಪು ತೊಳೆದು ಬಾಣಲೆಗೆ ಹಾಕಿ ತುಪ್ಪ, ಜೀರಿಗೆಯೊಡನೆ ಹುರಿಯಿರಿ. ಜೀರಿಗೆ ಪಟಪಟ ಶಬ್ದ ಮಾಡುವಾಗ ತೆಂಗಿನ ತುರಿಯೊಡನೆ ನುಣ್ಣಗೆ ರುಬ್ಬಿ. ಉಪ್ಪು, ಹಿಂಗು, ಹುಳಿಮಜ್ಜಿಗೆ ಹಾಕಿ ಕಲಡಿಸಿ ಒಗ್ಗರಣೆ ಕೊಡಿ.

### ಎ.ಬಿ.ಸಿ.ಡಿ. ಸೊಪ್ಪಿನ ತಂಬುಳಿ :

**ವಿಧಾನ :** ಸೊಪ್ಪನ್ನು ತುಪ್ಪ ಹಾಕಿ ಜೀರಿಗೆಯೊಡನೆ ಹುರಿಯಿರಿ. ತೆಂಗಿನ ತುರಿಯೊಂದಿಗೆ ರುಬ್ಬಿ ಉಪ್ಪು, ಹಿಂಗು, ಹುಳಿಮಜ್ಜಿಗೆಯೊಂದಿಗೆ ಕಲಡಿಸಿ ಒಗ್ಗರಣೆ ಹಾಕಿ. (ಸೊಪ್ಪಿನ ಹೆಸರೇ ಹೇಳಿದಂತೆ ಇದರಲ್ಲಿ ಎ.ಬಿ.ಸಿ.ಡಿ. ಜೀವಸತ್ವ ಇದೆ.)

ಇದೇ ರೀತಿ ಕಾಕೆಸೊಪ್ಪು, ಗೇರು ಮರದ ಚಿಗುರು, ಮಾವಿನ ಮರದ ಚಿಗುರು, ತೇರೆ ಮರದ ಚಿಗುರು, ದೀರ್ನಾಲೆ ಮೆಣಸಿನ ಚಿಗುರು, ಇಲಿಕಿವಿ, ನೀರುಳ್ಳಿ ಸೊಪ್ಪಿನಿಂದ ತಂಬುಳಿಗಳನ್ನು ಮಾಡಬಹುದು.

### ಒಂದೆಲಗದ ತಂಬುಳಿ :

**ವಿಧಾನ :** ಎರಡು ಮುಷ್ಟಿಯಷ್ಟು ಗೆಡ್ಡೆ ಸಮೇತ ಒಂದೆಲಗ (ತಿಮರೆ)ದ ಸೊಪ್ಪನ್ನು ಚೆನ್ನಾಗಿ ತೊಳೆದು ಸಣ್ಣಗೆ ಹೆಚ್ಚಿ ಹಸಿಯಾಗಿಯೇ ಜೀರಿಗೆ, ತೆಂಗಿನ ತುರಿಯೊಂದಿಗೆ ನುಣ್ಣಗೆ ರುಬ್ಬಿ. ಉಪ್ಪು, ಹಿಂಗು, ಹುಳಿಮಜ್ಜಿಗೆ ಹಾಕಿ ಕಲಡಿಸಿ ಒಗ್ಗರಣೆ ಕೊಡಿ.

ಇದೇ ರೀತಿ ಪುದಿನ, ಕೊತ್ತಂಬರಿ ಸೊಪ್ಪಿನ ತಂಬುಳಿ ಮಾಡಬಹುದು.

### ಮಾವಿನಕಾಯಿ ತಂಬುಳಿ :

**ವಿಧಾನ :** ಎರಡು ಮಿಡಿ ಮಾವಿನಕಾಯಿ ಸಣ್ಣಗೆ ಹೆಚ್ಚಿ ಉಪ್ಪು, ತೆಂಗಿನ ತುರಿಯೊಂದಿಗೆ ನುಣ್ಣಗೆ ರುಬ್ಬಿ. ಹಿಂಗು, ಸಿಹಿಮಜ್ಜಿಗೆಯೊಂದಿಗೆ ಕಲಡಿಸಿ ಒಗ್ಗರಣೆ ಹಾಕಿ.

### ಮಾವಿನ ಕೋಗಿಲೆ ತಂಬುಳಿ :

**ವಿಧಾನ :** ಉಪ್ಪಿಗೆ ಹಾಕಿಟ್ಟ ನಾಲ್ಕು ಮಾವಿನ ಮಿಡಿಯನ್ನು ಸೀಳಿ ಅದರ ಕೋಗಿಲೆ ತೆಗೆಯಿರಿ. ಅದನ್ನು ತೆಂಗಿನ ತುರಿಯೊಂದಿಗೆ ರುಬ್ಬಿ ಮಜ್ಜಿಗೆ ಹಾಕಿ ಒಗ್ಗರಣೆ ಕೊಡಿ. ಉಪ್ಪು ಹಾಕುವುದು ಬೇಡ.

### ಹೂವುಗಳ ತಂಬುಳಿ :

**ವಿಧಾನ :** ಕೆಂಪು ದಾಸವಾಳ, ಕೆನೆ ಬಣ್ಣದ ದಾಸವಾಳಗಳನ್ನು ಸಣ್ಣಗೆ ಹೆಚ್ಚಿರಿ. ಉಪ್ಪು, ಹಿಂಗು, ಹುಳಿಮಜ್ಜಿಗೆಯೊಂದಿಗೆ ಚೆನ್ನಾಗಿ ಕಿವಿಚಿ ಸಾಸಿವೆ ಒಗ್ಗರಣೆ ಹಾಕಿ.

### ತೊಂಡೆಕಾಯಿ ಸೊಪ್ಪಿನ ತಂಬುಳಿ :

**ವಿಧಾನ :** ನಾಲ್ಕೈದು ಎಲೆಗಳನ್ನು ಬೆಂಕಿಕೆಂಡದಲ್ಲಿ ಸಪೂರದ ಕಡ್ಡಿಗೆ ಸಿಕ್ಕಿಸಿ ಬಾಡಿಸಿ. ನಂತರ ತೆಂಗಿನ ತುರಿ ಹಾಕಿ ರುಬ್ಬಿ. ಉಪ್ಪು, ಹಿಂಗು, ಮಜ್ಜಿಗೆ ಹಾಕಿ ಕಲಡಿಸಿ ಒಗ್ಗರಣೆ ಕೊಡಿ.

ಊಟ ಮಾಡುವಾಗ ಮೊದಲು ಇಂತಹ ತಂಬುಳಿಗಳನ್ನು ದಿನಕ್ಕೆ ಒಂದೊಂದರಂತೆ ತಯಾರಿಸಿ ಕೊಂಡು ಅನ್ನದೊಡನೆ ಕಲಸಿ ಊಟ ಮಾಡಬೇಕು. ಇದು ಆರೋಗ್ಯಕ್ಕೆ ಒಳ್ಳೆಯದು.

*** ಬಿ. ವನಜಾಕ್ಷಿ**

## ಬ್ರೆಡ್ ಜಾಮೂನ್

**ಬೇಕಾಗುವ ಸಾಮಾನು :** 1ಕಪ್ ಸಕ್ಕರೆ, 1/2 ಕಪ್ ಮೈದಾ, 1 ಕಪ್ ನೀರು, 225 ಗ್ರಾಂ ಬ್ರೆಡ್, 1 ಚಿಟಿಕೆ ಕೇಸರಿಪುಡಿ, 1 ಏಲಕ್ಕಿ, ಎಸೆನ್ಸ್, 1 ಚಿಟಿಕೆ ಅಡಿಗೆ ಸೋಡ, ಕರಿಯಲು ಎಣ್ಣೆ ಅಥವಾ ಡಾಲ್ಡಾ.

**ಮಾಡುವ ವಿಧಾನ :** ಬ್ರೆಡ್ಡನ್ನು ನೀರಿನಲ್ಲಿ ನೆನೆಸಿ ತೆಗೆದು (ಒಣಗಿದ ಬ್ರೆಡ್ ಆದರೂ ಪರವಾಗಿಲ್ಲ.) ಚೆನ್ನಾಗಿ ಪುಡಿ ಮಾಡಿ ಅದಕ್ಕೆ ಮೈದಾಹಿಟ್ಟು, ಅಡಿಗೆಸೋಡ ಹಾಕಿ ಸರಿಯಾಗಿ ಹೊಂದಿಕೊಳ್ಳುವಂತೆ ಕಲಸಬೇಕು. ನಂತರ ಚಿಕ್ಕ ಚಿಕ್ಕ ಉಂಡೆಗಳನ್ನು ಮಾಡಿ, ಆ ಉಂಡೆಗಳ ಮೇಲೆ ಒದ್ದೆ ಬಟ್ಟೆಯನ್ನು 5 ನಿಮಿಷಗಳ ಕಾಲ ಹಾಕಿರಬೇಕು. ಸಕ್ಕರೆ, ಕೇಸರಿಪುಡಿ, ಏಲಕ್ಕಿ ಪುಡಿ, ಎಸೆನ್ಸ್‌ನ್ನು 1 ಕಪ್ ನೀರಿನಲ್ಲಿ ಪಾಕ ಮಾಡಿಟ್ಟುಕೊಳ್ಳಬೇಕು. ನಂತರ ಉಂಡೆಗಳನ್ನು ಎಣ್ಣೆ ಅಥವಾ ಡಾಲ್ಡಾದಲ್ಲಿ ಕರಿದು ಸಕ್ಕರೆ ಪಾಕದಲ್ಲಿ ಹಾಕಿ. 5 ನಿಮಿಷ ಪಾಕ ಹೀರಿದ ನಂತರ ತಿಂದರೆ ಮೃದುವಾದ ಬ್ರೆಡ್ ಜಾಮೂನ್ ಬಲುರುಚಿ.

## ಹಲಸಿನ ಬೀಜದ ಪಕೋಡ

**ಬೇಕಾಗುವ ಸಾಮಾನು :** ಸುಮಾರು 30–40 ಹಲಸಿನ ಬೀಜ, ರುಚಿಗೆ ತಕ್ಕಷ್ಟು ಉಪ್ಪು, 1/2 ಟೀಸ್ಪೂನ್ ಜೀರಿಗೆ, 1/4 ಟೀ ಸ್ಪೂನ್ ಅಜಿವಾನ, 10 ಹಸಿರುಮೆಣಸಿನ ಕಾಯಿ, 1 ಕಂತೆ ಕೊತ್ತಂಬರಿ ಸೊಪ್ಪು, 1 ಕಂತೆ ಕರಿಬೇವು, 1 ಚೂರು ಹಸಿಶುಂಠಿ, ಕರಿಯಲು ಎಣ್ಣೆ.

**ಮಾಡುವ ವಿಧಾನ :** ಹಲಸಿನ ಬೀಜದ ಸಿಪ್ಪೆ ತೆಗೆದು ಮೆತ್ತಗಾಗುವಂತೆ ಬೇಯಿಸಬೇಕು. (ನೀರು ಹಾಕಿ) ಬೆಂದ ಮೇಲೆ ನೀರಿನಿಂದ ಹೊರತೆಗೆದು ಒರಳು ಅಥವಾ ಮಿಕ್ಸರ್‌ನಲ್ಲಿ ಹಾಕಿ ತಿರುವಬೇಕು. ಇದಕ್ಕೆ ಕೊತ್ತಂಬರಿ, ಕರಿಬೇವು, ಹಸಿಮೆಣಸಿನಕಾಯಿ, ಹಸಿಶುಂಠಿ ಎಲ್ಲಾ ಸಣ್ಣಗೆ ಹೆಚ್ಚಿ ಹಾಕಿ ಜೀರಿಗೆ, ಅಜಿವಾನವನ್ನು ಹಾಕಿ ಚೆನ್ನಾಗಿ ಕಲಸಬೇಕು. ನಂತರ ಪುಡಿ ಪುಡಿ ಮಾಡಿ ಎಣ್ಣೆಗೆ ಹಾಕಿ ಕೆಂಪಗೆ ಕರಿಯಬೇಕು. ಇದು ಬಿಸಿಯಿದ್ದಾಗ ಕಾಫಿ, ಟೀ ಜೊತೆಗೆ ತಿನ್ನಲು ತುಂಬಾ ಚೆನ್ನಾಗಿರುತ್ತದೆ.

## ಮಿಕ್ಸ್ ಮೀಠಾ

**ಬೇಕಾಗುವ ಸಾಮಾನು :** 1 ಕಪ್ ಗಟ್ಟಿ ಹಾಲು, 3 ಬಟ್ಟಲು ಸಕ್ಕರೆ, 1 1/2 ಕಪ್ ಒಳ್ಳೆಯ ತುಪ್ಪ, 4 ಏಲಕ್ಕಿ, 1/4 ಕಪ್ ಕಡಲೆಹಿಟ್ಟು, 1/4 ಕಪ್ ಸಣ್ಣರವೆ, (ಎಲ್ಲಾ ಸೇರಿ 1 ಕಪ್ ಅಳತೆಗೆ)

**ಮಾಡುವ ವಿಧಾನ :** ಹಿಟ್ಟುಗಳನ್ನೆಲ್ಲಾ ಬೆರೆಸಿ ಸ್ವಲ್ಪ ಕೆಂಪಗೆ ಹುರಿದುಕೊಳ್ಳಿ. ಹಾಲಿಗೆ ಸಕ್ಕರೆ ಸೇರಿಸಿ ಒಲೆಯ ಮೇಲೆ ಪಾಕಕ್ಕೆ ಇಡಬೇಕು. ಸಕ್ಕರೆ ಕರಗಿ ಸ್ವಲ್ಪ ಗಟ್ಟಿ ಪಾಕ ಆದ ಮೇಲೆ 1/2 ಕಪ್ ತುಪ್ಪವನ್ನು ಹಾಕಿ, ಹುರಿದ ಹಿಟ್ಟುಗಳನ್ನು ಹಾಕಿ ಕೈಯಾಡುತ್ತಿರಬೇಕು. ಈಗ ಉಳಿದ ತುಪ್ಪವನ್ನು ಸ್ವಲ್ಪ ಸ್ವಲ್ಪವಾಗಿ ಹಾಕುತ್ತಾ ಚೆನ್ನಾಗಿ ಗಟ್ಟಿಯಾದ ಮೇಲೆ ತುಪ್ಪ ಸವರಿದ ತಟ್ಟೆಗೆ ಹಾಕಿ ಮೇಲೆ ಏಲಕ್ಕಿ ಪುಡಿ ಉದುರಿಸಬೇಕು. ಸ್ವಲ್ಪ ಆರಿದ ಮೇಲೆ ಯಾವ ಆಕಾರಕ್ಕೆ ಬೇಕಾದರೂ ಕತ್ತರಿಸಿಕೊಳ್ಳಬೇಕು.

**–ರಾಧಿಕಾ ಕೆ. ಮೂರ್ತಿ**

## ಹಲಸಿನ ಹಣ್ಣಿನ ಕಡಬು

**ಬೇಕಾಗುವ ಸಾಮಾನುಗಳು :** ಹಲಸಿನ ಹಣ್ಣಿನ ತೊಳೆ 30, ಅಕ್ಕಿ 1 ಪಾವು, ಏಲಕ್ಕಿ 4, ಬೆಲ್ಲ1/4 ಕಿಲೋ, ತೆಂಗಿನಕಾಯಿ1 ಹೋಳು, ರುಚಿಗೆ ತಕ್ಕಷ್ಟು ಉಪ್ಪು.

**ಮಾಡುವ ವಿಧಾನ :** ಮೊದಲು ಹಲಸಿನ ಹಣ್ಣಿನ ನಾರು ಬೀಜ ತೆಗೆದು ಸಣ್ಣದಾಗಿ ಕತ್ತರಿಸಿಕೊಳ್ಳಬೇಕು. ಒಂದು ಗಂಟೆ ಕಾಲ ನೆನೆ ಹಾಕಿದ ಅಕ್ಕಿ,ತೆಂಗಿನ ತುರಿ ಹಾಗು ಹಲಸಿನ ತೊಳೆಗಳೊಂದಿಗೆ ರುಬ್ಬಿ ಕೊಳ್ಳಬೇಕು. ತುಂಬ ನಯವಾಗಿ ರುಬ್ಬಬಾರದು. ಬೆಲ್ಲವನ್ನು ನುಣ್ಣಗೆ ಕುಟ್ಟಿ ಹಾಕಬೇಕು. ಏಲಕ್ಕಿ ಪುಡಿ, ಉಪ್ಪು ಸೇರಿಸಿ ಚೆನ್ನಾಗಿ ಕಲಸಿ ತುಪ್ಪ ಸವರಿದ ತಟ್ಟೆಗೆ ಸುರಿದು ಕುಕ್ಕರಿನಲ್ಲಿ ಅರ್ಧ ಗಂಟೆ ಬೇಯಿಸಬೇಕು. ಬೇಕಿದ್ದರೆ ದ್ರಾಕ್ಷಿ, ಗೋಡಂಬಿಯಿಂದ ಅಲಂಕರಿಸ ಬಹುದು. ಬೆಂದ ಮೇಲೆ ಡೈಮಂಡ್ ಆಕಾರದಲ್ಲಿ ಕತ್ತರಿಸಿ. ಹರಿ ತುಪ್ಪ ಹಾಗೂ ಜೇನುತುಪ್ಪದೊಂದಿಗೆ ತಿಂದರೆ ಅದರ ರುಚಿ! ವರ್ಣಿಸುವುದಕ್ಕಿಂತ ಹಲಸಿನ ಹಣ್ಣನ್ನು ಕಂಡಾಗಲೆಲ್ಲ ಅದನ್ನೇ ಮಾಡಿ ಸವಿಯಲು ತೊಡಗುವಿರಿ.

**–ಕಮಲಾ ಮೂರ್ತಿ ತುಮಕೂರು**

## ವಕ್ಕಾರೆ

**ಬೇಕಾಗುವ ಸಾಮಾನು :**

1/4 ಕೆ.ಜಿ. ಕ. ಬೇಳೆ, 1/4 ಕೆ.ಜಿ ಹೆಸರುಬೇಳೆ, 1/2 ಕೆ.ಜಿ. ಬೆಲ್ಲ, 5–6 ಏಲಕ್ಕಿ, 1/2 ಗಿಟುಕು ಕೊಬ್ಬರಿ, 4–5 ಚಮಚ ತುಪ್ಪ.

**ಮಾಡುವ ವಿಧಾನ :**

ಕಡ್ಲೆಬೇಳೆ, ನುತ್ತು ಹೆಸರುಬೇಳೆಯನ್ನು ಬೇರೆ ಬೇರೆಯಾಗಿ ಕೆಂಪಗೆ ಹುರಿದುಕೊಂಡು ಅದನ್ನು ಒಂದು ಗಂಟೆಯ ಕಾಲ ನೀರಿನಲ್ಲಿ ನೆನೆಸಿಡಬೇಕು. ನೀರನ್ನು ಚೆನ್ನಾಗಿ ಸೋಧಿಸಿ ತರಿ ತರಿಯಾಗಿ ರುಬ್ಬಿಕೊಳ್ಳಬೇಕು. ಇಡ್ಲಿ ಪಾತ್ರೆಯ ಹಬೆಯಲ್ಲಿ ರುಬ್ಬಿದ ಹಿಟ್ಟನ್ನು ಬೇಯಿಸಬೇಕು. ಚೆನ್ನಾಗಿ ಬೆಂದ ನಂತರ ಒಂದು ತಟ್ಟೆಯಲ್ಲಿ ಹಾಕಿ ಆರಲು ಬಿಡಿ. ಬೆಲ್ಲವನ್ನೂ ಒಂದು ಲೋಟ ನೀರಿನಲ್ಲಿ ಹಾಕಿ ಉಂಡೆ ಪಾಕ ಮಾಡಿ ಕೆಳಗಿಳಿಸಿಕೊಳ್ಳಿ. ಅದಕ್ಕೆ ತುರಿದ ಕೊಬ್ಬರಿ ಏಲಕ್ಕಿ ಪುಡಿ ತುಪ್ಪ ಹಾಕಿ ರುಬ್ಬಿದ್ದ ಹಿಟ್ಟನ್ನು ಉದುರಿಸಿಕೊಂಡು ಹಾಕಿ. ಈ ಮಿಶ್ರಣವನ್ನು ಸ್ವಲ್ಪಸ್ವಲ್ಪವಾಗಿ ಬೆಲ್ಲದ ಪಾಕಕ್ಕೆ ಹಾಕುತ್ತಾ ಚೆನ್ನಾಗಿ ಕೈಯಾಡಿಸಿ ಮಗುಚಬೇಕು. ಗಂಟುಗಳಿಲ್ಲದಂತಾದ ಮೇಲೆ ಉದುರು ಉದುರಾಗಿ ಚೆನ್ನಾಗಿ ಆಗುತ್ತದೆ. ತಿನ್ನಲು ತುಂಬಾ ರುಚಿಯಾಗಿರುತ್ತದೆ.

**–ಮ.ನ. ಲತಾಮೋಹನ್**

## ನುಗ್ಗೆಕಾಯಿ ಉಪ್ಪಿನ ಕಾಯಿ

**ಬೇಕಾಗುವ ಸಾಮಾನು:**

4 ನುಗ್ಗೆಕಾಯಿ, 50 ಗ್ರಾಂ ಅಚ್ಚಕಾರದ ಪುಡಿ, ಸಣ್ಣ ಕಿತ್ತಲೆ ಗಾತ್ರದ ಹುಣಿಸೆಹಣ್ಣು, 1/2 ಟೇಬಲ್ ಸ್ಪೂನ್ ಕಡ್ಲೆ ಬೇಳೆ, 1/2 ಟೇಬಲ್ ಸ್ಪೂನ್ ಉದ್ದಿನ ಬೇಳೆ, 200 ಗ್ರಾಂ ಒಳ್ಳೆಣ್ಣೆ, 10 ಬೆಳ್ಳುಳ್ಳಿ, 1/2 ಟೀ ಸ್ಪೂನ್ ಹುರಿದ ಮೆಂತ್ಯ ಪುಡಿ, 1/2 ಟೀ ಸ್ಪೂನ್ ಹುರಿದ ಸಾಸಿವೆ ಪುಡಿ.

**ತಯಾರಿಸುವ ವಿಧಾನ:**

ನುಗ್ಗೆಕಾಯಿಗಳನ್ನು ಚಿಕ್ಕ ಚಿಕ್ಕ ಹೋಳುಗಳಾಗಿ ಕತ್ತರಿಸಿಕೊಳ್ಳಿ. ಹುಣಸೆಹಣ್ಣನ್ನು ನೀರಿನಲ್ಲಿ ನೆನಸಿ ಚೆನ್ನಾಗಿ ಕಿವುಚಿ ರಸ ತೆಗೆದುಕೊಂಡು ಅದನ್ನು ಒಲೆಯ ಮೇಲೆ ಕುದಿಯಲು ಇಡಿ. ಕುದ್ದು ಗೊಜ್ಜಿನ ತರಹ ಆದಾಗ ಕೆಳಗಿಳಿಸಿ, ನಂತರ ಒಲೆಯ ಮೇಲೆ ಬಾಣಲೆ ಇಟ್ಟು ಎಣ್ಣೆ ಕಾಯಿಸಿ ನುಗ್ಗೆಹೋಳುಗಳನ್ನು ಎಣ್ಣೆಯಲ್ಲಿ ಹಾಕಿ, ಹೊಂಬಣ್ಣ ಬರುವವರೆಗೆ ಕರಿದು ಒಂದು ತಟ್ಟೆಯಲ್ಲಿ ತೆಗೆದಿಡಿ. ಅದೇ ಎಣ್ಣೆಗೆ ಸಾಸಿವೆ, 2 ಒಣ ಮೆಣಸಿನಕಾಯಿ, ಕರಿಬೇವು, ಉದ್ದಿನಬೇಳೆ, ಕಡಲೆಬೇಳೆ, ಒಗ್ಗರಣೆ ಹಾಕಿ ಕೆಳಗಿಳಿಸಿ, ಎಲ್ಲವೂ ತಣ್ಣಗಾದ ನಂತರ ಈ ಒಗ್ಗರಣೆ ಹಾಕಿದ ಎಣ್ಣೆಗೆ ನುಗ್ಗೆಕಾಯಿ, ಹುಣಸೆಗೊಜ್ಜು, ಉಪ್ಪು, ಮೆಂತ್ಯಪುಡಿ, ಸಾಸಿವೆ ಪುಡಿ ಎಲ್ಲವನ್ನೂ ಕಲಸಿ ಒಂದು ಶುಚಿಯಾದ ಬಾಟಲಿಗೆ ತುಂಬಿಡಬೇಕು. ಇದು ತಿನ್ನಲು ರುಚಿ ಯಾಗಿರುವುದಲ್ಲದೆ ಅನ್ನಕ್ಕೂ ಕಲಸಿಕೊಳ್ಳಬಹುದು ಮತ್ತು ಒಂದು ತಿಂಗಳಾದರೂ ಕೆಡುವುದಿಲ್ಲ.

**– ಎಂ.ಎಸ್. ಸುಗಂಧಿನಿ**

## ಕಡ್ಲೆ ಹಿಟ್ಟಿನ ಟಾಫಿ

**ಬೇಕಾಗುವ ಸಾಮಗ್ರಿಗಳು**

1 ಕಪ್ ಕಡ್ಲೆಹಿಟ್ಟು
1 1/2 ಕಪ್ ಸಕ್ಕರೆ
1 ಕಪ್ ಹಾಲಿನ ಕೆನೆ
1/2 ಕಪ್ ನೀರು

**ಮಾಡುವ ವಿಧಾನ :** ಮೊದಲು ಒಂದು ಬಾಣಲೆಯಲ್ಲಿ ಈ ಎಲ್ಲವನ್ನೂ ಹಾಕಿ ಮಗುಚಬೇಕು. ಅಂದರೆ ಹಾಲಿನ ಕೆನೆ ಮತ್ತು ಹಿಟ್ಟು ಚೆನ್ನಾಗಿ ಹೊಂದಿಕೊಳ್ಳಬೇಕು. ನಂತರ ಗ್ಯಾಸ್ ಮೇಲೆ ಇಟ್ಟು ಚೆನ್ನಾಗಿ ಮಗುಚುತ್ತಾ ಇರಬೇಕು. ಅದು ಮುದ್ದೆಯಾಗಿ ಬುರುಗು ಬಂದ ಹಾಗೆ ನೊರೆ ನೊರೆ ಬರುತ್ತದೆ. ಆ ತಕ್ಷಣ ತುಪ್ಪ ಸವರಿದ ತಟ್ಟೆಗೆ ಹಾಕಿ ಬಿಸಿ ಇರುವಾಗಲೇ ಗೀಟು ಹಾಕಿಡಿ. ಇದು ಹಾಲಿನ ಕೆನೆಯಿಂದ ಮಾಡಿದ್ದರಿಂದ ತುಂಬಾ ರುಚಿಯಾಗಿ ಇನ್ನೊಂದು, ಮತ್ತೊಂದು ತಿನ್ನುವಂತೆ ಆಗುತ್ತದೆ.

## ಗೆಣಸಿನ ಹೋಳಿಗೆ

4–5 ದೊಡ್ಡ ಗೆಣಸು
1/4 ಕೆ.ಜಿ. ಬೆಲ್ಲ
1/4 ಕೆ.ಜಿ. ಮೈದಾಹಿಟ್ಟು
1 ಕಪ್ ಎಣ್ಣೆ
4–5 ಏಲಕ್ಕಿ, ಚಿಟಿಕೆ ಅರಿಸಿನ, ಚಿಟಿಕೆ ಉಪ್ಪು

**ಮಾಡುವ ವಿಧಾನ :** ಮೊದಲು ಗೆಣಸನ್ನು ಚೆನ್ನಾಗಿ ಬೇಯಿಸಿ ಬಿಸಿ ಇರುವಾಗಲೇ ಸಿಪ್ಪೆ ತೆಗೆದಿಟ್ಟುಕೊಳ್ಳಬೇಕು. ಒಂದು ಪಾತ್ರೆಗೆ ನೀರು ಹಾಕಿ ಅದಕ್ಕೆ ಅರಿಸಿನ, ಉಪ್ಪು, ಮೈದಾಹಿಟ್ಟು ಹಾಕಿ ಗಟ್ಟಿಯಾಗಿ ಕಲಸಿ ಕಣಕ ತಯಾರಿಸಿಟ್ಟುಕೊಳ್ಳಬೇಕು. ಕಣಕದ ಮೇಲೆ ಸ್ವಲ್ಪ ಎಣ್ಣೆ ಹಾಕಿ ಮುಚ್ಚಿಡಬೇಕು.

ಹೂರಣಕ್ಕೆ ಸಿಪ್ಪೆ ತೆಗೆದ ಗೆಣಸಿನೊಟ್ಟಿಗೆ ಬೆಲ್ಲ ಏಲಕ್ಕಿ ಹಾಕಿ ರುಬ್ಬಬೇಕು. ರುಬ್ಬುವಾಗ ನೀರು ಸೇರಿಸಬಾರದು. ಬೆಲ್ಲ ಹಾಕಿ ರುಬ್ಬುವಾಗ ನೀರಾಯಿತು ಅಂತ ಕಂಡು ಬಂದರೆ ಬಾಣಲೆಯಲ್ಲಿ ಹಾಕಿ 2 ನಿಮಿಷ ಮಗುಚಬೇಕು. ಮುದ್ದೆಯಾಗುತ್ತದೆ. ಸಣ್ಣ ಉಂಡೆ ಕಣಕದಲ್ಲಿ ಲಿಂಬೆ ಹಣ್ಣಿನ ಗಾತ್ರದ ಹೂರಣ ಹಾಕಿ ತೆಳುವಾಗಿ ತಟ್ಟಿಸಿ ದೋಸೆ ಹಂಚಿನಲ್ಲಿ ಎರಡು ಬದಿ ಕಾಯಿಸಿ ತೆಗೆಯಬೇಕು. ಬಿಸಿ ಬಿಸಿ ತುಂಬಾ ರುಚಿಯಾಗಿರುತ್ತದೆ. ಇದು ಒಳ್ಳೆ ಪೌಷ್ಟಿಕವೂ ಆಗಿರುತ್ತದೆ.

**–ನಿರ್ಮಲಾ ರಮೇಶ್**
ಬೆಂಗಳೂರು

# ದಾಂಡೇಲಿಯ ರಾಮಲೀಲಾ ಉತ್ಸವ



ದಾಂಡೇಲಿಯ 'ರಾಮಲೀಲಾ ಉತ್ಸವ'

ಭಾರತವು ಹಬ್ಬಗಳ ದೇಶವಾಗಿದೆ. ಈ ದೇಶದಲ್ಲಿರುವಷ್ಟು ಹಬ್ಬಗಳು ಬಹುಶಃ ಪ್ರಪಂಚದ ಇನ್ಯಾವ ದೇಶದಲ್ಲೂ ಇರಲಿಕ್ಕಿಲ್ಲ. ವರ್ಷದ ಪ್ರತಿಯೊಂದು ತಿಂಗಳಲ್ಲಿ ಒಂದಿಲ್ಲೊಂದು ಹಬ್ಬವು ಆಚರಿಸಲ್ಪಡುತ್ತದೆ. ಇವುಗಳಲ್ಲಿ ಕೆಲವು ಪ್ರಾಂತೀಯ ಹಬ್ಬಗಳಾಗಿ ಆಚರಿಸಲ್ಪಟ್ಟರೆ ಹಲವು ರಾಷ್ಟ್ರೀಯ ಮಟ್ಟದಲ್ಲಿ ಆಚರಿಸಲ್ಪಡುತ್ತವೆ.

ಹೀಗೆ ದೇಶದ ಉದ್ದಗಲಕ್ಕೂ ಪ್ರತಿಯೊಂದು ಪ್ರಾಂತದಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲೊಂದು ದಸರಾ ಅಥವಾ ವಿಜಯದಶಮಿ.

ಈ ಪರ್ವವು ಉತ್ತರ–ಕನ್ನಡ ಜಿಲ್ಲೆಯ ಔದ್ಯೋಗಿಕ ಕೇಂದ್ರವಾದ ದಾಂಡೇಲಿಯಲ್ಲಿ ವಿಶೇಷ ರೂಪದಲ್ಲಿ ಆಚರಿಸಲ್ಪಡುತ್ತದೆ. ಗೇಣುದ್ದ ಹೊಟ್ಟೆಯನ್ನು ತುಂಬಿಕೊಳ್ಳಲು ದೇಶದ ಮೂಲೆ, ಮೂಲೆಗಳಿಂದ ವಲಸೆ ಬಂದು ನೆಲೆಸಿದ ಈ ಜನಸಮೂಹದಲ್ಲಿ ದೇಶದ ಸರ್ವಭಾಷೆಯ ಮತ್ತು ಜಾತಿಯ ಜನರು ತಮ್ಮಲ್ಲಿಯ ಬೇಧಭಾವಗಳನ್ನು ಮರೆತು ಒಗ್ಗೂಡಿ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿ ತೋರಿಸುವಲ್ಲಿ ಯಶಸ್ವಿಯಾಗಿದ್ದು ದಾಂಡೇಲಿಯೊಂದು "ಮಿನಿ ಇಂಡಿಯಾ" ಆಗಿದೆ.

ಭಾರತೀಯರಲ್ಲಿ ಒಂದು ವಿಶೇಷವಾದ ಗುಣವಿದೆ. ಅವರು ಸ್ವದೇಶದಲ್ಲಿರಲಿ, ವಿದೇಶದಲ್ಲಿರಲಿ, ತಾವು ಎಲ್ಲಿ ವಲಸೆ ಹೋಗುತ್ತಾರೋ ಆ ನೆಲದ ವಾತಾವರಣಕ್ಕೆ ಹೊಂದಿಕೊಂಡು ಅಲ್ಲಿ ತಮ್ಮ ಸಂಪ್ರದಾಯವನ್ನು, ತಮ್ಮಲ್ಲಿರುವ ಕಲೆಯನ್ನು ಆ ನೆಲದಲ್ಲಿ ಹದಗೊಳಿಸಿ ತಮ್ಮ ವಿಶೇಷ ಗುಣಗಳ ಆಳವಾದ ಬೇರುಗಳನ್ನು ಬಿಟ್ಟು ತಮ್ಮ ವಾತಾವರಣವನ್ನೂ ಪಸರಿಸುವಲ್ಲಿ ಎತ್ತಿದ ಕೈ ಇವರದು.



ಅಶೋಕವನದಲ್ಲಿಯ ಸೀತಾಮಾತೆ



ರಾವಣನ ಪ್ರತಿಕೃತಿ, ಅವನೆದುರು ಮುಕಾಲು ಧರಿಸಿದ ಪಾತ್ರಧಾರಿಗಳು

ಇಂಥಾ ವಿಶೇಷ ಗುಣವನ್ನು ಹೊಂದಿದ ಭಾರತೀಯರಾದ ಮಾರವಾಡಿಗಳು ದಾಂಡೇಲಿಯ ಪರಿಸರದಲ್ಲಿ ಕಾಗದ ತಯಾರಿಸಲು ಸಿಗುವ ಕಚ್ಚಾ ವಸ್ತುಗಳ ಲಾಭ ಪಡೆದು ಧನಿಕರಾಗುವ ಶ್ರೀಮಂತ ಕನಸುಗಳೊಂದಿಗೆ ಸುಮಾರು ಮೂವತ್ನಾಲ್ಕು (34) ವರ್ಷಗಳ ಹಿಂದೆ ದಾಂಡೇಲಿಗೆ ಬಂದರು. ಇವರ ಒಡೆತನದಲ್ಲಿ ಕಾಗದ ಕಾರ್ಖಾನೆಯು ಪ್ರಾರಂಭವಾದಂತೆ ಉತ್ತರದ ಕಡೆಯ ಭಾರತೀಯರು ತಂಡೋಪತಂಡವಾಗಿ ಈ ಕಾಗದ ಕಾರ್ಖಾನೆಗೆ ದುಡಿಯಲು ಪ್ರಾರಂಭಿಸಿದ

ಕಾರಣ ಖಂಗೂರ ನಗರವು ಉತ್ತರದ ಕಡೆಯುವರ ಹಿಂದೀ ನಗರವಾಗಿಬಿಟ್ಟದೆ.

ದುಡಿಯಲು ಬಂದ ಈ ಶ್ರಮಿಕ ವರ್ಗವು ಮರ್‍ಯಾದಾ ಪುರುಷೋತ್ತಮನಾದ ಶ್ರೀರಾಮನ ಪರಮ ಭಕ್ತರಾದ್ದರಿಂದ ತಮ್ಮ ಆರಾಧ್ಯ ದೇವತೆಯ ಭವ್ಯವಾದ ದೇವಸ್ಥಾನ ನಿರ್ಮಾಣ ಮಾಡುವುದರೊಂದಿಗೆ ರಾಮ ನಿಗಾಗಿ ತಮ್ಮಲ್ಲಿರುವ ಅಪಾರ ಭಕ್ತಿಯ ಪ್ರದರ್ಶನ ಮಾಡಲು ರಾಮಲೀಲಾ ಉತ್ಸವದ ಜೊತೆಗೆ ಕನ್ನಡ ನೆಲದಲ್ಲಿ ತಮ್ಮ ಭಕ್ತಿಯ ಬೀಜ ಬಿತ್ತುವಲ್ಲಿ ಪೂರ್ಣ ಯಶಸ್ವಿಯಾದರು. ಇವರ ಉತ್ಸಾಹಕ್ಕೆ ಕಾರ್ಖಾನೆಯ ಆಡಳಿತ ವರ್ಗವು ಅಷ್ಟೇ ತನು–ಮನ–ಧನದಿಂದ ಪ್ರೋತ್ಸಾಹ ನೀಡಿದ್ದರಿಂದ 1960ರಲ್ಲಿ ಪ್ರಥಮ ಬಾರಿಗೆ ಅಭಯಾರಣ್ಯದಲ್ಲಿ ರಾಮಲೀಲಾ ವಿಜೃಂಭಣೆ ಯಿಂದ ಆಚರಿಸಲ್ಪಟ್ಟಿತು. ಹೀಗೆ ಅಂದಿನಿಂದ ಇಂದಿ ನವರೆಗೆ ಕಳೆದ ಮೂವತ್ತೊಂದು ವರ್ಷಗಳಿಂದ ಸುಪಳಿ ರೂಪದಲ್ಲಿ ರಾಮಲೀಲಾ ಉತ್ಸವ ಆಚರಿಸುತ್ತ ಬಂದಿದೆ.

ಈ ರಾಮಲೀಲಾ ಉತ್ಸವವು ದೇಶದ ರಾಜ ಧಾನಿಯಾದ ದಿಲ್ಲಿ ಅಲ್ಲದೆ ಉತ್ತರ ಭಾರತದ ಕೆಲವು ರಾಜ್ಯಗಳಲ್ಲಿ ಬಹು ಸಡಗರದಿಂದ ಆಚರಿಸಲ್ಪಡುತ್ತದೆ. ಆದರೂ ದಾಂಡೇಲಿಯಲ್ಲಿ ಆಚರಿಸಲ್ಪಡುವ ಈ ಉತ್ಸವವು ದಕ್ಷಿಣ ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ತನ್ನದೇ ಆದ ಒಂದು ವಿಶಿಷ್ಟವಾದ ಮಹತ್ವದ ಸ್ಥಾನ ಹೊಂದಿದೆ.

ರಾಮಲೀಲಾ ಉತ್ಸವವು ಆಚರಿಸಲ್ಪಡುವದು ಅಸತ್ಯದ ಮೇಲೆ ಸತ್ಯದ ವಿಜಯವಾದ ವಿಜಯ ದಶಮಿಯ ದಿನದಂದು. ಹಿಂದುಗಳ ಪವಿತ್ರ ಗ್ರಂಥ ಗಳಲ್ಲೊಂದಾದ ರಾಮಾಯಣದ ನಾಯಕನಾದ ಶ್ರೀ ರಾಮಚಂದ್ರ ಹತ್ತು ತಲೆಯ ರಾವಣನನ್ನು ವಧಿಸಿ ಸತ್ಯಕ್ಕೆ ಎಂದೂ ಜಯ ತಪ್ಪಿದ್ದಲ್ಲಾ ಎಂದು ಸಾರಿ ಹೇಳುವ ಉತ್ಸವ ರಾಮಲೀಲಾ.

ವಿಜಯದಶಮಿಯ ತಿಂಗಳ ಪೂರ್ವವೇ ದಾಂಡೇ ಲಿಯಲ್ಲಿ ರಾಮಲೀಲಾದ ಸಿದ್ಧತೆ ನಡೆಯಲಾರಂಭಿ ಸಿರುತ್ತದೆ. ರಾವಣ ಪ್ರತಿಕೃತಿ ತಯಾರಿಸುವ ಜೊತೆ–ಜೊತೆಗೆ ಕುಂಭಕರ್ಣ ಹಾಗೂ ಇಂದ್ರಜಿತು (ಮೇಘ ನಾದ)ರ ಬೆಟ್ಟದ ಗಾತ್ರದ ಪ್ರತಿಕೃತಿಯನ್ನು ದಾಂಡೇಲಿ ಯವರೇ ತಯಾರಿಸುತ್ತಾರೆ. ಬಿದಿರು, ಚಾಪೆ, ಕಾಗದ, ಬಟ್ಟೆ, ಬಣ್ಣ ಮತ್ತು ಸಿಡಿಮದ್ದುಗಳಿಂದ ಈ ಅಸುರರನ್ನು ತಯಾರಿಸುತ್ತಾರೆ. ಬಾಣ–ಬಿಲ್ಲು, ಖಡ್ಗ, ಗುರಾಣಿಗಳನ್ನು ಹಿಡಿದು ಕಿರೀಟ ಭುಜಕೀರ್ತಿಗಳನ್ನು ಹೊತ್ತ ವರ್ಣ ಮಯವಾದ ಪ್ರತಿಕೃತಿಗಳು, ಕಲಾಕಾರನ ಕಲೆಯ ಜೀವಂತ ಸಾಕ್ಷಿಯಾಗಿರುವ ಇವುಗಳ ಎತ್ತರ 30 ರಿಂದ 35 ಅಡಿಗಳು.

ಖಂಗೂರ ನಗರದಲ್ಲಿರುವ ಶ್ರೀರಾಮ ಮಂದಿರ ದಿಂದ 'ದಸರಾ' ದಿನ ನಾಲ್ಕು ಗಂಟೆಗೆ ರಾಮ–ಲಕ್ಷ್ಮಣ, ಸೀತೆ, ಹನುಮಂತ ಹಾಗೂ ರಾಕ್ಷಸ ಪಾತ್ರಧಾರಿಗಳೊಂದಿಗೆ ದೇವತೆಗಳ ಉತ್ಸವ ಮೂರ್ತಿ ಗಳೊಡನೆ ಹೊರಡುವ ಮೆರವಣಿಗೆಯು ರಾಮಾಯಣದ ಪ್ರಮುಖ ದೃಶ್ಯಗಳನ್ನೂ ಪ್ರದರ್ಶಿಸುವುದು. ಸುಮಾರು ನಾಲ್ಕು–ಐದು ತಾಸುಗಳ ತರುವಾಯ ಈ ಮೆರವ ಣಿಗೆಯು ರಾಕ್ಷಸ ಪ್ರತಿಕೃತಿಗಳನ್ನು ನಿರ್ಮಿಸಲಾದ ಆಟದ ಮೈದಾನಕ್ಕೆ ತಲುಪುವಷ್ಟರಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಪ್ರೇಕ್ಷಕ ಸಮೂಹವು ಮೈದಾನದಲ್ಲಿ ಎದುರಿನ ಸ್ಥಾನ ಗ್ರಹಿಸುವಲ್ಲಿ ಸ್ಪರ್ಧೆ ನಡೆಸುವರು. ದಾಂಡೇಲಿಯಲ್ಲದೆ ಸುತ್ತ ಮುತ್ತಲಿನ 100 ಕಿ.ಮೀ. ಕ್ಕಿಂತಲೂ ದೂರವಿರುವ ಊರುಗಳಿಂದ ಪರಜಿಲ್ಲೆ ಗಳಿಂದಲೂ ಅಸಂಖ್ಯಾತ ಪ್ರೇಕ್ಷಕರು ಈ ಮನ ಮೋಹಕವಾದ ದೃಶ್ಯದ ಸವಿಯನ್ನು ಸವಿಯಲು ಬಂದಿರುತ್ತಾರೆ.

ವರ್ಣಮಯ ಸಿಡಿಮದ್ದುಗಳ ಗಗನಚುಂಬಿ ದೃಶ್ಯಗಳು ರಾಮಲೀಲಾದ ಇನ್ನೊಂದು ಮಹತ್ವದ ಅಂಗ ಬಣ್ಣ, ಬಣ್ಣದ ಸಿಡಿಮದ್ದಿನ ಪ್ರದರ್ಶನ, ಸಂಜೆಯ ಕತ್ತಲೆ ಆವರಿಸಿದಂತೆ ನೀಲಾಕಾಶದಲ್ಲಿ ಹಾಲು ಬೆಳಗಿನ ಬೆಳಕು ಚೆಲ್ಲುವ ಪೂರ್ಣಚಂದ್ರನ ಆಗಮನವಾದಂತೆ ಸಿಡಿಮದ್ದಿನ ಬಾಣಬಿರುಸುಗಳು ಆಗಸವನ್ನು ಚುಂಬಿಸಲು ಹೋಗುವಂತಹ ವರ್ಣ ಮಯವಾದ ದೃಶ್ಯಗಳು ಆಗಸದಲ್ಲಿ ಬಣ್ಣಬಣ್ಣದ ಸಿಡಿಮದ್ದು ಹೂವಿನಂತೆ ಅರಳಿದಾಗ ಚಂದ್ರನನ್ನೂ ಇನ್ನೂ ಸುಶೋಭಿಸುವ ಜೊತೆಗೆ ನೋಡುವವರು ಆಗಸದತ್ತವೇ ನೋಡುವಂತೆ ಮಾಡುವ ಆ ಚಿತ್ತಾಕರ್ಷಕ ದೃಶ್ಯಗಳು ಸಿಡಿಮದ್ದು ತಯಾರಿಸುವವರಲ್ಲ. ಪೈಪೋಟಿ ಇರುವದರಿಂದ ಈ ಕಾರ್ಯಕ್ರಮವು ಇನ್ನೂ ಜನಾ ಕರ್ಷಕವಾಗಿರುವುದು.

ಕಾರ್ಯಕ್ರಮದ ಕೊನೆಯಲ್ಲಿ ರಾಮನ ಪಾತ್ರಧಾರಿ ರಾವಣನ ಪ್ರತಿಕೃತಿಗೆ ಶರಪ್ರಯೋಗ ಮಾಡಿದಾಗ 'ದೈತ್ಯ'ರಿಗೆ ಅಗ್ನಿಸ್ಪರ್ಶ ಮಾಡಲಾಗುತ್ತದೆ. ಒಡಲ ತುಂಬೆಲ್ಲ ಸಿಡಿಮದ್ದನ್ನು ತುಂಬಿಕೊಂಡ ರಾಕ್ಷಸರ ಪ್ರತಿಕೃತಿಗಳು ಭೀಕರ ಸದ್ದು ಮಾಡುತ್ತ ಬೆಂಕಿಯುಗುಳುತ್ತ ಸುಟ್ಟು ಬೂದಿಯಾಗುತ್ತವೆ. ಈ ದೃಶ್ಯವು ಅಷ್ಟೇ ಭಯಂಕರ ಹಾಗೂ ಮೋಹಕವಾಗಿದ್ದು ನೋಡುತ್ತ ಇದ್ದಂತೆ ಬೆಂಕಿಯ ಜ್ವಾಲೆಯು ಆಕಾಶದತ್ತ ಕೈಚಾಚುತ್ತದೆ.

ರಾಮಸೀತೆಯ ಮೆರವಣಿಗೆ ಪುನಃ ರಾಮಮಂದಿರ ತಲುಪುವುದರೊಂದಿಗೆ ರಾಮಲೀಲಾ ಉತ್ಸವವು ಕೊನೆಗೊಳ್ಳುವುದು.

ದಾಂಡೇಲಿ ಹಾಗೂ ಸುತ್ತಮುತ್ತಿನವರಿಗೆ 'ರಾವಣ ದಹನ'ವೆಂದೇ ಚಿರಪರಿಚಿತವಾಗಿರುವ ರಾಮಲೀಲಾ ವರ್ಷಗಳು ಉರುಳಿದಂತೆ ತನ್ನ ಪ್ರಖ್ಯಾತಿಯನ್ನು ಅಕ್ಕಪಕ್ಕದ ಜಿಲ್ಲೆಗಳಿಗೂ ಹಬ್ಬಿರುವುದರಿಂದ ಈ ಉತ್ಸವದ ಒಂದೆರಡು ದಿನಗಳ ಮೊದಲೇ ದಾಂಡೇಲಿ ಯಲ್ಲಿ ಹೊಸ ಮುಖಗಳು ಕಾಣಲು ಪ್ರಾರಂಭ ವಾಗುತ್ತವೆ. ಈ ಮನಾಕರ್ಷಕ ರಂಗುರಂಗಿನ ಸಿಡಿಮದ್ದಿನ ಕಾರ್ಯಕ್ರಮವನ್ನು 50,000 ಕ್ಕಿಂತಲೂ ಹೆಚ್ಚು ಜನ ವೀಕ್ಷಿಸುವರೆಂಬುವದು ಒಂದು ಅಂದಾಜು. ಬರಬರುತ್ತ ಪ್ರೇಕ್ಷಕರ ಸಂಖ್ಯೆಯು ದಟ್ಟವಾಗಿ ಬೆಳೆಯುತ್ತಿರುವುದು ಈ ಕಾರ್ಯಕ್ರಮಕ್ಕೆ ಇನ್ನೊಂದು ಮೆರುಗು.

ಕಳೆದ 32 ವರ್ಷಗಳಿಂದ ಈ ಕಾರ್ಯಕ್ರಮವನ್ನು ಸುವ್ಯವಸ್ಥಿತವಾಗಿ ದಾಂಡೇಲಿ ಕಾಗದ ಕಾರ್ಖಾನೆಯು ನಡೆಸಿಕೊಂಡು ಬಂದು ನೋಡಲು ಬರುವ ಪ್ರೇಕ್ಷಕರಿಗೆ ಸರ್ವ ರೀತಿಯ ಅನುಕೂಲತೆಯನ್ನು ಒದಗಿಸುವ ಜೊತೆಗೆ ಈ ಕಾರ್ಯಕ್ರಮಕ್ಕೆ ತಗಲುವ ಸುಮಾರು 50,000 ರೂ. ವೆಚ್ಚವನ್ನು ಭರಿಸಿಕೊಳ್ಳುತ್ತದೆ.

ಹೀಗೆ ದಾಂಡೇಲಿ ಇಂದು ಧಾರ್ಮಿಕ ಉತ್ಸವ ಗಳಿಂದಲೂ ದೇಶದ ನಕಾಶೆಯಲ್ಲಿ ದಪ್ಪಾಕ್ಷರಗಳಿಂದ ಗುರುತಿಸಲ್ಪಟ್ಟಿದೆ ಎಂಬುವುದು ಹೆಮ್ಮೆಯ ವಿಷಯ.

ಸುನೀತಾ ರಜಪೂತ.

ವನಿತಾ

## ನವದಂಪತಿಗಳು

ಇದೊಂದು ಹೊಸ ಶೀರ್ಷಿಕೆ. ವಿವಾಹ ಜೀವನದಲ್ಲಿ ಅವಿಸ್ಮರಣೀಯ ಘಟನೆ. ವಿವಾಹ ದಿನವನ್ನು ಅದ್ದೂರಿಯಾಗಲ್ಲದಿದ್ದರೂ ಸರಳವಾಗಿ ಆಚರಿಸುವುದೂ ಉಂಟು. ಅದರಲ್ಲೂ ಪ್ರಥಮ ವಾರ್ಷಿಕೋತ್ಸವಕ್ಕೆ ಹೆಚ್ಚಿನ ಹುರುಪಿರುತ್ತದೆ. ಅದನ್ನು "ವನಿತಾ" ಜೊತೆಗೆ ನೀವು ಹಂಚಿಕೊಳ್ಳಬಹುದು. ಮಾಡಬೇಕಾದುದೂ ಇಷ್ಟೇ. ದಂಪತಿಗಳ ಕ್ವಾರ್ಟರ್ ಸೈಜ್ (3'' X 4'') ಬಣ್ಣದ ಭಾವಚಿತ್ರವನ್ನು ಕಳಿಸಿ. ಅದರೊಂದಿಗೆ ವಧುವಿನ ಕಡೆಯಿಂದ ಮುದ್ರಿಸಲಾದ "ಮದುವೆಯ ಕರೆಯೋಲೆ"ಯನ್ನು ಲಗತ್ತಿಸಿರಬೇಕು. ಜೊತೆಗೆ ವಧುವರರಾಗಲೀ, ಅಥವಾ ಅವರ ಮನೆಯ ಹಿರಿಯರಾಗಲೀ ಈ ಚಿತ್ರವನ್ನು 'ವನಿತಾ'ದಲ್ಲಿ ಪ್ರಕಟಿಸಲು ತಾವು ಕಳಿಸುತ್ತಿದ್ದೇವೆಂದು ಸ್ವಹಸ್ತಾಕ್ಷರದಿಂದ ಬರೆದು ಸಹಿ ಹಾಕಿದ ಪತ್ರವೂ ಅಗತ್ಯ. ವಧೂ–ವರರ ತಾಯಿ–ತಂದೆಯರ ಹೆಸರುಗಳನ್ನು ತಿಳಿಸಬೇಕು.

ವಿ.ಸೂಚನೆ :

- ಬಣ್ಣದ ಭಾವಚಿತ್ರಗಳನ್ನೇ ಕಳಿಸಬೇಕು.
- ಮದುವೆಯ ಕರೆಯೋಲೆ, ಅದರೊಂದಿಗೆ ಸಹಿ ಹಾಕಿದ ಪತ್ರಗಳನ್ನು ಲಗತ್ತಿಸಿರದ ಭಾವಚಿತ್ರಗಳನ್ನು ಪ್ರಕಟಪಡಿಸಲಾಗುವುದಿಲ್ಲ.
- ಯಾವ ತಿಂಗಳು ವಿವಾಹದ ಪ್ರಥಮ ವಾರ್ಷಿಕೋತ್ಸವ ಬರುತ್ತದೆಯೋ ಅದರ ಹಿಂದಿನ ತಿಂಗಳು 1ನೇ ದಿನಾಂಕದ ಒಳಗೆ ನಮಗೆ ತಲುಪುವಂತೆ ಕಳಿಸಬೇಕು. ಮದುವೆಯಾಗಿ ಒಂದು ವರ್ಷವಾಗಲಿರುವ ದಂಪತಿಗಳ ಪ್ರಥಮ ವಿವಾಹ ವಾರ್ಷಿಕೋತ್ಸವಕ್ಕೆ ಮಾತ್ರ ಈ ಶೀರ್ಷಿಕೆ ಮೀಸಲು.
- ಆಯ್ಕೆಯಾಗಿದ ಚಿತ್ರಗಳನ್ನು ಹಿಂದಿರುಗಿಸಲಾಗುವುದಿಲ್ಲ.
- ಈ ವಿಷಯದಲ್ಲಿ ಸಂಪಾದಕ ವರ್ಗದ ತೀರ್ಮಾನವೇ ಅಂತಿಮ. ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ.

ಭಾವಚಿತ್ರಗಳನ್ನು ಕಳಿಸುವ ಸ್ಥಳ :

ವನಿತಾ

ಡಾಲ್ಟನ್ ಪಬ್ಲಿಕೇಷನ್ಸ್, ಚಂದಮಾಮ ಬಿಲ್ಡಿಂಗ್ಸ್,
ವಡಪಳನಿ, ಮದರಾಸು – 600 026.

# ಸಾಧನೆ



—ಸಿ. ಎನ್. ಮುಕ್ತಾ

ಅವನು ಸಂಪಿಗೆ ಹಳ್ಳಿಯಲ್ಲಿ ಇಳಿದಾಗ ಬೆಳಗ್ಗೆ 11 ಗಂಟೆ ಸಮಯ. ಅವನಿಗೆ ಬಸ್ಸಿನಿಂದ ಇಳಿದೊಡನೆ ಹಳ್ಳಿ ತುಂಬಾ ಬದಲಾಯಿಸಿದೆ ಎನ್ನಿಸಿತು. ಹಿಂದೆ ಬಸ್‌ಸ್ಟಾಂಡ್ ಬಳಿ ಇಷ್ಟೊಂದು ಅಂಗಡಿಗಳಿರಲಿಲ್ಲ. ನಾಲ್ಕೈದು ಹೊಸ ಕಟ್ಟಡಗಳೂ ಕಾಣಿಸಿದುವು. ಅವನು 10–12 ವರ್ಷಗಳ ಹಿಂದೆ ಒಮ್ಮೆ ದೊಡ್ಡಮ್ಮನ ಜೊತೆ ಅಲ್ಲಿಗೆ ಬಂದಿದ್ದ. ಆಗವನು ಪ್ರೌಢಶಾಲೆಯಲ್ಲಿದ್ದ. ಊರಿನ ಬಳಿ ಇದ್ದ ಹೊಳೆ, ತೆಂಗು ಹಾಗೂ ಮಾವಿನ ತೋಟಗಳು ಅವನನ್ನು ಆಕರ್ಷಿಸಿದ್ದುವು. ಅದಕ್ಕೆ ಸರಿಯಾಗಿ ಅಕ್ಕ–ಪಕ್ಕದ ಮನೆಯ ಹುಡುಗರು ಅವನ ಸ್ನೇಹಿತರು ತಮ್ಮ ಊರನ್ನು ಉತ್ಸಾಹದಿಂದ ತೋರಿಸಿದ್ದರು. ಆಗಲೇ ಅವನು ಈಜು ಕಲಿತಿದ್ದು. ದೊಡ್ಡಮ್ಮ ಮಾತ್ರ ಅವನ ಚೇಷ್ಟೆ ಕಂಡು ಹೌಹಾರಿದ್ದರು.

"ಭಾಸ್ಕರ ಈಜಕ್ಕೆ ಹೋಗಬೇಡವೋ ಏನಾದ್ರು ಹೆಚ್ಚು ಕಡಿಮೆಯಾದ್ರೆ ನಾನು ನಿಮ್ಮಪ್ಪಂಗೆ ಏನು ಉತ್ತರ ಹೇಳಲಿ?"

ಒಟ್ಟಿನಲ್ಲಿ ಹಳ್ಳಿಯಲ್ಲಿ ಕಳೆದ ದಿನಗಳು ಅವನಿಗೆ ಖುಷಿ ಕೊಟ್ಟಿದ್ದವು. ಅವನು ಮೈಸೂರಿಗೆ ಹಿಂದಿರುಗುವ ವೇಳೆಗೆ ಅವನ ತಂದೆಗೆ ಬಳ್ಳಾರಿಗೆ ವರ್ಗವಾಗಿತ್ತು. ಅವನು ಪಿ.ಯು.ಸಿ. ಮುಗಿಸಿ, ಸುರತ್ಕಲ್‌ನಲ್ಲಿ ಬಿ.ಇ. ಮುಗಿಸಿ, ಬಾಂಬೆಯಲ್ಲಿ ಕೆಲಸಕ್ಕೆ ಸೇರಿದ್ದ. ಆಗಲೇ ಅವನಲ್ಲಿ ಸುಪ್ತವಾಗಿದ್ದ ಪ್ರತಿಭೆ ಅರಳತೊಡಗಿತ್ತು. ಮೊದಮೊದಲು ಕಥೆ–ಕವನ ಬರೆಯುತ್ತಿದ್ದವನು ಇತ್ತೀಚೆಗೆ ಕಾದಂಬರಿ ಬರೆಯಲಾರಂಭಿಸಿದ್ದ. ಅವನ ಬರವಣಿಗೆ ಜನಪ್ರಿಯವಾಗಿತ್ತು. ಅವನಿಗೆ ಸಂಗೀತಕ್ಕಾಗಿ ತನ್ನ ಜೀವನ ಧಾರೆ ಎರೆದ ವ್ಯಕ್ತಿಯೊಬ್ಬನ ಬಗ್ಗೆ ಕಾದಂಬರಿ ಬರೆಯಬೇಕೆಂಬ ಹಂಬಲ ಮೂಡಿತ್ತು. ಆಗ ಅಕಸ್ಮಾತ್ ಅವನ ತಂದೆಯ ಗೆಳೆಯರೊಬ್ಬರು ಬಳ್ಳಾರಿಯಲ್ಲಿ ಭೇಟಿಯಾಗಿ ಹೇಳಿದ್ದರು. "ನಿಮ್ಮ ದೊಡ್ಡಪ್ಪನಿಗಿಂತ ಸಂಗೀತಗಾರರು ಬೇಕೇನಪ್ಪಾ? ಶ್ಯಾಮಾಶಾಸ್ತ್ರಿಗಳು ಅದ್ಭುತ ಸಂಗೀತಗಾರರು. ಅವರು ಹಾಡುತ್ತಿದ್ದರೆ ಸಮಯ ಕಳೆಯುತ್ತಿದ್ದುದೇ ತಿಳಿಯುತ್ತಿರಲಿಲ್ಲ. ಅವರ ಮನೆ ಸಂಗೀತಪ್ರಿಯರಿಗೆ ಸ್ವರ್ಗವಾಗಿತ್ತು. ದಸರಾದಲ್ಲಿ ಅವರ ಕಚೇರಿಯಿಲ್ಲದೆ ಯಾವ ಕಾರ್ಯಕ್ರಮಗಳೂ ಪೂರ್ಣವಾಗುತ್ತಿರಲಿಲ್ಲ. ಅವರು ಅದೆಷ್ಟು ಮಂದಿಗೆ ಆಶ್ರಯ ಕೊಟ್ಟಿದ್ದರು ಗೊತ್ತಾ? ಅವರಿಗೆ ಹಾಡುವುದರ ಜೊತೆ ವೀಣೆ, ಪಿಟೀಲು, ಕೊಳಲು ನುಡಿಸೋದು ಗೊತ್ತಿತ್ತು. ಶ್ರೀಮಂತಿಕೆಯ ಜೊತೆ ದೇವರು ಅವರಿಗೆ ಶ್ರೀಮಂತ ಹೃದಯವನ್ನೂ ಕೊಟ್ಟಿದ್ದ. ಲಕ್ಷ್ಮಿ–ಸರಸ್ವತಿ ಇಬ್ಬರೂ ಅವರಿಗೆ ಒಲಿದಿದ್ರು. ನೀನು ಅವರ ಮೇಲೆ ಪುಸ್ತಕ ಬರಿ''

ಅಂದಿನಿಂದ ಭಾಸ್ಕರನ ಮನಸ್ಸಿನಲ್ಲಿ ದೊಡ್ಡಪ್ಪನ ಬಗ್ಗೆ ಬರೆಯಬೇಕೆಂಬ ಬಯಕೆ ಹುಟ್ಟಿತ್ತು. ಅಂದು ರಾತ್ರಿ ಊಟ ಮಾಡುತ್ತಾ ಅವನು ತಾಯಿಯನ್ನು ಕೇಳಿದ್ದ "ಅಮ್ಮ ದೊಡ್ಡಪ್ಪನ ಬಗ್ಗೆ ನಿನಗೇನು ಗೊತ್ತಿದೆಯೋ ಹೇಳಮ್ಮ''

"ಅವರು ನಿಮ್ಮಪ್ಪನ ಅಣ್ಣ ಅನ್ನುವುದಷ್ಟೇ ನನಗೆ ಗೊತ್ತಿರೋದು. ನನಗೆ ಅವರನ್ನು ಕಂಡ್ರೆ ಭಯವಿತ್ತು. ಬಳ್ಳಾರಿಗೆ ಹೋದ ಮೇಲೆ ನಮಗೂ ಅವರಿಗೂ ಸಂಪರ್ಕಾನೇ ತಪ್ಪಿ ಹೋಯ್ತು''

"ಅಪ್ಪನಿಗೆ ಅವರ ವಿಚಾರ ಗೊತ್ತಿರಬಹುದಲ್ವಾ?''

''ಗೊತ್ತಿರಬಹುದೇನೋ? ಈಗ್ಯಾಕೆ ನಿನಗೆ ಅವರ ನೆನಪಾಯ್ತು?''

''ಅವರು ಖ್ಯಾತ ಸಂಗೀತಗಾರರಂತೆ, ಅವರ ಬಗ್ಗೆ ಬರೆಯೋಣಾಂತ..''

''ನಿನಗೆ ಮಾಡಕ್ಕೇನೂ ಕೆಲಸವಿಲ್ವಾ? ಅವರ ಬಗ್ಗೆ ಬರೆಯುವಂತಹದೇನಿದೆ? ನೀನು ಸುಮ್ನಿರು..''

''ಯಾಕಮ್ಮಾ ಹಾಗಂತೀಯಾ?''

ಅಮ್ಮ ಮಾತಾಡಿರಲಿಲ್ಲ. ಅಪ್ಪನಿಂದಲೂ ಪ್ರೋತ್ಸಾಹದಾಯಕ ಉತ್ತರ ಸಿಕ್ಕಿರಲಿಲ್ಲ.

''ಅಣ್ಣನ ಬಗ್ಗೆ ನನಗೆ ಹೆಚ್ಚು ತಿಳಿದಿಲ್ಲ ಭಾಸ್ಕರ. ಅವನು ಚಿಕ್ಕ ವಯಸ್ಸಿನಲ್ಲಿಯ ಮನೆ ಬಿಟ್ಟು ಹೋಗಿ, ನಾನು ಪಿ.ಯು.ಸಿಯಲ್ಲಿದ್ದಾಗ ವಾಪಸ್ಸು ಮನೆಗೆ ಬಂದ. ಆಗವನಿಗೆ 26–27 ವರ್ಷ. ಅವನನ್ನು ಸಂಗೀತಗಾರನನ್ನಾಗಿ ಮಾಡಿ, ಹೆಣ್ಣುಕೊಟ್ಟು ಕೈ ತುಂಬಾ ಹಣ ಕೊಟ್ಟು ಅವನ ಜೀವನಕ್ಕೆ ಒಂದು ಅರ್ಥ ಕೊಟ್ಟವರು ಅನಂತ ಶಾಸ್ತ್ರಿಗಳು. ಅವರಿಂದಾಗಲೀ ಅಥವಾ ನಿನ್ನ ದೊಡ್ಡಮ್ಮನಿಂದಾಗಲೀ ನಿನ್ನ ದೊಡ್ಡಪ್ಪನ ಬಗ್ಗೆ ತಿಳಿಯಬಹುದು''

''ದೊಡ್ಡಮ್ಮ ಎಲ್ಲಿರಬಹುದು?''

''ಮತ್ತೆಲ್ಲಿರ್ತಾರೆ? ಸಂಪಿಗೆ ಹಳ್ಳಿಯಲ್ಲಿ ಅಪ್ಪನ ಮನೆಯಲ್ಲಿರ್ತಾರೆ. ಬೇರೆ ಕಡೆಗೆ ಅವರು ಹೇಗೆ ಹೋಗ್ತಾರೆ? ಅವರಿಗೆ ಮಕ್ಕಳಿದ್ದಿದ್ರೆ ಅದೊಂದು ತರಹ''

''ನಾನೊಂದು ಹತ್ತು ದಿನ ರಜೆ ಹಾಕಿ ಸಂಪಿಗೆ ಹಳ್ಳಿಗೆ ಹೋಗಿ ಬರ್ತೀನಿ''

### ಜಗತ್ತಿನ ಅತ್ಯಂತ ದೊಡ್ಡ ಸೇತುವೆ

*ಪಾಟ್ನಾದಲ್ಲಿ ಗಂಗಾನದಿಯ ಮೇಲೆ ನಿರ್ಮಿಸಲಾದ ಮಹಾತ್ಮಾ ಗಾಂಧಿ ಸೇತುವೆ, ಜಗತ್ತಿನಲ್ಲಿ ನದಿಗಳ ಮೇಲೆ ನಿರ್ಮಿಸಲಾದ ಸೇತುವೆಗಳಲ್ಲಿ ಅತ್ಯಂತ ದೊಡ್ಡದಾಗಿದೆ. ಇದರ ಉದ್ದ 5.575 ಕಿ.ಮೀಟರ್. 300 ಮಿಲಿಯನ್ ರೂಪಾಯಿಗಳ ವೆಚ್ಚದಲ್ಲಿ ತಯಾರಾದ ಈ ಸೇತುವೆಗೆ 90,000 ಟನ್ ಸಿಮೆಂಟ್, 12,300 ಟನ್ ರೀಇನ್‌ಫೋರ್ಸ್‌ಮೆಂಟ್ ಮಾಡಿದ ಬಾರ್‌ಗಳು, 2,400 ಟನ್ ಲೈಟ್ ಟೆನ್ಸಿಲ್ ಉಕ್ಕು ಹಾಗು 3,300 ಟನ್ ಸ್ಟ್ರಕ್ಚರಲ್ ಸ್ಟೀಲ್ ಅನ್ನೂ ಬಳಸಲಾಯಿತು. 1982ರ ಮಾರ್ಚ್ 2ರಂದು ಈ ಸೇತುವೆಯನ್ನು ಉದ್ಘಾಟಿಸಲಾಯ್ತು.*

"ಯಾಕೆ?"

"ದೊಡ್ಡಮ್ಮನ್ನ ಮತ್ತು ಅವರ ತಂದೇನ ಭೇಟಿಯಾಗಿ ದೊಡ್ಡಪ್ಪನ ವಿಷಯ ಸಂಗ್ರಹಿಸಿಕೊಂಡು ಬರ್ತೇನೆ"

"ದೊಡ್ಡಪ್ಪನ ಬಗ್ಗೆ ಬರೆಯುವಂತಹದ್ದು ಏನಿದೆಯೋ ಭಾಸ್ಕರ?"

ಭಾಸ್ಕರ ಯಾರು ಏನಾದರೂ ಹೇಳಲಿ ಎಂದುಕೊಂಡು ಬಾಂಬೆ ಬಿಟ್ಟಿದ್ದ. ಬೆಂಗಳೂರಿನಲ್ಲಿ ತಂದೆಯ ತಂಗಿ ಪುಮಳಮ್ಮನ ಮನೆಯಲ್ಲಿ ತಂಗಿದ್ದ. ಅವನು ಬಂದ ಉದ್ದೇಶ ತಿಳಿದಾಗ ಪುಮಳಮ್ಮ ರಾಗ ತೆಗೆದಿದ್ದರು. "ಅಣ್ಣನ ಬಗ್ಗೆ ಕಾದಂಬರಿ ಬರೀತೀಯ? ಅವನ ಬಗ್ಗೆ ಏನು ಬರೆಯುತ್ತೀಯಾ ಬಿಡು"

"ಯಾಕತ್ತೆ ಹಾಗಂತೀಯಾ"

"ಶಾಮಣ್ಣ ನಾನು ಮಗುವಾಗಿದ್ದಾಗಲೇ ಮನೆ ಬಿಟ್ಟು ಹೋಗಿದ್ದನಂತೆ. ಅವನು ವಾಪಸ್ಸು ಬಂದಾಗ ನನಗೆ 10–11 ವರ್ಷ. ಅವನು ಶ್ರೀಮಂತರ ಮನೆ ಹುಡುಗಿ ಜೊತೆ ಮದುವೇನೂ ಆಯ್ತು. ಅವಳಿಗೆ ಶ್ರೀಮಂತಿಕೆಯ ಗತ್ತು. ಅಂತಹವಳ ಜೊತೆ ಅವನೇನು ಸಂಸಾರ ಮಾಡಕ್ಕೆ ಸಾಧ್ಯ? ಅವಳು ಅಡಿಗೆ ಕೂಡ ಮಾಡ್ತಿರಲಿಲ್ಲ. ಅಡಗೆ–ತಿಂಡಿ ಮಾಡಕ್ಕೆ ಮನೆ–ಕೆಲಸ ಮಾಡುವುದಕ್ಕೆ ಆಳುಕಾಳುಗಳಿದ್ರು. ಮದುವೆಯಾಗಿ ಬಗ್ತಿರುವ ಹಾಗೇ ಬೇರೆ ಮನೆ ಮಾಡಿಸಿದಳು. ಯಾರ ಕೈಲೂ ಸರಿಯಾಗಿ ಮಾತಾಡ್ತಿರಲಿಲ್ಲ. ಗಂಡನ ಬೇಕು ಬೇಡ ಗಮನಿಸ್ತಿರಲಿಲ್ಲ. ನಮ್ಮಪ್ಪ–ಅಮ್ಮ ಹೋದರೂ ಕೂಡ 'ನಾಲ್ಕು ದಿನ ಇರಿ' ಅಂತ ಹೇಳ್ತಿರಲಿಲ್ಲ. ಅಣ್ಣ ಏನೇನೋ ಕನಸು ಕಂಡಿದ್ದ. ಅವನ ಕನಸು ನನಸಾಗಲಿಲ್ಲ. ಅವನು ತನ್ನ ದುಃಖ ಮರೆಯುವುದಕ್ಕೆ ಸಂಗೀತ ಸಾಧನವಾಯ್ತು."

"ಹಾಗಾದರೆ ದೊಡ್ಡಮ್ಮ ದೊಡ್ಡಪ್ಪನಿಗೆ ತಕ್ಕ ಹೆಂಡತಿಯಾಗಿರಲಿಲ್ವಾ?"

"ಉಹುಂ, ಅಣ್ಣ ದಾಕ್ಷಿಣ್ಯಕ್ಕೆ ಕಟ್ಟು ಬಿದ್ದು ಅವಳನ್ನು ಮದುವೆಯಾಗಿ ಸಂಸಾರ ಹೂಡಿದ್ದ. ಅವಳಿಗೂ ಈ ಮದುವೆ ಇಷ್ಟವಿರಲಿಲ್ವೇನೋ? ಗಂಡನ ಬಗ್ಗೆ ಪ್ರೀತೀನೇ ಇರಲಿಲ್ಲ."

"ಅವರ ಸಹಕಾರ ಸಿಕ್ಕಿದ್ದಿದ್ರೆ ದೊಡ್ಡಪ್ಪ ಇನ್ನೂ ಖ್ಯಾತಿ ಗಳಿಸ್ತಿದ್ರೂ ಅಂತ ಕಾಣುತ್ತೆ"

"ಅದಕ್ಕೆಲ್ಲಾ ಅದೃಷ್ಟ ಬೇಡವೇ? ಹೆಂಡತಿಯಿಂದ ಅಣ್ಣನಿಗೆ ಯಾವ ರೀತಿಯ ಸುಖವೂ ಇರಲಿಲ್ಲ. ಮಕ್ಕಳಿದ್ದಿದ್ರ ಹೇಗೋ ಸರಿ ಹೋಗ್ತಿತ್ತು. ಆದರ ಆ ಪುಣ್ಯವೂ ಅಣ್ಣನಿಗಿರಲಿಲ್ಲ"

"ಅವರ ಮನೆಯ ತುಂಬಾ ಹುಡುಗರು ಇರ್ತಿದ್ರಂತೆ...."

"ಅಣ್ಣನಿಗೆ ವಿದ್ಯಾರ್ಥಿಗಳ ಬಗ್ಗೆ ತುಂಬಾ ಅಭಿಮಾನ. ತುಂಬಾ ಜನ ವಾರಾನ್ನಕ್ಕೆ ಬರ್ತಿದ್ರು. ಸಂಗೀತ ಕಲಿಯಲು ಬರುವ ಹುಡುಗರಿಗೆ ಅವರು ಆಶ್ರಯ ಕೊಡ್ತಿದ್ರು. ನನಗೆ ತಿಳಿದ ಹಾಗೆ ಪ್ರತಿ ವರ್ಷ 3–4 ಜನ ಹುಡುಗರು ಅವರ ಮನೆಯಲ್ಲೇ ಇರ್ತಿದ್ರು"

"ದೊಡ್ಡಮ್ಮನ ಹೆಸರು ಸೀತಾ ಅಲ್ಲವೇ?"

"ಹುಂ. ಅವರ ತಂದೆ ಸಂಪಿಗೆ ಹಳ್ಳಿಯ ಶ್ರೀಮಂತರು. ಅವರಿಗೆ ಸೀತಾ ಒಬ್ಬಳೇ ಮಗಳು. ಇರೋ ಆಸ್ತೀನೆಲ್ಲಾ ಮಗಳು ಅಳಿಯ ಮೊಮ್ಮಕ್ಕಳಿಗೆ ಅಂತಿದ್ರು. ಮೊಮ್ಮಕ್ಕಳನ್ನು ಕಾಣುವ ಪುಣ್ಯ ಇರಲಿಲ್ಲ ಅವರಿಗೆ. ಅಣ್ಣ ಹೃದಯಾಘಾತದಿಂದ ತೀರ್ಕೊಂಡ ಮೇಲೆ ಮಗಳನ್ನು ತಮ್ಮ ಹತ್ತಿರಾನೇ ಇಟ್ಕೊಂಡಿದಾರೇಂತ ತಿಳಿಯಿತು. ನೀನು ಹೋಗಿ ನೋಡು"

"ಆಯ್ತು ಅತ್ತೆ" ಎಂದಿದ್ದ ಭಾಸ್ಕರ.

ಅವನು ಮರುದಿನವೇ ಮೈಸೂರಿಗೆ ಬಂದು ತಂದೆಯ ಗೆಳೆಯರಾದ ಕೃಷ್ಣಪ್ಪನ ಮನೆಯಲ್ಲಿ ಇಳಿದಿದ್ದ. ಕೃಷ್ಣಪ್ಪನವರ ಎರಡನೆಯ ಮಗ ಸುಬ್ರಹ್ಮಣ್ಯನ ಜೊತೆ ಮೈಸೂರೆಲ್ಲಾ ಸುತ್ತಾಡಿದ್ದ. ಸುಬ್ರಹ್ಮಣ್ಯ ಸಾಹಿತ್ಯಾಭಿಮಾನಿ. ಅವನು ಬಂದಿರುವ ಉದ್ದೇಶ ತಿಳಿದಾಗ ಹೇಳಿದ "ನಮ್ಮ ದೊಡ್ಡತ್ತಿಗೆ ಶ್ಯಾಮಾಶಾಸ್ತ್ರಿಗಳ ಶಿಷ್ಯೆ. ಅವರಿಂದ ನಿಮಗೆ ಏನಾದ್ರೂ ಮಾಹಿತಿ ಸಿಗಬಹುದು"

ಸುಬ್ರಹ್ಮಣ್ಯನ ಅತ್ತಿಗೆ ಪದ್ಮ ಸರಿಯಾಗಿ ಉತ್ತರ ಕೊಟ್ಟಿರಲಿಲ್ಲ. "ನನಗೆ ಅವರ ಬಗ್ಗೆ ತುಂಬಾ ಭಯವಿತ್ತು. ಅವರು ತುಂಬಾ ಚೆನ್ನಾಗಿ ಹಾಡ್ತಿದ್ರು. ಆದರೆ ಶಿಷ್ಯರ ಜೊತೆ ಸಲಿಗೆಯಿಂದ ಮಾತಾಡ್ತಿರಲಿಲ್ಲ. ನಾನು ಅವರ ಹತ್ರ ನಾಲ್ಕು ವರ್ಷ ಸಂಗೀತ ಕಲಿತಿದ್ದೆ ನಿಜ. ಆದರೆ ಸೀತಮ್ಮ ನನಗೆ ಪರಿಚಯವಾಗಲೇ ಇಲ್ಲ. ಆಕೆ ಮನೆಬಿಟ್ಟು ಎಲ್ಲಿಗೂ ಬರ್ತಿರಲಿಲ್ಲ. ಗುರುಗಳು ತ್ಯಾಗರಾಜರ ಆರಾಧನೆಯನ್ನು ತುಂಬಾ ವಿಜೃಂಭಣೆಯಿಂದ ಮಾಡ್ತಿದ್ರು. ಆಗಲೂ ಆಕೆ ಹೊರಗೆ ಬರ್ತಿರಲಿಲ್ಲ. ಒಟ್ಟಿನಲ್ಲಿ ಅವರು ಗುರುಗಳಿಗೆ ಸರಿಯಾದ ಹೆಂಡತಿ ಅಲ್ಲಾಂತ ಎಲ್ಲರೂ ಹೇಳ್ತಿದ್ರು"

ಮರುದಿನವೇ ಅವನು ಸಂಪಿಗೆ ಹಳ್ಳಿಗೆ ಹೊರಟಿದ್ದ. ಸಂಪಿಗೆ ಹಳ್ಳಿ ಕೆ.ಆರ್. ನಗರದಿಂದ 10–12 ಕಿ.ಮೀ. ದೂರದಲ್ಲಿದ್ದ ಹಳ್ಳಿ. ಕೆ. ಆರ್. ನಗರದಲ್ಲಿ ಇಳಿದು ಅವನು ಬೇರೆಯ ಬಸ್ಸು ಹಿಡಿದಿದ್ದ. ಎದುರಿಗಿದ್ದ ಹೋಟೆಲ್‌ನಲ್ಲಿ ಕಾಫಿ ಹೀರುತ್ತಾ ಅವನು ಮಾಣಿಯನ್ನು ವಿಚಾರಿಸಿದ. "ಅನಂತ ಶಾಸ್ತ್ರಿಗಳ ಮನೆ ಎಲ್ಲಿದೇಂತ ಹೇಳ್ತೀರಾ?"

"ಅವರು ನಿಮಗೆ ನೆಂಟರಾ?"

"ಅವರು ನಮ್ಮ ತಂದೆಯ ಫ್ರೆಂಡ್. ನೋಡೋಣಾಂತ ಬಂದೆ...."

"ಹಾಗಾ? ಮುಂದಿನ ರಸ್ತೆಯಲ್ಲಿ ನೇರ ಹೋಗಿ. ಅಲ್ಲೊಂದು ಅರಳಿ ಕಟ್ಟೆಯಿದೆ. ಅಲ್ಲಿ ಎಡಕ್ಕೆ ತಿರುಗಿ. ರಾಮಮಂದಿರದ ಪಕ್ಕದ ಮನೆಯೆ ಶಾಸ್ತ್ರಿಗಳದು"

ಭಾಸ್ಕರ ಶಾಸ್ತ್ರಿಗಳ ಮನೆಗೆ ಬಂದಾಗ ಅವರು ಹಾಲಿನಲ್ಲಿದ್ದ ಉಯ್ಯಾಲೆಯ ಮೇಲೆ ಕುಳಿತು ಪೇಪರ್ ಓದುತ್ತಿದ್ದರು. ಅಪರಿಚಿತ ಯುವಕನನ್ನು ಕಂಡಾಗ ಅವರ ಹುಬ್ಬುಗಳು ಆಶ್ಚರ್ಯದಿಂದ ಮೇಲೇರಿದವು.

"ನಾನು ಅನಂತ ಶಾಸ್ತ್ರಿಗಳನ್ನು ನೋಡಬೇಕಿತ್ತು"

"ನಾನೇ ಅನಂತ ಶಾಸ್ತ್ರಿ. ಒಳಗೆ ಬನ್ನಿ.."

ಅವನು ಒಳಗೆ ಬಂದು ಕುರ್ಚಿಯಲ್ಲಿ ಕುಳಿತ.

"ನೀವ್ಯಾರೋ ತಿಳಿಯಲಿಲ್ಲ."

"ನನ್ನ ಹೆಸರು ಭಾಸ್ಕರ. ನಾನು ಶ್ಯಾಮಾಶಾಸ್ತ್ರಿಗಳ ತಮ್ಮನ ಮಗ"

"ಓ. ನೀವೆಲ್ಲಾ ಬೊಂಬಾಯಿಯಲ್ಲಿರುವವರಲ್ಲವೇ?"

"ಹೌದು. ನನಗೆ ಅಲ್ಲೇ ಕೆಲಸ."

"ನಿಮ್ತಾಯಿ–ತಂದೆ ಚೆನ್ನಾಗಿದ್ದೀರಾ?"

"ಹುಂ. ನಮ್ಮ ತಂದೆ ರಿಟೈರ್ ಆಗಿ ಐದು ವರ್ಷವಾಯ್ತು ಅಪ್ಪ–ಅಮ್ಮ ನನ್ನ ಜೊತೆಯಲ್ಲೇ ಇದ್ದಾರೆ"

"ನಾಗೂ.... ಪಾನಕ ತೊಗೊಂಡು ಬಾ"

ಶಾಸ್ತ್ರಿಗಳು ನಾಲ್ಕು ಸಲ ಗಟ್ಟಿಯಾಗಿ ಕೂಗಿದ ಮೇಲೆ ಮುಪ್ಪಿನ ಮುತ್ತೈದೆ ನಾಗಮ್ಮ ಪಾನಕ ತಂದರು.

"ನಾಗೂ ಈ ಹುಡುಗ ಸೀತೂ ಮೈದುನನ ಮಗ.."

ಆಕೆಗೆ ಕಿವಿ ಸರಿಯಾಗಿ ಕೇಳಿಸುತ್ತಿರಲಿಲ್ಲವೇನೋ? ಎರಡೆರಡು ಸಲ ಹೇಳಬೇಕಾಯ್ತು.

ಆಕೆ ಕಣ್ಣು ಹಿಗ್ಗಿಸಿ ಅವನನ್ನು ನೋಡಿದರು. ಕಣ್ಣಿನಿಂದ ಫಳಕ್ಕನೇ ನೀರು ಚಿಮ್ಮಿತು.

"ಮಗಳೇ ನಮ್ಮವಳಾಗಿ ಉಳಿಯಲಿಲ್ಲ. ಇವರೆಲ್ಲಾ ಯಾರು?" ಆಕೆ ಗೊಣಗುತ್ತಾ ಒಳಗೆ ನಡೆದರು.

"ತಾತ. ದೊಡ್ಡಮ್ಮ ಎಲ್ಲಿ?"

ಅವರು ಅವನನ್ನೇ ದಿಟ್ಟಿಸಿದರು. ಅವನ 'ತಾತ' ಎನ್ನುವ ಕರೆ ಅವರಿಗೆ ಅಪ್ಯಾಯಮಾನವಾಗಿ ಕಂಡಿತೇನೋ? ಸೀತಾಗೆ ಮಗ ಇದ್ದಿದ್ದರೆ ಹೀಗೆ ಇರುತ್ತಿದ್ದನೇನೋ, ಹೀಗೇ 'ತಾತಾ' ಎಂದು ಕರೆಯುತ್ತಿದ್ದನೇನೋ?' ಎಂದುಕೊಂಡರು.

"ತಾತ ದೊಡ್ಡಮ್ಮ ಎಲ್ಲಿ?"

ಆತ ಅವನ ಪ್ರಶ್ನೆ ಕಿವಿಗೆ ಬೀಳದವರಂತೆ ಕೇಳಿದರು "ನೀನೀಗ ನನ್ನನ್ನು ಹುಡುಕಿಕೊಂಡು ಹಳ್ಳಿಗೆ ಬರುವುದಕ್ಕೆ ಏನಪ್ಪಾ ಕಾರಣ?"

"ದೊಡ್ಡಪ್ಪನ ಬಗ್ಗೆ ಒಂದು ಕಾದಂಬರಿ ಬರೆಯೋಣಾಂತಿದ್ದೇನೆ. ದೊಡ್ಡಪ್ಪನ ಬಗ್ಗೆ ನಿಮಗೆ ಎಲ್ಲರಿಗಿಂತ ಹೆಚ್ಚಿಗೆ ಗೊತ್ತಿದೇಂತ ಎಲ್ಲರೂ ಹೇಳಿದರು. ಅದಕ್ಕೇ ನಿಮ್ಮನ್ನು ಕೇಳೋಣಾಂತ ಬಂದೆ"

"ನಿಮ್ಮ ದೊಡ್ಡಪ್ಪನ ಬಗ್ಗೆ ಕಾದಂಬರಿ ಬರೆಯುತ್ತೀಯಾ?" ಅವರು ಅದೊಂದು ವಿಧವಾಗಿ ಕೇಳಿದರು.

ಅವನು ಉತ್ತರ ಕೊಡುವಷ್ಟರಲ್ಲಿ ಅವರೇ ಹೇಳಿದರು. "ಬರಿ, ಬರಿ ಆತ ಕಾದಂಬರಿ ನಾಯಕ ಆಗಕ್ಕೆ ಸರಿಯಾಗಿದ್ದಾನೆ"

"ಹಾಗಾದ್ರೆ....."

"ಮೊದಲು ಊಟ ಮುಗಿಸಿ ವಿಶ್ರಾಂತಿ ತೊಗೋ. ಆಮೇಲೆ ಆ ವಿಚಾರ ಮಾತನಾಡೋಣ"

"ದೊಡ್ಡಮ್ಮ..."

"ನಿಮ್ಮ ದೊಡ್ಡಮ್ಮ ಕಣ್ಣು ಮುಚ್ಚಿ ಐದು ವರ್ಷವಾಯ್ತು"

"ಏನು?!"

ಆರು ತಲೆಮಾರುಗಳ ಕುಟುಂಬ

ಆರು ತಲೆಮಾರುಗಳು ಏಕೆ ಇನ್ನೂ ಹೆಚ್ಚು ತಲೆಮಾರುಗಳೂ ಇರಬಹುದು. ಆದರೆ ಒಂದೇ ಕುಟುಂಬದ ಆರು ತಲೆಮಾರಿನ ಹೆಣ್ಣು ಮಕ್ಕಳು ಒಂದು ವಿಶೇಷ ವಿಷಯ. ರಶ್ಮಿ ಗುಂಜಾರ್ ಆರನೆ ತಲೆಮಾರಿನ ಒಂದು ವರ್ಷ ವಯಸ್ಸಿನ ಹೆಣ್ಣು ಮಗು. ಆಕೆಯ ತಾಯಿ ಅನುಪಮಾ ಗುಂಜಾರ್‌ಗೆ 23 ವರ್ಷ ವಯಸ್ಸು. ರಶ್ಮಿಯ ಅಜ್ಜಿ ಜ್ಯೋತಿ ಡಿ. ಧವಳೆಯವರಿಗೆ 43 ವರ್ಷ ವಯಸ್ಸು. ಮುತ್ತಜ್ಜಿ ಶಕುಂತಲಾ ಪರಾಂಜಪೆಯವರಿಗೆ 61 ವರ್ಷ. ಅವರ ತಾಯಿ ಕಮಲಾಬಾಯಿ ಗೋಡಬೋಲೆ ಅವರಿಗೆ 79 ವರ್ಷ ವಯಸ್ಸು, ಇನ್ನೂ ಅತ್ಯಂತ ಹಿರಿಯರಾದ ಸೀತಾಬಾಯಿ ಬಿರಾಳ್ಕರ್ ಅವರಿಗೆ 95 ವರ್ಷ ವಯಸ್ಸು.

"ಆಶ್ಚರ್ಯವಾಗ್ತಿದೆಯಾ? ಅವಳು ಅಷ್ಟು ವರ್ಷ ಬದುಕಿದ್ದಿದ್ದೇ ಹೆಚ್ಚು...."

"ನೀವು ಯಾಕೆ ಈ ವಿಚಾರ ಯಾರಿಗೂ ತಿಳಿಸಲಿಲ್ಲ?"

"ವಿಷಯ ತಿಳಿಸುವುದಕ್ಕೆ ಅವಳ ಕಡೆಯವರೂಂತ ಯಾರಿದ್ದಾರಪ್ಪಾ?"

'ಗುಂಡುಕಲ್ಲಿನಂತೆ ತಾನು ಎದುರಿಗೇ ಕುಳಿತಿರುವಾಗ ಅವರು ಇಂತಹ ಪ್ರಶ್ನೆ ಕೇಳುವುದೇ?' ಎನ್ನಿಸಿತವನಿಗೆ. ಆದರೆ ಮಾತನಾಡಲಿಲ್ಲ.

ಊಟವಾಯ್ತು. ಊಟವಾಗುತ್ತಿದ್ದಂತೆಯೇ ಶಾಸ್ತ್ರಿಗಳು ಮಲಗಿದರು. ಭಾಸ್ಕರ ಕೂಡ ತನ್ನ ಕೋಣೆಯಲ್ಲಿ ಮಲಗಲು ಪ್ರಯತ್ನಿಸಿದ. ನಿದ್ರೆ ಬರಲಿಲ್ಲ. ಅವನ ಕಣ್ಣುಗಳು ಸುತ್ತಲೂ ನೋಡಿದವು. ಆ ಹಳ್ಳಿಯಲ್ಲಿ ಈ ಮನೆಯಷ್ಟು ಅಚ್ಚುಕಟ್ಟಾದ ಮನೆ ಬೇರೆ ಇರಲಾರದು ಅನ್ನಿಸಿತು. ಮಂಗಳೂರು ಹಂಚಿನ ಜಾಗದಲ್ಲಿ ತಾರಸಿಯಿತ್ತು. ವೆರಾಂಡಾದಲ್ಲಿ ಹಾಲ್‌ನಲ್ಲಿ ಸಾಕಷ್ಟು ಪಿಠೋಪಕರಣಗಳಿದ್ದುವು. ಅವನು ಮಲಗಿದ್ದ ಕೋಣೆಯಲ್ಲಿ ಒಂದು ಮಂಚ, ಒಂದು ಡ್ರೆಸ್ಸಿಂಗ್ ಟೇಬಲ್, ಫ್ಯಾನ್, ಒಂದು ಗಾಡ್ರೆಜ್ ಬೀರು ಇದ್ದವು. ಡ್ರೆಸಿಂಗ್ ಟೇಬಲ್ ಮೇಲಿದ್ದ ಭಾವಚಿತ್ರ ದೊಡ್ಡಮ್ಮನದೆನ್ನುವುದರಲ್ಲಿ ಅವನಿಗೆ ಸಂದೇಹ ಉಳಿಯಲಿಲ್ಲ. ಅವನು ಎದ್ದು ಭಾವಚಿತ್ರ ಕೈಯಲ್ಲಿ ತೆಗೆದುಕೊಂಡ. ಅವರು ಚಿಕ್ಕವರಾಗಿದ್ದಾಗ ತೆಗೆದ ಚಿತ್ರವದು. 17-18ರ ತರುಣಿ, ಬಿಗಿಯಾಗಿ ಒಂದು ಜಡೆ ಹೆಣೆದುಕೊಂಡು, ಮುಡಿ ತುಂಬಾ ಹೂವು ಮುಡಿದು, ಬಲಭುಜದ ಮೇಲೆ ಸೆರಗನ್ನು ತಂದು ಹೊದ್ದು ನಿಂತಿದ್ದಳು. ನಾಲ್ಕೈದು ಸರಗಳು, ಓಲೆ-ಝುಮುಕಿ, ಕೈ ತುಂಬಾ ಬಳೆಗಳು- ಎರಡು ಮೂಗಿಗೂ ಬೇಸರಿ.. ಒಟ್ಟಿನಲ್ಲಿ ಒಡವೆಗಳಲ್ಲಿ ಮುಳುಗಿ ಹೋಗಿದ್ದರು.

ನಾಲ್ಕು ಗಂಟೆಗೆ ಅವನಿಗೆ ಎಚ್ಚರವಾಯ್ತು. ಅವನು ಮುಖ ತೊಳೆಯುತ್ತಿದ್ದಾಗ ಬಿಸಿ ಕಾಫಿ ಬಂತು. ಕಾಫಿ ಕುಡಿಯುತ್ತಿದ್ದಾಗ ಶಾಸ್ತ್ರಿಗಳು ಹೇಳಿದರು "ಒಂದು ಸುತ್ತು ಹೋಗಿ ಬರೋಣ. ಬ್ತೀಯೇನಪ್ಪಾ?"

"ಹೊಳೆಯ ಕಡೆ ಹೋಗೋಣವಾ?"

"ಹೊಳೆ ನೆನಪಿದೆಯಾ ನಿನಗೆ?" ಅವರು ನಗುತ್ತಾ ಕೇಳಿದರು. ಹಳೆಯ ದಿನಗಳ ನೆನಪಿನಿಂದ ಅವನ ಮುಖದಲ್ಲೂ ನಗು ತೇಲಿತು.

ಹೊಳೆಯ ಬಳಿ ಇದ್ದ ಮೆಟ್ಟಿಲ ಮೇಲೆ ಕುಳಿತು ಕೇಳಿದರು ಶಾಸ್ತ್ರಿಗಳು "ಭಾಸ್ಕರ, ನಿನ್ನ ದೊಡ್ಡಪ್ಪನ ಕತೆ, ನನ್ನ ಮಗಳ ಕತೆ ಎರಡೂ ಒಂದೇ ಅಲ್ವೇನಪ್ಪಾ?"

"ಹುಂ"

"ನಾನು ನನ್ನ ಮಗಳ ಬಗ್ಗೆ ಹೇಳ್ತೀನಿ. ನೀನು ನಿಮ್ಮ ಮನೆಯಲ್ಲಿ ಅವಳ ಬಗ್ಗೆ ಏನೇನೋ ಕೇಳಿರಬಹುದು ಅಲ್ವಾ?"

"ಏನೇನೋ ಕೇಳಿರಬಹುದು ಅಂದ್ರೆ?"

"ನಿಮ್ಮದೊಡ್ಡಪ್ಪ ಮಕ್ಕಳಿಲ್ಲದೆ, ಹೃದಯಾಘಾತದಿಂದ ಕಣ್ಮುಚ್ಚಿದ್ದಕ್ಕೆ ನಿನಗೆ ನಿನ್ನ ಮನೆಯವರು ಕೆಲವು ಕಾರಣಗಳನ್ನು ಕೊಟ್ಟಿರಬಹುದಲ್ವಾ?"

"ಹೌದು ತಾತ. ನಮ್ತಾಯಿ - ತಂದೆ ಈ ವಿಚಾರವಾಗಿ ನನ್ನ ಹತ್ತಿರ ಏನೂ ಹೇಳಲಿಲ್ಲ. ಆದರೆ ನಮ್ಮತ್ತೆ ಮಾತ್ರ ಸೀತಮ್ಮ ಅಣ್ಣನಿಗೆ ತಕ್ಕ ಹೆಂಡತಿಯಾಗಿರಲಿಲ್ಲ. ಅವಳಿಗೆ ಶ್ರೀಮಂತಿಕೆಯ ಗತ್ತು ಇತ್ತು. ಆಕೆಗೆ ಗಂಡನ ಜೊತೆ ಸಂಸಾರ ಮಾಡುವುದಕ್ಕೆ ಇಷ್ಟವಿರಲಿಲ್ಲಾಂತ ಹೇಳಿದ್ರು...."

"ಜನ ಹೀಗೇ ಅನ್ನುತ್ತಿದ್ದಾರೇಂತ ನನಗೆ ಗೊತ್ತು. ನಮ್ಮ ಸಮಾಜ ಇರುವುದೇ ಹೀಗೆ. ಗಂಡಸಿನದು ಎಷ್ಟೇ ತಪ್ಪಿರಲಿ ಹೆಂಗಸರನ್ನೇ ದೂಷಿಸ್ತಾರೆ. ನನ್ನ ಮಗಳ ಬಗ್ಗೆ ಯಾರ ಬಳಿಯಾದರೂ ಹೇಳಬೇಕೂಂತ ನನ್ನ ಮನಸ್ಸು ಬಹಳ ದಿನಗಳಿಂದ ತುಡಿಯುತ್ತಾ ಇತ್ತು. ನನ್ನ ಮಗಳು ಸತ್ತು ಸ್ವರ್ಗದಲ್ಲಿ ಸಂಪಿಗೆ ಮರವಾಗಿದ್ದಾಳೆ. ಅವಳ ಬಗ್ಗೆ ಸುಳ್ಳು ಹೇಳಿ ನಾನು ಏನನ್ನೂ ಸಾಧಿಸಬೇಕಾಗಿಲ್ಲ. ನಾನು ನಿಜಾ ಹೇಳ್ತೀನಿ ಅನ್ನುವ ನಂಬಿಕೆ ನಿನಗಿದೆಯಾ?"

"ಖಂಡಿತಾ ಇದೆ, ಹೇಳಿ ತಾತ"

ಅನಂತ ಶಾಸ್ತ್ರಿಗಳು ಕಥೆ ಆರಂಭಿಸಿದರು.



**ಎರಡು ಟಿಕೆಟ್, ಎರಡು ಪಕ್ಷಗಳು**

*ಸೈಯದ್ ಶಹಾಬುದ್ದೀನ್ ಎರಡು ಕ್ಷೇತ್ರಗಳಲ್ಲಿ ಎರಡು ರಾಜಕೀಯ ಪಕ್ಷಗಳಿಗಾಗಿ 24 ಗಂಟೆಗಳೊಳಗಾಗಿ ನಾಮಪತ್ರ ಸಲ್ಲಿಸಿದರು. 1991ರ ಏಪ್ರಿಲ್ 26ರಂದು ಸಮಾಜವಾದಿ ಜನತಾದಳದ ಉಮೇದುವಾರರಾಗಿ ಮೊರಾದಾಬಾದ್‌ನಲ್ಲಿ ನಾಮಪತ್ರ ಸಲ್ಲಿಸಿದ ಶಹಾಬುದ್ದೀನ್ ಮರುದಿನ (ಏಪ್ರಿಲ್ 27) ಜನತಾದಳದ ಅಭ್ಯರ್ಥಿಯಾಗಿ ಕಿಶನ್‌ಗಂಜ್‌ನಲ್ಲಿ ನಾಮಪತ್ರ ಸಲ್ಲಿಸಿದರು. 24 ಗಂಟೆಗಳೊಳಗಾಗಿ ಭಾರೀ ಬದಲಾವಣೆ ಮಾಡಿದ ಇವರು ಕಿಶನ್‌ಗಂಜ್ ಕ್ಷೇತ್ರದಲ್ಲಿ ಗೆದ್ದರು.*

ಆ ದಿನ ಅವರು ಎಂದಿನಂತೆ ಬೆಳಗ್ಗೆ ಎದ್ದು ಹೊರಗೆ ಬಂದಾಗ ಬಾಗಿಲ ಬಳಿ ಜ್ಞಾನ ತಪ್ಪಿ ಬಿದ್ದಿದ್ದ ಆ ಹುಡುಗ ಕಾಣಿಸಿದ್ದ. ಸುಮಾರು 16-17 ವರ್ಷದ ಹುಡುಗ ನೋಡಲು ಮುದ್ದಾಗಿದ್ದ. ಅವರು ಒಳಗೆ ಹೋಗಿ ನೀರು ತಂದು ಅವನ ಮುಖಕ್ಕೆ ನೀರು ತಟ್ಟಿದ್ದರು. ಹುಡುಗ ಎದ್ದು ಕುಳಿತು ಅಳಲಾರಂಭಿಸಿದ್ದ.

"ಬಾ ಒಳಗೆ. ನೀರು ಕೊಡ್ತೇನೆ. ಮುಖ ತೊಳೆ" ಎಂದಿದ್ದರು ಅವರು.

ಹುಡುಗ ಮುಖ ತೊಳೆದು ಹಾಲು ಕುಡಿದು ತನ್ನ ಬಗ್ಗೆ ಹೇಳಿದ್ದ.

"ನಂಗೆ ತಾಯಿ-ತಂದೆ ಒಡಹುಟ್ಟಿದವರು ಯಾರೂ ಇಲ್ಲಾ. ನಮ್ಮ ಚಿಕ್ಕಪ್ಪನ ಮನೆಯಲ್ಲೇ ಇದ್ದು ಓದ್ತಾ ಇದ್ದೆ. ಕಷ್ಟಪಟ್ಟು ಎಸ್.ಎಸ್.ಎಲ್.ಸಿ. ಮುಗಿಸಿದೆ. ಆದರೆ ಪಿ.ಯು.ಸಿ. ದಾಟಕ್ಕಾಗಲಿಲ್ಲ. ನನಗೆ ಆ ಓದು ತಲೆಗೆ ಹಿಡಿಯಲಿಲ್ಲ. ನನಗೆ ಸಂಗೀತ ತುಂಬಾ ಇಷ್ಟ. ಅದನ್ನು ನಾನು ಕಲಿಯಬೇಕೂಂತ ಮನೆ ಬಿಟ್ಟು ಹೊರಟೆ. ದಾರಿಯಲ್ಲಿ ಯಾರೋ ನನ್ನ ಬ್ಯಾಗ್ ಕದ್ದುಬಿಟ್ರು. ಟಿಕೆಟಿಗೆ ದುಡ್ಡಿರಲಿಲ್ಲ. ಎಡತೊರೆಯಿಂದ ನಡ್ಕೊಂಡ್ ಹೊರಟೆ. ಮೂರು ದಿನ ಆಯ್ತು ಊಟ ಮಾಡಿ...."

"ನಿನಗೆ ಸಂಗೀತಾಂದ್ರೆ ಅಷ್ಟು ಇಷ್ಟಾನಾ?"

"ಹೌದು. ನನಗೆ ಸಂಗೀತಾಂದ್ರೆ ತುಂಬಾ ಇಷ್ಟ. ಪಂಚಪ್ರಾಣ ಇದ್ದ ಹಾಗೆ. ಸಂಗೀತದಲ್ಲಿ ತುಂಬಾ ಸಾಧಿಸಬೇಕು ಅನ್ನುವ ಆಸೆಯಿದೆ ನನಗೆ"

"ಮನುಷ್ಯನಿಗೆ ವಿದ್ಯೆನೂ ಬಹಳ ಮುಖ್ಯ...."

"ನನಗೆ ಕನ್ನಡ - ಇಂಗ್ಲೀಷ್ ಓದಲು ಬರೆಯಲು ಬರುತ್ತದೆ. ವ್ಯವಹಾರಕ್ಕೆ ಬೇಕಾದ ವಿದ್ಯೆ ಕಲಿತಿದ್ದಾಗಿದೆ. ನಾನು ಸಂಗೀತ ಕಲಿಯಲೇ ಬೇಕು"

"ನಿನಗೆ ಸಂಗೀತ ಪಾಠವಾಗಿದೆಯಾ?"

"ನಮ್ಮ ಮನೆ ಹತ್ರ ಒಬ್ಬರು ಸಂಗೀತದ ಮೇಷ್ಟ್ರಿದ್ದಾರೆ. ಅವರ ಮನೆಗೆ ಆಗಾಗ್ಗೆ ಹೋಗ್ತಿದ್ದೆ. ಅಲ್ಪ-ಸ್ವಲ್ಪ ಹಾಡುವುದನ್ನು ಕಲಿತಿದ್ದೇನೆ."

"ನೀನು ಇಲ್ಲಿರುವ ವಿಚಾರ ನಿನ್ನ ಚಿಕ್ಕಪ್ಪನಿಗೆ ತಿಳಿಸಲೋ ಬೇಡವೋ?"

"ಖಂಡಿತಾ ಬೇಡ ಸರ್... ನಾನು ಇಲ್ಲಿರುವುದಿಲ್ಲ. ಆದಷ್ಟು ಬೇಗ ಇಲ್ಲಿಂದ ಹೊರಡ್ತೇನೆ."

"ನಾಲ್ಕು ದಿನ ಇಲ್ಲೇ ಇರು. ಯೋಚನೆ ಮಾಡೋಣ. ಆದರೆ ಧೈರ್ಯವಾಗಿರು. ಖಂಡಿತಾ ನೀನು ಇಲ್ಲಿರುವ ವಿಷಯ ನಿಮ್ಮ ಚಿಕ್ಕಪ್ಪಂಗೆ ತಿಳಿಸಲ್ಲ"

ಶ್ಯಾಮಾಶಾಸ್ತ್ರಿ ಆರಾಮವಾಗಿ ಅಲ್ಲೇ ಉಳಿದಿದ್ದ. ಅವನ ಕೈಲಿ ಹಾಡಿಸಿದ ಅನಂತ ಶಾಸ್ತ್ರಿಗಳಿಗೆ ಅವನ ಶಾರೀರ ತುಂಬಾ ಚೆನ್ನಾಗಿದೆ ಎನ್ನಿಸಿತ್ತು. ಜೊತೆಗೆ ಅವನ ತಲೆಯೂ ಚುರುಕಾಗಿ ಕೆಲಸ ಮಾಡಿತ್ತು. ಅವರಿಗೆ ಸುಮಾರು 60 ಎಕರೆ ಭೂಮಿಯಿತ್ತು. ಅರ್ಧೂರು ತೆಂಗಿನ ಮರಗಳಿದ್ದುವು. ಸ್ವಂತ ಮನೆಯಿತ್ತು. ಮನೆಯಲ್ಲಿ 10 ಕರೆಯುವ ಹಸುಗಳಿದ್ದುವು. ಮನೆಯಲ್ಲಿ ಬೇಕಾದಷ್ಟು ಒಡವೆಗಳಿದ್ದುವು. ಅವರ ಮದುವೆಯಾದ ಹನ್ನೆರಡು ವರ್ಷಗಳ ನಂತರ ಸೀತಾ ಹುಟ್ಟಿದ್ದಳು. ಮಗಳಿಗೆ ಮದುವೆ ಮಾಡಿ ದೂರ ಕಳುಹಿಸಬೇಕಲ್ಲಾ ಎನ್ನುವ ಚಿಂತೆ ಅವರಿಗಿತ್ತು. ಶಾಮಣ್ಣನನ್ನು ದೊಡ್ಡ ಸಂಗೀತಗಾರನನ್ನಾಗಿ ಮಾಡಿ, ತಮ್ಮ ಒಬ್ಬಳೇ ಮಗಳನ್ನು ಕೊಟ್ಟು ಮದುವೆ ಮಾಡಿ, ಮನೆ ಅಳಿಯನನ್ನಾಗಿ ಮಾಡಬೇಕೆಂದುಕೊಂಡರು.

ವಾರದ ನಂತರ ಅವನನ್ನು ಕರೆದುಕೊಂಡು ಮದ್ರಾಸ್‌ಗೆ ಹೋಗಿ ಅಲ್ಲಿಯೇ ಶ್ರೇಷ್ಠ ಸಂಗೀತಗಾರರಾದ ಶೇಷಗಿರಿ ಅಯ್ಯರ್ ಬಳಿ ಸಂಗೀತಪಾಠಕ್ಕೆ ಸೇರಿಸಿದರು. ಗುರುಗಳ ಮನೆಯಲ್ಲೇ ವಾಸ. ಸುಮಾರು ಹತ್ತು ವರ್ಷ ಸಂಗೀತ ಕಲಿತು ಶ್ಯಾಮಾಶಾಸ್ತ್ರಿ ಹಿಂದಿರುಗಿದ. ಈ ಅವಧಿಯಲ್ಲಿ ಅನಂತಶಾಸ್ತ್ರಿಗಳಿಗೆ ಶಾಮಣ್ಣನ ತಾಯಿ-ತಂದೆ, ಒಡಹುಟ್ಟಿದವರು ಬದುಕಿದ್ದಾರೆಂದು ತಿಳಿದಿತ್ತು. ಅವರು ಅವನ ತಾಯಿ-ತಂದೆಯನ್ನು ಭೇಟಿಯಾಗಿ ಅವರ ಮಗ ಬದುಕಿರುವ ವಿಚಾರ ತಿಳಿಸಿದ್ದರು. ಮಗ ಯಾವ ತೊಂದರೆಯೂ ಇಲ್ಲದೆ ಸಂತೋಷವಾಗಿದ್ದಾನೆಂದು ಕೇಳಿ ಅವರಿಗೂ ಸಮಾಧಾನವಾಗಿತ್ತು.

ಹತ್ತು ವರ್ಷಗಳ ನಂತರ ಹಳ್ಳಿಗೆ ಹಿಂದಿರುಗಿದ ಶ್ಯಾಮಾಶಾಸ್ತ್ರಿಯನ್ನು ತುಂಬು ಹೃದಯದಿಂದ ಬರ ಮಾಡಿಕೊಂಡಿದ್ದರು ಅನಂತ ಶಾಸ್ತ್ರಿ.

"ಮಗು, ನನಗೂ ವಯಸ್ಸಾಯ್ತು. ನನ್ನ ಮಗಳನ್ನು ನಿನಗೆ ಒಪ್ಪಿಸಿದರೆ ನನ್ನ ಜವಾಬ್ದಾರಿ ಕಳೆಯುತ್ತದೆ. ನಿಮ್ತಾಯಿ–ತಂದೇನೂ ಈ ಮದುವೆಗ ಒಪ್ಪಿದ್ದಾರೆ...."

"ನನಗೀಗಲೇ ಮದುವೆ ಬೇಡ...."

"ಹಾಗಂದ್ರೆ ಹೇಗೆ? ಸೀತಾ ಎಷ್ಟು ದಿನ ಕಾಯಲು ಸಾಧ್ಯ?"

"ಸೀತಾಗೆ ಸಂಗೀತ ಪಾಠವಾಗಿದೆಯಾ?"

"ಅವಳಿಗ್ಯಾಕೆ ಸಂಗೀತ? ನಿನಗಷ್ಟು ಇಷ್ಟವಿದ್ರೆ ಮದುವೆಯಾದ ಮೇಲೆ ನೀನ ಅವಳಿಗೆ ಹೇಳಿಕೊಡು"

"ನಿಮ್ಮ ಮಗಳು ನನ್ನ ಕೈ ಹಿಡಿದು ಖಂಡಿತಾ ಸುಖವಾಗಿರಲ್ಲ..."

ಅವನ ಒಳ ಅರ್ಥ ಅರಿಯದೆ ಹೇಳಿದ್ದರು ಶಾಸ್ತ್ರಿಗಳು "ಯಾಕಪ್ಪಾ ಹಾಗಂತೀಯ? ನೀನು ಸರಸ್ವತಿಯ ಪುತ್ರ. ಸೀತ ನನ್ನ ಒಬ್ಬಳೇ ಮಗಳು.. ನನ್ನದೆಲ್ಲವೂ ಅವಳದೇ ಅಲ್ವೆ? ಮತ್ತೇನು ಬೇಕು ನಿನಗೆ?"

ಅವನು ಏನು ಹೇಳಲು ಸಾಧ್ಯ? ಮದುವೆ ವಿಜೃಂಭಣೆಯಿಂದಲೇ ನಡೆಯಿತು.'ಸಂಗೀತ ಕಲಿತಿರುವ ಹುಡುಗ ಹಳ್ಳಿಯಲ್ಲಿದ್ದು ಏನು ಮಾಡಬೇಕು? ಮೈಸೂರಿನಲ್ಲೇ ಇರಲಿ' ಎಂದುಕೊಂಡರು ಶಾಸ್ತ್ರಿಗಳು.

ಶ್ಯಾಮಾಶಾಸ್ತ್ರಿ ಒಂದೇ ಮಾತಿನಲ್ಲಿ ಹೇಳಿದ. "ನಾನು ಮೈಸೂರಿನಲ್ಲಿರ್ತೇನೆ. ಆದರೆ ಅಪ್ಪ–ಅಮ್ಮನ ಜೊತೆ ಇರುವುದಿಲ್ಲ"

ಅನಂತಶಾಸ್ತ್ರಿಗಳು ಅಳಿಯನಿಗಾಗಿ ಕೃಷ್ಣಮೂರ್ತಿ ಪುರಂನಲ್ಲಿ ಮನೆ ಕೊಂಡರು. 'ಮಗ ತಮ್ಮಿಂದ ಎಂದೋ ದೂರವಾಗಿದ್ದಾನೆ. ಈಗ ಹತ್ತಿರ ಬರಲು ಹೇಗೆ ಸಾಧ್ಯ?' ಎಂದುಕೊಂಡರು ಅವನ ತಂದೆ–ತಾಯಿಯರು.

ಮಗಳ ಸಂಸಾರಕ್ಕೆ ಬೇಕಾಗುವ ಸಾಮಾನುಗಳನ್ನು ಅಣಿ ಮಾಡಿಕೊಟ್ಟು ತಾವೂ ಹತ್ತು ದಿನ ಅವರ ಜೊತೆ ಇದ್ದು ಹಳ್ಳಿಗೆ ಹಿಂದಿರುಗಿದರು ಶಾಸ್ತ್ರಿ ದಂಪತಿಗಳು.

ದೀಪಾವಳಿಗೆ ಕರೆಯಲು ಬಂದಾಗ ಮಗಳನ್ನು ನೋಡಿ, ಅವಳ ನಿರುತ್ಸಾಹ ನೋಡಿ ಅವರಿಗೆ ಆಶ್ಚರ್ಯವಾಗಿತ್ತು.

"ಯಾಕೆ ಹೀಗಿದ್ದೀಯಾ ಪುಟ್ಟಾ? ಯಾಕಮ್ಮಾ ತುಂಬಾ... ಇಳಿದು ಹೋಗಿದ್ದೀಯಾ?"

"ಏನಿಲ್ಲಪ್ಪಾ?"

"ತುಂಬಾ ಕೆಲಸವೇನಮ್ಮಾ?"

"ಇರುವ ಇಬ್ಬರಿಗೆ ಎಂತಹ ಕೆಲಸವಪ್ಪಾ?"

"ಬಂದು ಹೋಗುವವರು ತುಂಬಾ.... ಜನ ಅಲ್ವೇನಮ್ಮಾ? ನಿನ್ನ ಗಂಡ ದಾನಶೂರ ಕರ್ಣ ಆಗಿಬಿಟ್ಟಿದ್ದಾನೆ. ದಿನಕ್ಕೆ ಹತ್ತಾರು ಜನಕ್ಕೆ ವಾರಾನ್ನ ಕೊಟ್ಟಿರೋದು ನನಗೆ ಗೊತ್ತಿಲ್ಲ ಅಂದ್ಕೊಂಡಿದ್ದೀಯಾ?"

"ಅವರೆಲ್ಲಾ ವಾರಕ್ಕೆ ಮೂರು ದಿನ ಬರ್ತಾರೆ. ಅದರಿಂದ ನನಗೇನೂ ತೊಂದರೆಯಿಲ್ಲಾಪ್ಪಾ"

ತಂದೆಗೆ ಅದೇಕೋ ಕಳವಳ ಆತಂಕ. ಅವರು ಮತ್ತೇನೂ ಕೇಳದೆ ಮಗಳನ್ನು ಹಬ್ಬಕ್ಕೆ ಕರೆದೊಯ್ದಿದ್ದರು. ಶಾಮಣ್ಣ ಎರಡೇ ದಿನಗಳ ಮಟ್ಟಿಗೆ ಹಬ್ಬಕ್ಕೆ ಬಂದಿದ್ದ.

"ಸೀತಾ ಯಾಕೋ ತುಂಬಾ ಇಳಿದು ಹೋಗಿದ್ದಾಳೆ. ಹದಿನೈದು ದಿನ ಇಲ್ಲೇ ಇರಲಿ" ನಾಗಮ್ಮ ಹೇಳಿದ್ದರು. ಶಾಮಣ್ಣ ಒಪ್ಪಿದ್ದ.

ಪ್ರತಿ ಹಬ್ಬಕ್ಕೂ ಮಗಳು–ಅಳಿಯನನ್ನು ಕರೆಸಿ, ಉಪಚರಿಸಿ, ಉಡುಗೊರೆ ಕೊಟ್ಟು ಕಳುಹಿಸುತ್ತಿದ್ದರು ಶಾಸ್ತ್ರಿಗಳು.

ಒಂದು ವರ್ಷ ಉರುಳಿತ್ತು. ಗೌರಿ ಹಬ್ಬಕ್ಕೆ ಬಂದಿದ್ದ ಸೀತಾ ಅಳುತ್ತಳುತ್ತಾ ತಂದೆಗೆ ಹೇಳಿದಳು. "ಅಪ್ಪಾ, ನಾನು ಮೈಸೂರಿಗೆ ವಾಪಸ್ಸು ಹೋಗಲ್ಲ..."

"ಯಾಕಮ್ಮಾ?"

"ಅವರು ಯಾವಾಗಲೂ ಸಂಗೀತ–ಕೊಳಲು–ವೀಣೆ ಅಂತಿರ್ತಾರೆ. ನನ್ನ ಜತೆ ಮಾತು–ಕತೆ ಆಡೋದೇ ಇಲ್ಲ. ನನಗೆ ತುಂಬಾ ಬೇಜಾರು. ಬೆಳಿಗ್ಗೆ–ಸಾಯಂಕಾಲ ಸುಮಾರು 15–20 ಜನ ಪಾಠಕ್ಕೆ ಬರ್ತಾರೆ. ಕಚೇರಿ ಇದ್ರಂತೂ ಅವರಿಗೆ ಊಟ ತಿಂಡಿ ಏನೂ ಬೇಡ. ವಾರಾನ್ನಕ್ಕೆ ಬರುವವರ ಸಂಖ್ಯೆ ಕೂಡ ಜಾಸ್ತಿಯಾಗಿದೆ"

"ನೀನೂ ಸಂಗೀತ ಕಲಿ...."

"ನನ್ನ ಧ್ವನಿ ಚೆನ್ನಾಗಿಲ್ಲವಂತೆ ಅಪ್ಪಾ... ನಾನು ವಾಪಸ್ಸು ಹೋಗಲ್ಲ...."

"ಛೆ, ಹಾಗನ್ನಬಾರದಮ್ಮ ನೀನು ಪುಣ್ಯವಂತೆ. ಅವನಿಗೆ ಸಂಗೀತಾನೇ ಜೀವನ, ಸಂಗೀತಾನೇ ಉಸಿರು. ಅವನ ಸಂಗೀತ ಸಾಧನೆಗೆ ನೀನು ನೆರವಾಗಬೇಕು. ಅವನ ಹಾಡಿಗೆ ನೀನು ಶೃತಿಯಾಗಬೇಕು. ಅವನ ಜೀವನ ವೀಣೆಯ ತಂತಿಯಾಗಬೇಕು. ನಿನಗೆ ಎಷ್ಟೇ ಕಷ್ಟವಾದರೂ, ಬೇಸರವಾದರೂ ನೀನು ಅಲ್ಲಿಂದ ಬರಬಾರದು. ಯಾವಾಗಲೂ ಅವನ ನೆರಳಾಗಿರ ಬೇಕು. ನೀನು ಅವನ ಜೊತೆ ಸಂಸಾರ ಮಾಡಿಕೊಂಡಿದ್ರೆ ನನಗೆ ಸಂತೋಷವಾಗುತ್ತೆ"

ಸೀತಾ ಕಂಬನಿ ತುಂಬಿದ ಕಣ್ಣುಗಳಿಂದ ತಂದೆಯತ್ತ ನೋಡಿದ್ದಳು. ನಾಗಮ್ಮ ಸಮಾಧಾನ ಹೇಳಿದರು. "ಅವನು ತಾನೇ ಎಷ್ಟು ದಿನ ಹಾಗಿರ್ತಾನೆ ಸೀತಾ? ನಾಳೆ ಒಂದು ಮಗುವಾಗಲಿ. ಸುಮ್ಮನಿರು, ಎಲ್ಲಾ ಸರಿಹೋಗುತ್ತೆ"



**ಪ್ರಪ್ರಥಮ ಮಹಿಳಾ ಮುಖ್ಯ ನ್ಯಾಯಾಧೀಶರು**

*ದೆಹಲಿ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದ ಲೀಲಾಸೇಠ್ 1991ರ ಆಗಸ್ಟ್ 5ರಂದು ಹಿಮಾಚಲ ಪ್ರದೇಶದ ಉಚ್ಚ ನ್ಯಾಯಾಲಯದ ಪ್ರಧಾನ ನ್ಯಾಯಾಧೀಶರಾಗಿ ನೇಮಕಗೊಂಡು, ಭಾರತದ ಪ್ರಪ್ರಥಮ ಪ್ರಧಾನ ಮಹಿಳಾ ನ್ಯಾಯಾಧಿಪತಿ ಎಂಬ ಕೀರ್ತಿಗೆ ಪಾತ್ರರಾದರು.*

ಅವಳು ಅದೊಂದು ಬಗೆಯಲ್ಲಿ ನಕ್ಕಿದ್ದಳು. ಅವಳಿಗೆ ತೊಂದರೆಯಾಗಬಾರದೆಂದು ಶಾಸ್ತ್ರಿಗಳು ಅಡಿಗೆಯವರನ್ನು ಗೊತ್ತು ಮಾಡಿದರು.

ಸೀತಾಳ ಮದುವೆಯಾಗಿ ಆರು ವರ್ಷ ಉರುಳಿದರೂ, ಅವಳ ಮಡಿಲು ತುಂಬಲಿಲ್ಲ. ಶಾಸ್ತ್ರಿಗಳಿಗೆ ಕೊರಗು ಆರಂಭವಾಯ್ತು.

"ಅದಕ್ಯಾಕೆ ಚಿಂತೆ? ನಮ್ಮ ಮದುವೆಯಾದ ಹನ್ನೆರಡು ವರ್ಷಗಳ ಮೇಲಲ್ಲವಾ ನಮಗೆ ಸೀತಾ ಹುಟ್ಟಿದ್ದು?" ಎಂದು ಸಮಾಧಾನ ಹೇಳಿದರು ನಾಗಮ್ಮ ಸೀತಾ ಮಾತ್ರ ಕೊರಗಿನಿಂದ ಸೊರಗಿದಳು. ಶಾಮಣ್ಣ ಮೈ ಕೈ ತುಂಬಿಕೊಂಡು ದಿನದಿನಕ್ಕೆ ದುಂಡಗಾದ.

ದಸರಾದಲ್ಲಿ ಒಮ್ಮೆ ಮಗಳ ಮನೆಗೆ ಬಂದು ಬೀಡುಬಿಟ್ಟಿದ್ದ ಶಾಸ್ತ್ರಿಗಳು ಮಗಳನ್ನು ಕೇಳಿದರು. "ಶಾಮಣ್ಣ ಹುಡುಗಿಯರಿಗೂ ಸಂಗೀತ ಪಾಠ ಹೇಳ್ತಾನೇನಮ್ಮಾ?"

"ಹುಂ ಅಪ್ಪಾ, ಯಾಕೆ?"

"ಸಾಯಂಕಾಲ ಇಬ್ಬರು ಹುಡುಗಿಯರು ಬರ್ತಾರಲ್ಲಾ... ಅವರು ಯಾರು?"

"ತುಂಬಾ ಒಡವೆ ಹಾಕಿಕೊಂಡು, ಗಾಡಿಯಲ್ಲಿ ಬರ್ತಾರಲ್ಲಾ.... ಅವರೇನಪ್ಪಾ?"

"ಹುಂ.. ಅವರೇ...."

"ನಂಗೊತ್ತಿಲ್ಲ ನಾನು ಅವರ ಬಗ್ಗೆ ಕೇಳಿಲ್ಲ.."

"ಅವರನ್ನು ನೋಡಿದರೆ ಅವರು ನಾಯಕ ಸಾನಿಯರು ಅನ್ನಿಸತ್ತೆ... ನೀನು ಕೊಂಚ ಹುಷಾರಾಗಿರಬೇಕು..."

"ನಾನೇನು ಮಾಡಲು ಸಾಧ್ಯ ಅಪ್ಪಾ? ಅವರಿಬ್ರೂ ತುಂಬಾ ಚೆನ್ನಾಗಿ ಹಾಡ್ತಾರೆ. ಅವರಲ್ಲಿ ದೊಡ್ಡವಳು ತುಂಬಾ ಚೆನ್ನಾಗಿ ವೀಣೆ ನುಡಿಸ್ತಾಳೆ. ನಿನ್ನಳಿಯ ಅವಳಿಂದ ವೀಣೆ ಕಲಿಯುತ್ತಿದ್ದಾರೆ...."

"ನೀನು ಅದಕ್ಕೆಲ್ಲಾ ಅವಕಾಶ ಕೊಡಬಾರದಮ್ಮಾ...."

"ಅವರ ಸಂಗೀತ ಸಾಧನೆಗೆ ನಾನು ಅಡ್ಡಿ ಬರಲ್ಲಪ್ಪ..." ಎಂದಳು ಮಗಳು.

"ನಾನವನನ್ನು ಕೇಳಲೇನಮ್ಮಾ?"

"ಬೇಡಪ್ಪ, ನೀನು ಅವರ ಜೊತೆ ಯಾವ ಕಾರಣಕ್ಕೂ ಜಗಳವಾಡಕೂಡದು. ನೀನು ಈ ವಿಚಾರ ಅವರ ಹತ್ತಿರ ಮಾತನಾಡಿದರೆ ನನ್ನಾಣೆ."

ಶಾಮಣ್ಣನಿಗೆ ಅತ್ತೆ–ಮಾವಂದಿರ ಬಗ್ಗೆ ತುಂಬಾ ಗೌರವ. ಈಗವನಿಗೆ ಕೈ ತುಂಬಾ ಸಂಪಾದನೆ. ಮಹಾರಾಜರಿಗೂ ಅವನ ಸಂಗೀತ ಬಹಳ ಪ್ರಿಯ. ತಿಂಗಳಿಗೆ ಎಂಟು ದಿನ ಮದ್ರಾಸು, ಬೊಂಬಾಯಿ ಎಂದು ಹೋಗಿ ಬರುತ್ತಾನೆ. ಗಣೇಶೋತ್ಸವ, ರಾಮ ನವಮಿಗಳಲ್ಲಿ ಅವನ ಕಚೇರಿಯಿಲ್ಲದ ಯಾವ ಕಾರ್ಯಕ್ರಮಗಳೂ ಮುಕ್ತಾಯವಾಗುವುದಿಲ್ಲ. ಶಾಸ್ತ್ರಿಗಳಿಗೆ ಅಳಿಯನೆಂದರೆ ಹೆಮ್ಮೆ

ಒಮ್ಮೆ ಶಾಸ್ತ್ರಿಗಳು ಮಗಳ ಮನೆಗೆ ಬಂದಾಗ ಬೀಗರ ಮನೆಗೂ ಹೋಗಿ ಬಂದರು. ಬೀಗರು ಏನೂ ಹೇಳದಿದ್ದರೂ, ಬೀಗಿತ್ತಿ ಗೊಣಗಿದರು. "ಮಗನ್ನ ತಂದೆ ತಾಯಿಗಳಿಂದ ದೂರಸಿಬಿಟ್ಟಿದ್ದಾಳೆ ನಿಮ್ಮ ಮಗಳು. ಒಂದೇ ಊರಿನಲ್ಲಿದ್ರೂ ಅವನು ಮನೆ ಕಡೆ ಬರಲ್ಲ. ನಾವು ನೋಡಿ ಬರಲು ಹೋದ್ರೂ ನಿಮ್ಮ ಮಗಳು 'ನಾಲ್ಕು ದಿನ ಇರಿ' ಅಂತ ಹೇಳಲ್ಲ. ನಾನೇ

ಮಗನ ಮನೆಂತ ಸ್ವಾತಂತ್ರ್ಯ ತೆಗೆದುಕೊಂಡು ಉಳಿದು ಕೊಂಡ್ರೂ ನಿಮ್ಮ ಮಗಳು ಸರಿಯಾಗಿ ಮಾತುಕತೆ ಆಡಲ್ಲ. ನಾನು ಹತ್ತು ಮಾತಾಡಿದ್ರೆ ಅವಳು ಒಂದು ಮಾತಾಡ್ತಾಳೆ. ನಮಗುಂತೂ ತುಂಬಾ ಬೇಸರ. ಅವಳು ಈ ಮನೆಯ ಹಿರಿಯ ಸೊಸೆ. ಮನೆ ವಿಚಾರದಲ್ಲಿ ಜವಾಬ್ದಾರಿ ತೋರೋಬಾರದೆ?''

''ನಾನವಳಿಗೆ ಬುದ್ಧಿ ಹೇಳ್ತೀನಮ್ಮ'' ಎಂದಿದ್ದರು ಶಾಸ್ತ್ರಿಗಳು. ಬುದ್ಧಿ ಹೇಳಿದ್ದರು ಕೂಡ. ಸೀತಾ ತುಟಿ ಎರಡು ಮಾಡಲಿಲ್ಲ. ಬೀಗಿತ್ತಿ ನಾಗಮ್ಮನೆದುರು ಸೀತೆಗೆ ಮಕ್ಕಳಾಗದಿದ್ದುದಕ್ಕೂ ತುಂಬಾ ದೂರಿದರು.

''ಮದುವೆಯಾಗಿ ಎಂಟು ವರ್ಷವಾಯ್ತು. ಡಾಕ್ಟರಿಗೆ ತೋರಿಸಾಯ್ತು. ಪೂಜೆ ಪುನಸ್ಕಾರ ಮಾಡಾಯ್ತು. ಅವರಿಬ್ಬರ ಕೈಲೂ ನಾಗರ ಪ್ರತಿಷ್ಠೆ ಮಾಡಿಸಿಬಿಡೋಣ'' ಎಂದರು ನಾಗಮ್ಮ.

ಮಾವನಿಂದ ಅಳಿಯನ ಕಿವಿಗೂ ವಿಷಯ ಮುಟ್ಟಿತು. ಅವನು ಧಾರಾಳವಾಗಿ ಒಪ್ಪಿದ. ''ಸೀತಾ ಒಪ್ಪಿದರೆ ನನಗೇನೂ ಅಭ್ಯಂತರವಿಲ್ಲ''

ಸೀತಾ ಮಾತ್ರ ಒಪ್ಪಲಿಲ್ಲ. ''ನನಗದರಲ್ಲಿ ನಂಬಿಕೆಯಿಲ್ಲ, ಬೇಡಪ್ಪಾ'' ಎಂದಳು. ಅವಳನ್ನು ಒಪ್ಪಿಸಲು ಶಾಸ್ತ್ರಿಗಳು ತಾವು ಕಲಿತ ಬುದ್ಧಿಯನ್ನೆಲ್ಲಾ ಖರ್ಚು ಮಾಡಿದ್ದರು. ಆದರೆ ಸೀತಾ ಹಠ ಬಿಡಲಿಲ್ಲ.

ಶಾಮಣ್ಣ–ಪದ್ಮಾಸಾನಿಯರ ಸ್ನೇಹ ಮೈಸೂರಿನ ಜನರ ಮನೆಯ ಮಾತಾದಾಗ, ಶಾಸ್ತ್ರಿಗಳು ಮಗಳ ಬಳಿ ಓಡಿ ಬಂದರು.

''ಸೀತಾ ನಾನು ಕೇಳ್ತಿರೋದು ನಿಜವೇನೇ?''

''ನಿಜವಿರಬಹುದು...''

''ನೀನವನನ್ನು ಸರಿಯಾಗಿ ನೋಡಿಕೊಂಡಿದ್ದಿದ್ರೆ ಅವನು ಹೀಗೆ ಮನಸ್ಸು ಹರಿಬಿಡ್ತಿರಲಿಲ್ಲ...''

''ನಾನೇನು ತಪ್ಪು ಮಾಡಿದ್ದೀನಪ್ಪಾ''

''ಅಡಿಗೆಯವರಿದ್ದಾರೇಂತ ಎಲ್ಲಾ ಜವಾಬ್ದಾರಿ ಯನ್ನೂ ಅವರಿಗೇ ವಹಿಸೋದಾ? ಒಂದು ದಿನ ನೀನವನಿಗೆ ಇಷ್ಟವಾದ ಅಡುಗೆ ಮಾಡಿ ಬಡಿಸಿದ್ದೀಯಾ? ಒಂದು ದಿನ ತಾಂಬೂಲ ಮಡಿಸಿಕೊಟ್ಟಿದ್ದೀಯಾ? ಎಲ್ಲಾ ಹೆಣ್ಣುಮಕ್ಕಳಿಗೂ ತಾಯಿ ಆಗಬೇಕು ಅನ್ನುವ ಆಸೆ ಇರತ್ತೆ. ಆದರೆ ನಿನಗೆ ಆ ಆಸೇನೇ ಇಲ್ಲ. ನೀನು ಹೀಗಿರುವಾಗ ಶಾಮಣ್ಣನಿಗೆ ಮನೆಯಲ್ಲಿ ಆಸಕ್ತಿ ಉಳಿಯುತ್ತದೆಯಾ?''

''ಅಪ್ಪಾ.....''

''ಹೆಂಡತಿಯಾದವಳು ಗಂಡನ್ನ ಮುಚ್ಚಟೆಯಾಗಿ ನೋಡಿಕೊಳ್ಳಬೇಕು. ನಮ್ಮ ಚಿನ್ನದಲ್ಲೇ ದೋಷ ಇಟ್ಟುಕೊಂಡು ಅಕ್ಕಸಾಲಿಗನನ್ನ ದೂರಿದ್ರೆ ಏನು ಪ್ರಯೋಜನ?''

ಅವಳು ಅರ್ಥ ಹೀನ ನಗೆ ಬೀರಿದ್ದಳು.

''ನಿನ್ನ ಸಂಸಾರಾನ್ನ ನೀನು ನೇರ ಮಾಡಿಕೊಳ್ಳ ಬೇಕು. ನಾನಿನ್ನೇನು ಮಾಡಲೂ ಸಾಧ್ಯವಿಲ್ಲಮ್ಮ'' ಎಂದರು ತಂದೆ ಸೋತು.

ಗಂಡನಿಂದ ವಿಷಯ ತಿಳಿದ ನಾಗಮ್ಮ ಮಗಳನ್ನು ನೋಡಲು ಬಂದರು.

''ಸೀತಾ, ಗಂಡನ್ನ ಆಕರ್ಷಿಸಕ್ಕೆ ದಿನಕ್ಕೊಂದು ಬಗೆಯ ಅಲಂಕಾರ ಮಾಡ್ಕೋಬೇಕು. ಮೈಸೂರಿಗ ಬಂದು ಹತ್ತು ವರ್ಷಗಳಾದರೂ ನೀನಿನ್ನೂ ಹಳ್ಳಿಯವಳ ಹಾಗೆ ಇದ್ದೀಯ. ನಿನ್ನ ಗಂಡ ಆ ಸಾನಿಯರು ಸ್ನೇಹ ಬಯಸಿದ್ರಲ್ಲಿ ಆಶ್ಚರ್ಯವೇನಿದೆ ಹೇಳು''

### ಅತಿ ಉದ್ದದ ನೆಗೆಟಿವ್

*ಒಂಬತ್ತನೇ ಲೋಕಸಭೆಯ 500 ಸದಸ್ಯ ರನ್ನೊಳಗೊಂಡ ಗ್ರೂಪ್ ಫೋಟೋದ ನೆಗೆಟಿವ್ ಅತ್ಯಂತ ಉದ್ದದ ನೆಗೆಟಿವ್ ಎಂದು ಹೇಳಲಾಗಿದೆ. ಇದು ಆರು ಅಡಿ ಉದ್ದ ಹಾಗೂ ಒಂದು ಅಡಿ ಅಗಲವಾಗಿದೆ. ಈ ಗ್ರೂಪ್ ಫೋಟೋಗಾಗಿ 75 ವರ್ಷದ ಆಜ್ಞಾರಾಮದತ್ತ ಉಪಯೋಗಿಸಿದ ಕ್ಯಾಮರಾ ಕೂಡ ತುಂಬ ವಿಶಿಷ್ಟವಾಗಿದೆ. 1925 ಕೋಡಕ್ ಸರ್ಕ್ಯುಟ್ ಕ್ಯಾಮರಾ, ಇದು ಸುತ್ತುತ್ತದೆ, ಮಾತ್ರವಲ್ಲ ಅದರ ಲೆನ್ಸ್ ಒಂದು ಫ್ರೇಮ್‌ನಿಂದ ಇನ್ನೊಂದು ಫ್ರೇಮಿಗೆ ಚಲಿಸುತ್ತದೆ. ಇದರಿಂದಾಗಿ ಗ್ರೂಪ್ ಫೋಟೋದಲ್ಲಿ ಒಂದೆಡೆ ಕುಳಿತ ವ್ಯಕ್ತಿ ಮತ್ತೊಂದೆಡೆ ಓಡಿ ಹೋಗಿ ಅಲ್ಲಿ ಕುಳಿತುಕೊಂಡು ಒಂದೇ ಫೋಟೋದಲ್ಲಿ, ಒಂದೇ ಫ್ರೇಮ್‌ನಲ್ಲಿ ಎರಡು ಬಾರಿ ಕಾಣಿಸಿ ಕೊಳ್ಳಬಹುದು.*

ಮಗಳು ತಾಯಿಯ ಬಳಿಯೂ ಮನಬಿಚ್ಚಿ ಮಾತಾಡಲಿಲ್ಲ.

ಒಮ್ಮೆ ಶಾಸ್ತ್ರಿಗಳು ಬಂದಾಗ ಶಾಮಣ್ಣ ಊಟದ ಮನೆಯಲ್ಲಿ ಊಟಕ್ಕೆ ಕುಳಿತಿದ್ದ. ಅವನ ಸುತ್ತಲೂ ಬಟ್ಟಲುಗಳಲ್ಲಿ ಸಾರು, ಹುಳಿ, ಮೊಸರು ತುಪ್ಪ ಇತ್ಯಾದಿಗಳಿದ್ದವು. ಒಂದು ದೊಡ್ಡ ಬಟ್ಟಲಿನಲ್ಲಿ ಅನ್ನ ಇತ್ತು.

''ಇದೇನು ಶಾಮಣ್ಣ ಈ ತರಹ ಊಟ ಮಾಡ್ತಿದೀಯಾ? ಸೀತಾ ಇಲ್ವಾ?''

''ಇದಾಳೆ. ಅಡುಗೆ ಮನೆಯಲ್ಲಿ ಏನೋ ಮಾಡ್ತಿದ್ದಾಳೆ''

ಶಾಸ್ತ್ರಿಗಳು ಸೀದಾ ಅಲ್ಲಿಗೇ ನುಗ್ಗಿದರು. ಅವಳು ಕಿಟಕಿಯಿಂದ ಹೊರಗಡೆ ನೋಡುತ್ತಾ ನಿಂತಿದ್ದಳು.

''ಸೀತಾ'' ಶಾಸ್ತ್ರಿಗಳು ಗುಡುಗಿದರು.

''ಏನಪ್ಪಾ?''

ಅವರು ಮಾತನಾಡದೇ ಮಗಳ ಕಪಾಳಕ್ಕೆ ಬೀಸಿ ಹೊಡೆದರು.

''ಯಾಕಪ್ಪಾ?''

''ನಿನ್ನ ಹಾಳು ಬಾಯಿಯಲ್ಲಿ ನನ್ನನ್ನು 'ಅಪ್ಪಾ' ಅಂತ ಕರೆಯಬೇಡ ನೀನು. ಕೈ ಹಿಡಿದ ಗಂಡನಿಗೆ ಬಡಿಸುವಷ್ಟು ಬಿಡುವಿಲ್ವಾ ನಿನಗೆ? ಶ್ಯಾಮಣ್ಣ ತಾನೇ ಬಡಿಸಿಕೊಂಡು ಊಟ ಮಾಡ್ತಿದ್ದಾನಲ್ಲಾ. ನನಗೆಷ್ಟು ಸಂಕಟವಾಯ್ತು ಗೊತ್ತಾ?''

''ಅಡುಗೆಯವರು ಹುಷಾರಿಲ್ಲಾಂತ ಮನೆಗೆ ಹೋದ್ರು...''

''ನೀನು ಎಲ್ಲೂ ಹಾಳಾಗಿಲ್ವಲ್ಲಾ.. ನಿನಗೆ ಬಡಿಸ ಲಿಕ್ಕೇನಾಗಿರೋದು ರೋಗ? ನಮ್ಮನೇಲಿ ನೀನು ಮುಳ್ಳು ಹುಟ್ಟಿದಂತೆ ಹುಟ್ಟಿದೆ. ನಿಮ್ಮಮ್ಮನ್ನು ನೋಡು. ಈ ವಯಸ್ಸಿನಲ್ಲಿಯೂ ಎಷ್ಟು ಚುರುಕಾಗಿ ಕೆಲಸ ಮಾಡ್ತಾಳೆ. ನಿನಗೆ ಮಾಡಿಟ್ಟಿರುವ ಅಡುಗೆ ಬಡಿಸಕ್ಕೆ ಸೋಮಾರಿತನ....''

ಸೀತಾ ಉತ್ತರ ಕೊಡದೆ ಮೌನದ ಸ್ನೇಹ ಮಾಡಿಕೊಂಡಳು.

ನಂತರ ಶಾಸ್ತ್ರಿಗಳು ಮಗಳ ಮನೆಗೆ ಅಪರೂಪ ವಾಯಿತು. ಅಳಿಯನ ಕಥೆ ಎಲ್ಲರ ಬಾಯಲ್ಲಿ ನಲಿ ದಾಡಿದಾಗ ನಾಗಮ್ಮ ಸಂಕಟ ತಡೆಯಲಾರದೆ ಗಂಡ ನಿಗೆ ಹೇಳಿದರು. ''ಸೀತಾ ಇದನ್ನೆಲ್ಲಾ ಸಹಿಸಿಕೊಂಡು ಹೇಗಿದ್ದಾಳೋ ಏನೋ? ನಾವು ಹೋಗಿ ನೋಡಿ ಕೊಂಡು ಬರೋಣ''

ಶಾಸ್ತ್ರಿಗಳು ಮಗಳನ್ನು ನೋಡಿ ಒಂದೂವರೆ ವರ್ಷವಾಗಿತ್ತು. ಹೆಂಡತಿಯ ಜೊತೆ ಮಗಳ ಮನೆಗೆ ಕಾಲಿಟ್ಟ ಶಾಸ್ತ್ರಿಗಳಿಗೆ ಮನೆಯ ಸ್ವರೂಪವೇ ಬದಲಾಗಿ ರುವಂತೆ ತೋರಿತು. ಎಲ್ಲಿ ನೋಡಿದರೂ ಹೊಸ ಹೊಸ ಸೋಫಾಗಳು, ಪ್ರತಿ ಕೋಣೆಗೂ ಫ್ಯಾನ್, ಕಿಟಕಿ ಬಾಗಿಲುಗಳಿಗೆ ಪರದೆಗಳು, ಫೋನ್ ಕೂಡ ಬಂದಿತ್ತು. ಅಳಿಯನ ವೈಭವ ನೋಡಿ ಅವರಿಗೆ ಹಿಗ್ಗೋ ಹಿಗ್ಗು. ಅವರು ಶ್ಯಾಮಣ್ಣನ ಸಂಗೀತದ ಕೋಣೆಗೆ ಬಂದಾಗ ಶ್ಯಾಮಣ್ಣ, ಪದ್ಮಾಸಾನಿ ಇಬ್ಬರೂ ಹಾಡುತ್ತಾ ಕುಳಿತಿದ್ದರು. ಅವರಿಗೆ ಇಹದ ಅರಿವಿಲ್ಲ, ಪರದ ಚಿಂತೆಯಿಲ್ಲ!

ದೇವರ ಮುಂದೆ ಕೈ ಮುಗಿದು ಕುಳಿತಿದ್ದ ಮಗಳನ್ನು ನೋಡಿ ಅವರಿಗೆ 'ಅಯ್ಯೋ' ಎನ್ನಿಸಿತು. ಸೀತೆಯ ದೇಹದಲ್ಲಿದ್ದ ಮೂಳೆಗಳನ್ನು ಎಣಿಸ ಬಹುದಿತ್ತು.

''ಅಮ್ಮಾ ರಾತ್ರಿಗೆ ಫಲಾಹಾರ ಏನು ಮಾಡಲಿ?'' ಅಡುಗೆಯವರು ಪದ್ಮಾಸಾನಿಯನ್ನು ಕೇಳುತ್ತಿರುವುದು ಕಿವಿಗೆ ಬಿತ್ತು. ಹಾಗಾದರೆ ಆಕೆ ಇಲ್ಲೇ ಇದ್ದಾಳೆಯೇ? ಅಳಿಯನ ಬಳಿ ವಿಷಯ ಪ್ರಸ್ತಾಪಿಸಲು ಮಗಳು ಅವಕಾಶ ಕೊಡಲಿಲ್ಲ. ಮಗಳನ್ನು ತಬ್ಬಿಕೊಂಡು ನಾಗಮ್ಮ ಕಣ್ಣೀರು ಸುರಿಸಿದರು.

ಹೀಗೇ ವರ್ಷಗಳು ಉರುಳಿದುವು. ಶ್ಯಾಮಣ್ಣನಿಗೆ ಆಗ 55 ವರ್ಷ ಇರಬಹುದು. ಒಂದು ಬೆಳಿಗ್ಗೆ ಹಠಾತ್ತಾಗಿ ಹೃದಯಾಘಾತದಿಂದ ಕಣ್ಮುಚ್ಚಿದ. ಅವನ ಅಂತಿಮ ದರ್ಶನಕ್ಕಾಗಿ ಜನರ ಪ್ರವಾಹ ಹರಿಯಿತು. ಅವನ ಶಿಷ್ಯಂದಿರು ಗುರುವಿಗೆ ಕಣ್ಣೀರಿನ ಅಭಿಷೇಕ ಮಾಡಿದರು. ಆದರೆ ಸೀತಾ ಒಂದು ಹನಿ ಕಣ್ಣೀರು ಸುರಿಸಲಿಲ್ಲ. ಅವಳ ಮೌನ ಭಯಂಕರವಾಗಿತ್ತು.

''ಸೀತಾ ಅಳುವುದಾದ್ರೆ ಅತ್ತು ಬಿಡು. ಹೀಗೆ ದುಃಖ ನುಂಗಬಾರದಮ್ಮ''

''ನಂಗೆ ದುಃಖಾನೇ ಆಗ್ತಿಲ್ಲಪ್ಪ – ಅಳೂನೇ ಬರ್ತಿಲ್ಲ''

ಅವರು ಆಶ್ಚರ್ಯದಿಂದ ಮಗಳನ್ನು ದಿಟ್ಟಿಸಿದರು. ಅವನ ಜೊತೆ 25 ವರ್ಷ ಸಂಸಾರ ಮಾಡಿ, ಅವನು ಸತ್ತಾಗ ಹೀಗೆ ಸುಮ್ಮನಿದ್ದಾಳಲ್ಲಾ?

ಶಾಸ್ತ್ರಿಗಳೇ ನಿಂತು ಅಳಿಯನ ದಿನ ಕರ್ಮ ನಡೆಸಿದರು.

''ಸೀತಾ ಮುಂದೇನ್ಮಾಡ್ತೀಯಾ?''

''ನಿಮ್ಮ ಜೊತೆ ಹಳ್ಳಿಗೆ ಬರ್ತೀನಪ್ಪಾ''

''ಹಾಗಾದ್ರೆ ಮನೆ ಮಾರೋಣವೇ?''

''ಬೇಡಪ್ಪ. ಈ ಮನೇನ್ನ ಇಲ್ಲಿರುವ ವಸ್ತುಗಳ ಜೊತೆ ಪದ್ಮಾಸಾನಿಗೆ ಕೊಡ್ತೇನೆ. ಅವಳು ಇಲ್ಲೇ ಸಂಗೀತದ ತರಗತಿಗಳನ್ನು ನಡೆಸಲಿ. ನನಗೆ ಈ ಮನೆಯ ಒಂದು ಹುಲ್ಲುಕಡ್ಡಿಯೂ ಬೇಡ''

''ಏನಮ್ಮಾ ಹೀಗಂತೀಯಾ? ಮುಂದೆ ನಿನ್ನ ಗತಿಯೇನಮ್ಮಾ?''

''ನಿನ್ನ ಮಗಳಿಗೆ ಎರಡು ತುತ್ತು ಅನ್ನ ಹಾಕಕ್ಕಾಗಲ್ವೇನಪ್ಪಾ ನಿನಗೆ?'' ಪ್ರಶ್ನೆ ಚಾಟಿಯಂತಿತ್ತು.

"ನಾನೆಲ್ಲಿ ಹಾಗಂದೆ ಮಗು? ಬಳ್ಳಿಗೆ ಕಾಯಿ ಭಾರವೇನಮ್ಮಾ? ನಿನಗಿಷ್ಟ ಬಂದಂತೆ ಮಾಡು"

ಶ್ಯಾಮಣ್ಣ ಸತ್ತ ವರ್ಷದ ನಂತರ ಸೀತಾ ಮನೆಯನ್ನು ಪದ್ಮಾಸಾನಿಗೆ ಒಪ್ಪಿಸಿ ಹಳ್ಳಿ ಸೇರಿದಳು.

ಮಗಳು ದಿನದಿನಕ್ಕೆ ಸವೆಯುತ್ತಿರುವುದನ್ನು ಕಂಡು ಶಾಸ್ತ್ರಿಗಳು ಸ್ಥಳ ಬದಲಾವಣೆಗಾಗಿ ದಕ್ಷಿಣ ಭಾರತ ಪ್ರವಾಸಕ್ಕೆ ಹೊರಟಳು.

ಕನ್ಯಾಕುಮಾರಿಯಲ್ಲಿ ಸೀತಾ ತಂದೆಗೆ ಹೇಳಿದಳು. "ಅಪ್ಪಾ, ಈ ಸ್ಥಳ ತುಂಬಾ ಪ್ರಶಾಂತವಾಗಿದೆ. ಇಲ್ಲೇ ನಾಲ್ಕು ದಿನ ಇರೋಣ"

ಶಾಸ್ತ್ರಿಗಳು ಸಂತೋಷದಿಂದ ಒಪ್ಪಿದರು. ಒಂದು ಸಾಯಂಕಾಲ ಸಮುದ್ರದ ದಡದಲ್ಲಿ ಕುಳಿತಿದ್ದಾಗ ಸೀತಾ ತಂದೆಗೆ ತೋರಿಸಿದಳು. "ಅಪ್ಪಾ, ಅಲ್ಲಿ ನೋಡಿ ಸಮುದ್ರವನ್ನು ಆಕಾಶ ಹೇಗೆ ಸೇರಿದೆ"

"ಸಮುದ್ರ–ಆಕಾಶ ಸೇರುವುದುಂಟೇನಮ್ಮಾ? ಅದು ಮನಸ್ಸಿನ ಭ್ರಮೆಯಷ್ಟೇ"

"ಅಂತಹ ಭ್ರಮೆಯಿಂದಲೇ ನನ್ನ ಬಾಳು ಏನೇನೋ ಆಯಿತಲ್ಲಪ್ಪಾ...."

"ಸೀತಾ.."

"ನೀವು ನನ್ನನ್ನು ಒಬ್ಬ ಬಡವನಿಗೆ ಕೊಟ್ಟಿದ್ರೂ ನಾನು ಸುಖವಾಗಿರ್‍ತಿದ್ದೆ. ನೀವು ಏನೇನೋ ಕನಸು ಕಂಡು ನನ್ನನ್ನು ಒಬ್ಬ ಸಂಗೀತಗಾರನಿಗೆ ಕೊಟ್ರಿ. ನಿಮ್ಮ ಆಸರೆ ಪಡೆದು ಬೆಳೆದ ನಿನ್ನ ಅಳಿಯನಿಗೆ ಈ ಮದುವೆ ಬೇಡ ಎನ್ನುವ ಧೈರ್ಯವಿರಲಿಲ್ಲ. ಅವರು ನಿನ್ನ ಅಳಿಯ ಆದ್ರು. ಆದರೆ ನನಗೆ ಗಂಡನಾಗಲಿಲ್ಲ."

"ಸೀತಾ..."

ಕಪ್ಪಾಗುತ್ತಿದ್ದ ಆಕಾಶ ನೋಡುತ್ತಾ ಹೇಳಿದಳವಳು. "ಅವರು ಮದುವೆಯ ರಾತ್ರಿಯಲ್ಲಿ ಹೇಳಿದರಪ್ಪಾ 'ನನಗೆ ನೀನು ಹೆಂಡತಿ ನಿಜ. ಆದರೆ ಸರಿಯಾದ ಹೆಂಡತಿ ಅಲ್ಲ. ನನಗೆ ನನ್ನಂತೆ ಸಂಗೀತ ಕಲಿತ ತುಂಬಾ ಚೆಲುವೆಯನ್ನು ವಿವಾಹವಾಗಬೇಕೂಂತ ಆಸೆ ಇತ್ತು. ನಿಮ್ತಂದೆ ಅದಕ್ಕೆ ಕಲ್ಲು ಹಾಕಿದರು. ಲೋಕದ ಎದುರಿಗೆ ನೀನು ನನ್ನ ಹೆಂಡತಿ. ಆದರೆ ನಿನ್ಗೆ ನನ್ನ ಹೃದಯದಲ್ಲಿ ಸ್ಥಾನವಿಲ್ಲ"

"ನೀನು ನನಗ್ಯಾಕೆ ಹೇಳಲಿಲ್ಲ?"

"ನಾಲ್ಕು ದಿನ ಆದ ಮೇಲೆ ಸರಿಹೋಗ್ತಾರೇಂತ ಸುಮ್ಮನಿದ್ದೆ. ಆರು ತಿಂಗಳು ಕಳೆದರೂ ಅವರ ಸ್ವಭಾವದಲ್ಲಿ ಬದಲಾವಣೆಯಾಗಲಿಲ್ಲ. ನನ್ನ ಜೊತೆ ಮಾತು–ಕಥೆ–ಏನೂ ಇರಲಿಲ್ಲ. ನಾನು ಬಡಿಸಿದ್ದನ್ನು ತಿನ್ನುತ್ತಿರಲಿಲ್ಲ. ನನ್ನನ್ನು ಎಲ್ಲಿಗೂ ಕರೆದೊಯ್ಯುತ್ತಿರಲಿಲ್ಲ. ಅವರಾಯಿತು. ಅವರ ಸಂಗೀತವಾಯ್ತೂಂತ ಇದ್ದರು. ನಾನು ಆಗಲೇ ನಿಮ್ಮ ಹತ್ತಿರ ಹೇಳಿದ್ದು 'ಅಪ್ಪಾ, ನಾನು ಮೈಸೂರಿಗೆ ವಾಪಸ್ಸು ಹೋಗೋಲ್ಲಾಂತ' ಆದರೆ ನೀವು...."

"ಶ್ಯಾಮಣ್ಣ ಹೀಗೆ ಮಾಡ್ತಾನೇಂತ ನನಗೆ ಗೊತ್ತಿರಲಿಲ್ಲಮ್ಮಾ..."

"ಅವರನ್ನು ಬಿಟ್ಟು ಬಂದರೆ ನೀವು ನೊಂದು ಕೊಳ್ತೀರಾಂತ ನಾನಲ್ಲೇ ಉಳಿದೆ. ಅವರ ಬಗ್ಗೆ ಎಲ್ಲರಿಗೂ ಗೌರವ. ನನ್ನ ಅಳಲು ಅರ್ಥ ಮಾಡಿಕೊಳ್ಳದ ಜನ ನನ್ನನ್ನು ದೂರಿದರು. ಅತ್ತೆ ಮನೆಯವರಿಗೆ ನಾನು ಕೆಟ್ಟವಳಾದೆ. ಯಾರನ್ನೂ ನಾನು 'ನನ್ನ ಮನೆಯಲ್ಲಿರಿ' ಎಂದು ಕೇಳುತ್ತಿರಲಿಲ್ಲ. ನನ್ನ ಮನೆಯ ಕಥೆ ಯಾರಿಗೆ



ಗುರ್ತು ಸಿಕ್ಕಲಿಲ್ಲವೇ?
ಶ್ರೀಪಾದರಾಯರಲ್ಲವೆ... ಒಂದೇ ವರ್ಷದಲ್ಲಿ
ಎರಡು ಹೆಣ್ಣು ಮಕ್ಕಳ ಮದುವೆ ಮಾಡಿದ್ರು!

ತಿಳಿಯುತ್ತದೆಯೋ ಎಂಬ ಆತಂಕ ನನಗೆ. ನಿನ್ನ ಅಳಿಯನ ಬಗ್ಗೆ ಎಲ್ಲರಿಗೂ ಅನುಕಂಪ. ಒಳ್ಳೆಯ ಹೆಂಡತಿ ಪಡೆಯದ ದುರ್ದೈವಿ ಅನ್ನಿಸಿಕೊಂಡರು. ಒಂದೇ ಸೂರಿನ ಕೆಳಗೆ ಇದ್ದರೂ ನಾವು ಅಪರಿಚಿತರಂತೆ ಉಳಿದೆವು. ಆ ವ್ಯಕ್ತಿ ಸತ್ತು ಹೋದಾಗ ನನಗೆ ಹೇಗೆ ಅಳು ಬರಲು ಸಾಧ್ಯ?"

"ನನ್ನದು ತಪ್ಪಾಯ್ತು. ಕ್ಷಮಿಸಮ್ಮ"

"ನೀವು ಹಾಗೆ ಅನ್ನಬಾರದು. ಸುಮಾರು ಇಪ್ಪತ್ತೈದು ವರ್ಷಗಳಿಂದ ಒಡಲಲ್ಲಿ ಇಟ್ಟುಕೊಂಡಿದ್ದ ಬೆಂಕೀನ್ನ ಈ ದಿನ ನಿಮಗೆ ತೋರಿಸ್ತಿದ್ದೇನೆ. ನೀವು ಕೇಳಿ ಮರೆತುಬಿಡಿ. ಅಮ್ಮನಿಗೂ ಹೇಳಬೇಡಿ. ನೀವು ನಾನು ಅಕಸ್ಮಾತ್ ಕಣ್ಣು ಮುಚ್ಚಿದರೂ 'ನನ್ನ ಮಗಳು ಅವಳ ಗಂಡನಿಗೆ ಸರಿಯಾದ ಹೆಂಡತಿಯಾಗಲಿಲ್ಲಾಂತ ಕೊರಗಬಾರದು' ಅನ್ನುವ ಉದ್ದೇಶದಿಂದ ನಿಮ್ಮ ಹತ್ತಿರ ಈ ವಿಷಯ ಹೇಳಿದೆ. ನಾನು ಸರಿಯಾಗಿಯೇ ಇದ್ದೆ...."

"ಸಾಕು ಸೀತಾ ನೀನು ಏನೂ ಹೇಳಬೇಡ. ಇದ್ದ ಒಬ್ಬ ಮಗಳ ಬಾಳನ್ನು ಬೆಳಗಿಸಲಾಗದ ಪಾಪಿ ನಾನು" ಶಾಸ್ತ್ರಿಗಳು ಕಂಬನಿ ತುಂಬಿ ನುಡಿದರು. ಸೀತಾ ಎದುರಿಗಿದ್ದ ಸಮುದ್ರ ನೋಡುತ್ತಾ ಅವರಿಗೆ ಬಹಳ ಸಮೀಪದಲ್ಲಿ ಕುಳಿತಿದ್ದಳು. ಅವರು ತಕ್ಷಣ ಮಗಳ ಕೈ ಹಿಡಿದು ಹೇಳಿದರು "ನಾನು ತುಂಬಾ ತಪ್ಪು ಮಾಡಿಬಿಟ್ಟೆ ಸಾಧ್ಯವಾದರೆ ನನ್ನನ್ನು ಕ್ಷಮಿಸಮ್ಮ"

ಶಾಸ್ತ್ರಿಗಳು ಆ ರಾತ್ರಿ ಕಣ್ಣು ಮುಚ್ಚಿರಲಿಲ್ಲ. ಮಗಳು ಹೇಳಿದ್ದನ್ನು ಕೇಳಿ ಅವರಿಗೆ ಸಿಡಿಲು ಬಡಿದಂತಾಗಿತ್ತು. 'ತಾವು ಅಂದುಕೊಂಡಿದ್ದೇನು? ಆಗಿದ್ದೇನು? ಮಗಳು ಸುಖಿಯಾಗಿರುತ್ತಾಳೆಂದು ನಂಬಿ ಶ್ಯಾಮಣ್ಣನಿಗೆ ಕೊಟ್ಟದ್ದೇ ತಪ್ಪಾಯಿತೇ?'

ಅನಂತ ಶಾಸ್ತ್ರಿಗಳು ಮಗಳ ಜೀವನದ ಘಟನೆಗಳನ್ನು ಭಾಸ್ಕರನ ಮುಂದೆ ಪದರ ಪದರವಾಗಿ ಬಿಚ್ಚಿಟ್ಟರು.

"ಸೀತಾ ನಮ್ಮ ಕರುಳಿನ ಒಂದೇ ಕುಡಿ. ಆದರೆ ನಮಗೆ ಅವಳ ಜೀವನದ ನಿಜವಾದ ಕಥೆ ಗೊತ್ತಿರಲಿಲ್ಲ. ನಿನ್ನ ದೊಡ್ಡಪ್ಪ ಚಿನ್ನದಂತಹ ವ್ಯಕ್ತಿ ಎಂದು ನಾವೂ ನಂಬಿದ್ದೆವು. ಮಗಳದೇ ತಪ್ಪು ಅಂದುಕೊಂಡು ಅವಳನ್ನು ಸಾಕಷ್ಟು ದೂರಿದೆವು. ಆದರೆ ಅವಳು ಎಲ್ಲೂ ತಪ್ಪು ಹೆಜ್ಜೆ ಇಡಲಿಲ್ಲ. ತನ್ನ ನೋವನ್ನೆಲ್ಲಾ ನುಂಗಿದಳು. ಹಾಲಾಹಲ ನುಂಗಿದ ಹರನಂತೆ ಬಾಳಿದಳು. ಜೀವನದ ಕಹಿ ಉಂಡಳು. ನೀನೇ ಹೇಳು. ನಾನು ನಿನ್ನ ದೊಡ್ಡಪ್ಪನ ಬಗ್ಗೆ ಏನು ಹೇಳಲಿ?"

"ದೊಡ್ಡಮ್ಮ ಕಣ್ಣು ಮುಚ್ಚಿದ್ದು ಯಾವಾಗ ತಾತ?"

"ನಾವು ಕನ್ಯಾಕುಮಾರಿಯಲ್ಲಿ ಒಂದು ವಾರ ಇದ್ದೆವು. ನಾವು ಅಲ್ಲಿಂದ ಹೊರಡುವ ಹಿಂದಿನ ದಿನ ಸಮುದ್ರದ ದಡದಲ್ಲಿ ಕುಳಿತಿದ್ದೆವು. ಅವಳು ಅಲೆಗಳ ಜೊತೆ ಆಟವಾಡುತ್ತಾ ನಿಂತಿದ್ದಳು. ಇದ್ದಕ್ಕಿದ್ದಂತೆ ಅಲೆಯೊಂದು ಬೀಸಿ ಬಂದು ಅವಳನ್ನು ಎಳೆದೊಯ್ದಿತು. ಅದು ಆಕಸ್ಮಿಕ ಮರಣವೋ ಆತ್ಮಹತ್ಯೆಯೋ ನನಗಿನ್ನೂ ಅರ್ಥವಾಗಿಲ್ಲ. ಪಾಪಿ ಚಿರಾಯು' ಅಂತಾರೆ. ಇದ್ದ ಒಬ್ಬ ಮಗಳನ್ನು ಕಳೆದುಕೊಂಡು ನಾವಿನ್ನು ಬದುಕಿದ್ದೇವೆ. ಒಮ್ಮೊಮ್ಮೆ ಅನ್ನಿಸತ್ತೆ ಈಗಿನಷ್ಟು ಕಾಲ ಮುಂದುವರೆದಿದ್ರೆ ವಾಪಸ್ಸು ಕರೆದುಕೊಂಡು ಬಂದು ಓದಿಸಬಹುದಿತ್ತು ಅಂತ. ಆದರೆ ಎಲ್ಲಾ ನಾವಂದುಕೊಂಡಂತೆ ನಡೆಯುತ್ತದೆಯೇ? ಹಣೆ ಬರಹ ಅಳಿಸುವುದಕ್ಕೆ ಯಾರ ಕೈಯಲ್ಲೂ ಸಾಧ್ಯವಿಲ್ಲ" ಅವರು ನಿಟ್ಟುಸಿರು ಬಿಟ್ಟರು.

ದೊಡ್ಡಮ್ಮನ ವ್ಯಕ್ತಿತ್ವ ಇದ್ದಕ್ಕಿದ್ದಂತೆ ಆಕಾಶದೆತ್ತರ ಬೆಳೆದಂತೆ ಭಾಸವಾಗಿ, ದೊಡ್ಡಪ್ಪ ಅವರ ಮುಂದೆ ತೀರಾ ಕುಬ್ಜನಾದಂತೆ ತೋರಿತು ಭಾಸ್ಕರನಿಗೆ. ಅವನ ಕೈ ಯಾಂತ್ರಿಕವಾಗಿ ಫೈಲಿನಲ್ಲಿ ಬರೆದಿಟ್ಟಿದ್ದ ಹಾಳೆಗಳನ್ನು ತೆಗೆದು ಚೂರು ಚೂರು ಮಾಡಿ ಗಾಳಿಗೆ ತೂರಿತು.

# 'ಮುಳ್ಳಿನ ಮನ್ಯಾಗ ಮುಸಿಮುಸಿ ನಗುತಾಳ'

**ಕು. ಮೀನಾಕ್ಷಿ ಸಿ. ರಾಜಗೋಳ**

ಸೃಷ್ಟಿಯಲ್ಲಿನ ಸುಂದರ ವಸ್ತುಗಳಲ್ಲಿ ಅಗ್ರಗಣ್ಯ ಎಂದರೆ ಈ ಹೂಗಳು. ಈ ಹೂಗಳ ಸೌಂದರ್ಯಕ್ಕೆ, ಮಾಧುರ್ಯಕ್ಕೆ, ಕೋಮಲತೆಗೆ, ವರ್ಣ ವಿನ್ಯಾಸಕ್ಕೆ ಮರುಳಾಗದ ವ್ಯಕ್ತಿಗಳಿಲ್ಲ. ಇಂತಹ ಹೂಗಳಲ್ಲಿ ಸುಂದರ ಶ್ರೇಷ್ಠ ಹೂವು ಗುಲಾಬಿ. "ಹೂಗಳ ರಾಣಿ" ಎಂಬ ಅಭಿದಾನವೂ ಇದಕ್ಕಿದೆ. ಕನ್ನಡದಲ್ಲಿರುವ ಒಗಟು "ಮುಳ್ಳಿನ ಮನ್ಯಾಗ ಮುಸಿ ಮುಸಿ ನಗತಾಳ" ಗುಲಾಬಿ ಕುರಿತೇ ಹೇಳಿದ್ದಾಗಿದೆ.

**ಇತಿಹಾಸ**:—ಗುಲಾಬಿಯ ಇತಿಹಾಸ ತುಂಬಾ ಪ್ರಾಚೀನ. ಸುಮಾರು 5000 ವರ್ಷಗಳಷ್ಟು ಮುಂಚೆಯೇ ಗುಲಾಬಿಯ ಬಳಕೆ ಇತ್ತೆಂದು ತಿಳಿದು ಬಂದಿದೆ. ಪಾರಸೀ ಧರ್ಮದ ಪವಿತ್ರ ಗ್ರಂಥ "ಝೆಂದಾ ಅವೆಸ್ಥಾ"ದಲ್ಲಿ ಗುಲಾಬಿಯನ್ನು ಒಂದು ಧಾರ್ಮಿಕ ಸಂಕೇತವಾಗಿ ಬಳಸಲಾಗಿದೆ. ಕ್ರಿಸ್ತಪೂರ್ವ ಕಾಲದಲ್ಲಿ ಪಾಲಸ್ತೀನ್‌ದಲ್ಲಿ ಗುಲಾಬಿ ಕೃಷಿ ಇತ್ತೆಂದು ತಿಳಿದು ಬಂದಿದೆ. ಗ್ರೀಕ್ ಪುರಾಣಗಳ ಪ್ರಕಾರ ಗುಲಾಬಿಯು ಪ್ರೇಮ ಮತ್ತು ಸೌಂದರ್ಯಗಳ ಅಧಿದೇವತೆ ವೀನಸ್‌ಳ ಮೆಚ್ಚಿನ ಹೂವು. ಗುಲಾಬಿಯನ್ನು ಉಳಿದೆಲ್ಲ ಹೂಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದ ರೋಮನರು ವಿಜಯೀಯೋಧರ ಸ್ವಾಗತಕ್ಕಾಗಿ ಮತ್ತು ಔತಣ ಕೂಟಗಳ ಅಲಂಕಾರಕ್ಕಾಗಿ ಇವನ್ನು ಬಳಸುತ್ತಿದ್ದರೆಂದು ತಿಳಿಯಲಾಗಿದೆ. ಆದ್ದರಿಂದಲೇ ಇರಬಹುದು ರೋಮ್ ಅನ್ನು "ಗುಲಾಬಿಯ ನೈಜ ಹೂದೋಟ" ಎನ್ನುವುದು.

ಪಾಶ್ಚಾತ್ಯ ದೇಶಗಳಲ್ಲಿ ಸಮಾಧಿಗಳ ಮೇಲೆ ಗುಲಾಬಿ ಗಿಡಗಳನ್ನು ನೆಡುವ ಪರಿಪಾಠವಿದೆ. ಭಾರತದಲ್ಲಿಯೂ ಬಹಳ ಕಾಲದಿಂದ ಗುಲಾಬಿಯ ಕೃಷಿ ಮತ್ತು ಬಳಕೆಯಿದೆ. ಸುಮಾರು 300 ವರ್ಷ ಕಾಲ ಭಾರತವನ್ನಾಳಿದ ಮೊಗಲರಿಗೆ ಗುಲಾಬಿ ಅಚ್ಚುಮೆಚ್ಚಿನ ಹೂವಾಗಿತ್ತು. ಅವರ ಕಾಲದಿಂದಲೆ ಭಾರತದಲ್ಲಿ ಗುಲಾಬಿ ಹೆಚ್ಚು ಬಳಕೆಗೆ ಬಂದಿತೆಂದರೆ ತಪ್ಪಾಗಲಿಕ್ಕಿಲ್ಲ.

**ಹೆಸರು ವಿವರ**: ವಿವಿಧ ಬಣ್ಣಗಳಲ್ಲಿ ಗುಲಾಬಿಯು ದೊರೆಯುವ ಕಾರಣ ಇದು ಅಲಂಕಾರಿಕ ಸಸ್ಯಗಳಲ್ಲೇ ಪ್ರಸಿದ್ಧಿ ಪಡೆದಿದೆ. ಗುಲಾಬಿಯನ್ನು ತರುಣಿ ಪುಷ್ಪ, ಅತಿ ಮಂಜುಲ, ಸೇಮಂತಿಲ ಮುಂತಾದ ಹೆಸರುಗಳಿಂದ ಸಂಸ್ಕೃತದಲ್ಲಿ ಕರೆಯಲಾಗುತ್ತದೆ. ರೋಸೇಸೀ ಕುಟುಂಬಕ್ಕೆ ಸೇರಿದ ಗುಲಾಬಿಯ ವೈಜ್ಞಾನಿಕ ಹೆಸರು "ರೋಸ" ಇಂಗ್ಲೀಷಿನಲ್ಲಿ ಗುಲಾಬಿಗೆ ರೋಸ್ (Rose) ಎನ್ನುತ್ತಾರೆ.

"ಗುಲಾಬಿಯ ಬಣ್ಣ ಎಷ್ಟು ಮನಮೋಹಕವೋ ಅದರ ಸುವಾಸನೆ ಕೂಡ ಅಷ್ಟೇ ಚೇತೋಹಾರಿ." ಹೇನ್ಸ್ ಹೇಳುವ ಹಾಗೆ "ಯಾವಾಗ ಮೊಟ್ಟ ಮೊದಲ ಬಾರಿಗೆ ಮಾನವ ಗುಲಾಬಿಯನ್ನು ನೋಡಿ ಇದರ ಮಧುರವಾದ ವಾಸನೆಯನ್ನು ಸವಿದನೋ ಆಗಿನಿಂದಲೂ ಅವನ ಮನಸ್ಸನ್ನು ಸೆರೆ ಹಿಡಿದು ಬಿಟ್ಟಿದೆ". ಈ ಮಾತುಗಳಲ್ಲಿ ಎಳ್ಳಷ್ಟೂ ಮಿಥ್ಯೆಯಿಲ್ಲ.

ಸೌಂದರ್ಯ, ಪ್ರೇಮ, ಪರಿಪೂರ್ಣತೆಗಳ ಪ್ರತೀಕ ಗುಲಾಬಿಯ ಅಂದ ಚೆಂದ, ಸುವಾಸನೆಗಳನ್ನು ಹೊಗಳಿ ಹಂಟ್, ಬ್ಲೇಕ್, ಶೆಲ್ಲಿ, ಕೀಟ್ಸ್ ಮುಂತಾದ ಮಹಾನ್ ಕವಿಗಳು ಕವನಗಳನ್ನು ರಚಿಸಿದರೆ ರಿಚರ್ಡ್ ಸ್ಟ್ರಾಸ್, ಯೋಹಾನ್ ಸ್ಟ್ರಾಸ್, ಥಾಮಸ್ ಮೂರ್ ಮುಂತಾದ ಸಂಗೀತ ತಜ್ಞರು ಹಾಡುಗಳನ್ನು ಸಂಯೋಜಿಸಿದ್ದಾರೆ.

"ಚೆಲುಗುಲಾಬಿಯ ಕಡೆಗೆ ದೃಷ್ಟಿಯುಳ್ಳವನು ಅದರ ಮುಳ್ಳುಗಳನ್ನಿಷ್ಟು ಧ್ಯಾನಿಸಲಿ" ಎಂದು ಭಾರತಕ್ಕೆ ಮೊದಲ ನೋಬೆಲ್ ಪ್ರಶಸ್ತಿ ತಂದು ಕೊಟ್ಟ ರವೀಂದ್ರನಾಥ ಠಾಗೂರ್ ಹೇಳಿದ್ದಾರೆ.

ಪ್ರೇಮಿಗಳ ಪ್ರೀತಿಯ ದ್ಯೋತಕದ ವಿನಿಮಯವಾಗಿ ಮಾತ್ರವೇ ಉಳಿಯದ ಈ ಗುಲಾಬಿಯು ಕೆಲವು ದೇಶಗಳ ಅಂಚೆ ಚೀಟಿಗಳಲ್ಲೂ ರಾರಾಜಿಸಿವೆ.

ಗುಲಾಬಿ ಹೂಗಳು ಒಂಟಿಯಾಗಿ ಇಲ್ಲವೆ ಮಧ್ಯಾರಂಭಿ ಮಾದರಿಯ ಹೂಗೊಂಚಲುಗಳಲ್ಲಿ ಮೂಡುತ್ತವೆ. ಗುಲಾಬಿಯ ಕಾಯಿಗೆ 'ಹಿಪ್' ಎನ್ನುತ್ತಾರೆ. ಇವುಗಳ ಬಣ್ಣದಿಂದ ಆಕರ್ಷಿತವಾಗುವ ಹಕ್ಕಿಗಳ ಮೂಲಕ ಬೀಜ ಪ್ರಸಾರವಾಗುತ್ತದೆ.

ಗುಲಾಬಿಯನ್ನು ಮುಖ್ಯವಾಗಿ ಎರಡು ಗುಂಪುಗಳಲ್ಲಿ ವಿಂಗಡಿಸಬಹುದು. (1) ವನ್ಯ ಗುಲಾಬಿ ಮತ್ತು (2) ಬೇಸಾಯದ ಗುಲಾಬಿ ಐದು ದಳಗಳನ್ನು ಹೊಂದಿರುವ ವನ್ಯ ಗುಲಾಬಿಯಲ್ಲಿ 120 ವಿಧಗಳಿವೆ. ಇವುಗಳಲ್ಲಿ ಹತ್ತು ವಿಧಗಳು ನಮ್ಮ ದೇಶದಲ್ಲಿವೆ. ಶೀತ ಮತ್ತು ಸಮಶೀತೋಷ್ಣ ವಲಯದಲ್ಲಿ ಇವುಗಳ ವ್ಯಾಪ್ತಿ ಹೆಚ್ಚು. ಐದಕ್ಕಿಂತ ಹೆಚ್ಚು ದಳಗಳನ್ನು ಹೊಂದಿರುವ ಬೇಸಾಯದ ಗುಲಾಬಿಯ ಮುಖ್ಯ ಪ್ರಭೇಧಗಳೆಂದರೆ—ಚೈನೆನ್‌ಸಿಸ್, ಫಿಟಿಡ್, ತಮಾಸ್ಕಿನ್, ಗ್ಯಾಲಿಕ, ಜೈಗ್ಯಾಂಪಿಯಾ, ಮಾಸ್ಕೆಟ್ ಮಲ್ಟಿಪ್ಲೋರ ಮತ್ತು ವಿಚೂರೈಯಾನ್ ಮುಖ್ಯವಾದವು.

ವಿವಿಧ ಬಗೆಯ ಅಂತರ್ ತಳೀಕರಣ ವಿಧಾನಗಳಿಂದ ಟೀ ರೋಸಸ್ ಮತ್ತು ಹೈಬ್ರಿಡ್ ಪರ್‌ಪೆಚ್ಯುವಲ್ಸ್ ಎಂಬೆರಡು ಪ್ರಮುಖ ಬಗೆಗಳನ್ನು ಅಭಿವೃದ್ಧಿ ಪಡಿಸಲಾಯಿತು. ಇವು ಸದಾ ಹೂಬಿಡುವಂತಹವು ಮತ್ತು ಹೂಗಳ ಗಾತ್ರ ಮತ್ತು ಮಧುರವಾಸನೆಗೆ ಹೆಸರುವಾಸಿಯಾಗಿವೆ. ಈಗ ಇನ್ನೂ ಅನೇಕ ವಿಧಗಳು ಅಭಿವೃದ್ಧಿಗೊಂಡಿವೆ. ಹೊಸ ತಳಿಗಳ ಶೋಧನೆ ನಡೆದೇ ಇದೆ.

ಗುಲಾಬಿ ಹೂಗಳು ವಿವಿಧ ಬಣ್ಣದವಾಗಿರುತ್ತವೆ. ಬಿಳಿಗುಲಾಬಿ (ಅಲ್ಬಾ ಇನ್ ಕಾರನಲ್ಟ), ಕೆಂಪು ಗುಲಾಬಿ (ರೋಸ್ ಗ್ಯಾಲಿಕ), ಹಳದಿ ಗುಲಾಬಿ, ನಸುಗೆಂಪು ಗುಲಾಬಿ, ಮಿಶ್ರ ಬಣ್ಣಗಳ ಗುಲಾಬಿ ಇತ್ಯಾದಿ. ಇತ್ತೀಚೆಗೆ ಕಪ್ಪು ಬಣ್ಣದ ಗುಲಾಬಿಗಳನ್ನೂ ಅಭಿವೃದ್ಧಿ ಪಡಿಸಲಾಗಿದೆ.

ಗುಲಾಬಿಗಳನ್ನು ಬೀಜಗಳಿಂದ, ಕಾಂಡದ ತುಂಡುಗಳಿಂದ, ಲೇಯರ್ ಮಾಡುವದರಿಂದ, ಕಣ್ಣುಕಸಿ ಮತ್ತಿತರ ವಿಧಾನಗಳಿಂದ ವೃದ್ಧಿ ಮಾಡಬಹುದು.

## ವನಿತಾ

### ವಿದ್ಯಾರ್ಥಿನಿಯರ ಶೀರ್ಷಿಕೆ

'ವನಿತಾ'ದಲ್ಲಿ ವಿದ್ಯಾರ್ಥಿನಿಯರ ಶೀರ್ಷಿಕೆಯನ್ನು ಪುನಃ ಪ್ರಾರಂಭಿಸುತ್ತಿದ್ದೇವೆ ಎಂದು ತಿಳಿಸಲು ತುಂಬಾ ಹರ್ಷಿಸುತ್ತಿದ್ದೇವೆ. ಈ ಶೀರ್ಷಿಕೆಗಾಗಿ ವಿದ್ಯಾರ್ಥಿನಿಯರಿಂದ ಲೇಖನ, ಕವನ, ಕಥೆ ಹಾಸ್ಯ ಮುಂತಾದುವುಗಳನ್ನೂ ಆಹ್ವಾನಿಸುತ್ತಿದ್ದೇವೆ. ಹಾಗೆಯೇ ವಿದ್ಯಾರ್ಥಿ ಜೀವನದ ಸ್ವಾರಸ್ಯಮಯ ಘಟನೆಗಳನ್ನೂ ಬರೆದು ಕಳುಹಿಸಬಹುದು. ಆಯ್ಕೆಯಾಗಿ ಪ್ರಕಟಗೊಂಡ ಲೇಖನಗಳಿಗೆ ಸೂಕ್ತ ಸಂಭಾವನೆ ಇದೆ.

ಬರೆದು ಕಳಿಸುವ ವಿಳಾಸ :

'ವನಿತಾ'
ಕಮಾಂಡರ್ಸ್ ಪ್ಲೇಸ್ (ಮಹಡಿ)
ರಾಜಾರಾಮ ಮೋಹನರಾಯ್ ರಸ್ತೆ
ಬೆಂಗಳೂರು – 560 025.



ಗುಲಾಬಿಗೆ ಕೇವಲ ಮಧು ಸಂಗ್ರಾಹಕ ಕೀಟಗಳಷ್ಟೆ ಮುತ್ತಲಾರವು ಬದಲಾಗಿ ಕೆಲ ಹಾನಿಕಾರಕ ಕೀಟಗಳೂ ಮುತ್ತುತ್ತವೆ. ಕಂಬಳಿಹುಳು, ನುಸಿ, ಏಫಿಡ್ಸ್, ಮೂತಿಹುಳು, ಕೆಂಪು ಶಲಾಕ ಕೀಟಗಳು, ಗೆದ್ದಲು ಮುಂತಾದವು ಮುಖ್ಯವಾದವು.

ಗುಲಾಬಿ ಎಷ್ಟೇ ಪರಿಶುಭ್ರ, ಕೋಮಲವಾಗಿದ್ದರೂ ರೋಗ ಮುಕ್ತವಲ್ಲ. ಇದಕ್ಕೆ ಬರುವ ಪ್ರಮುಖ ರೋಗಗಳೆಂದರೆ ಡೈಬ್ಯಾಕ್, ಕಪ್ಪು ಮಚ್ಚೆರೋಗ, ಬೂದಿರೋಗ ಮತ್ತು ಬೂಸ್ಟು ರೋಗಗಳು, ಹಳದಿ ರೋಗ ಮುಖ್ಯವಾದವುಗಳು.

**ಗುಲಾಬಿ ತೋಟಗಳು:** ಗುಲಾಬಿ ಎಲ್ಲಿ ಬೆಳೆದರೂ ಬಹಳ ಸುಂದರವಾಗಿ ಕಾಣಿಸುವದರಲ್ಲಿ ಸಂದೇಹವಿಲ್ಲ. 'ಆದರೆ ಹೆಚ್ಚು ಗುಲಾಬಿಗಳನ್ನು ಬೆಳೆಸುವಾಗ ಅವು ಆಕರ್ಷಕವಾಗಿ ಕಾಣಲೆಂಬ ಉದ್ದೇಶದಿಂದ ತೋಟದ ವಿನ್ಯಾಸದ ಬಗ್ಗೆಯೂ ಗಮನ ನೀಡಬೇಕಾಗುತ್ತದೆ.

ಪ್ರಪಂಚದ ಹಲವಾರು ದೇಶಗಳಲ್ಲಿ ಸುಂದರ ಗುಲಾಬಿ ತೋಟಗಳಿವೆ. ಪ್ಯಾರಿಸ್‌ನ ಬಾಯ್ಸ್‌, ಬೂಲೋನ್‌ನಲ್ಲಿಯ ಬಗಾಲೆಟ್ ತೋಟಗಳು ಅತಿ ಪ್ರಸಿದ್ಧವಾದವು. ಜಿನೆವಾದಲ್ಲಿನ ಕಾರ್ಲಾ-ಗ್ರಾಂಜ್, ಇಂಗ್ಲೆಂಡ್‌ನ ರೀಜೆಂಟ್ಸ್ ಪಾರ್ಕ್‌ನಲ್ಲಿರುವ ಕ್ವೀನ್ ಮೇಲೀಸ್ ರೋಸ್ ಗಾರ್ಡನ್, ಐರ್ಲೆಂಡಿನ ರೋಸ್‌ಬರೋ, ಅಮೆರಿಕಾದ ಹಾರ್ಟ್‌ಫರ್ಡ್ ಮುಖ್ಯವಾದವು. ಭಾರತದಲ್ಲಿ ಪಟಿಯಾಲಾ ಮಹಾರಾಜರ ಗುಲಾಬಿ ತೋಟ, ಚಂಡೀಗಢದ ಗುಲಾಬಿ ತೋಟಗಳು ಪ್ರಸಿದ್ಧವಾದವು.

ವಿಶ್ವಾದ್ಯಂತ ಗುಲಾಬಿ ಬೆಳೆಸುವದನ್ನು ಪ್ರೋತ್ಸಾಹಿಸುವ ಮತ್ತು ಹೊಸ ಜಾತಿಯ ಗುಲಾಬಿಗಳನ್ನು ಬಿಡುಗಡೆ ಮಾಡುವ ಮುಖ್ಯ ಉದ್ದೇಶ ಹೊಂದಿರುವ ಎರಡು ಗುಲಾಬಿ ಸಂಘಗಳೆಂದರೆ ಅಮೇರಿಕಾದ ಇಂಟರ್‌ನ್ಯಾಶನಲ್ ರೋಸ್ ಸೊಸೈಟಿ ಮತ್ತು ಇಂಗ್ಲೆಂಡಿನ ನ್ಯಾಶನಲ್ ರೋಸ್ ಸೊಸೈಟಿ.

**ಪ್ರಯೋಜನಗಳು:** ಕೇವಲ ದೇವರ ಕೊರಳ ಹಾರವಾಗಲು, ಹೆಂಗಳೆಯರ ಮುಡಿಗೇರಲು, ಬುಕೇಗಳ ಅಂದ ಹೆಚ್ಚಿಸಲಷ್ಟೆ ಗುಲಾಬಿಯ ಉಪಯೋಗ ಸೀಮಿತವಿಲ್ಲ. ಬದಲಾಗಿ ಗುಲಾಬಿಯು ಅನೇಕ ಔಷಧೀಯ ಗುಣಗಳ ಖಣಿಯೇ ಆಗಿದೆ.

ಪನ್ನೀರು, ಅತ್ತರು, ಕೇಶತೈಲ, ಗುಲ್‌ಕನ್, ಮುರಬ್ಬ ಪೋಪರಿ (ಖಾದ್ಯ ವಸ್ತು) ಪೌಡರು ಮುಖಕ್ಕೆ ಹಚ್ಚುವ) ಗಳನ್ನು ತಯಾರಿಸಲು ಗುಲಾಬಿ ಬಳಸುತ್ತಾರೆ. ಗುಲಾಬಿ ತೈಲವನ್ನು ಮೊಗಲ್ ರಾಣಿ ನೂರ್‌ಜಹಾನ್‌ಳು ಕಂಡು ಹಿಡಿದಳೆಂದು ಹೇಳಲಾಗಿದೆ.

ಲಿಂಪೋಕ್ರೆಟಸ್‌ನ ಕಾಲದಿಂದಲೂ ಗುಲಾಬಿಯ ಬೇರು, ತೊಗಟೆ, ಎಲೆ ಮತ್ತು ಹೂವಿನ ಪಕಳೆಗಳು ಔಷಧ ತಯಾರಿಕೆಯಲ್ಲಿ ಬಳಸಲ್ಪಟ್ಟಿವೆ.

ಗುಲಾಬಿ ಹೂವಿನಿಂದ ತಯಾರಿಸಿದ ಕಷಾಯದ ಜೊತೆ ತುಪ್ಪ ಬೆರಸಿ ಸೇವಿಸುವದರಿಂದ ಮಲಬದ್ಧತೆ ನಿವಾರಣೆಯಾಗಿ ಮಲಶುದ್ಧಿಯಾಗುತ್ತದೆ. ಗುಲಾಬಿ ಪಕಳೆ, ಕಲ್ಲುಸಕ್ಕರೆ ಹಾಗೂ ಪಚ್ಚ ಕರ್ಪೂರಗಳನ್ನರೆದು ಗುಳಿಗೆ ಮಾಡಿ ಸೇವಿಸಿದರೆ ಮುಖ ಕಾಂತಿ ಹೆಚ್ಚುವುದಲ್ಲದೆ ಕೆಮ್ಮು ಸಹ ಕಡಿಮೆಯಾಗುತ್ತದೆ. ಗುಲಾಬಿ ಹೂವಿನ ಕಷಾಯದಿಂದ ಕಣ್ಣು ತೊಳೆಯುವದರಿಂದ ಕಣ್ಣು ನೋವು ಕಡಿಮೆಯಾಗುತ್ತದೆ. ಗುಲ್‌ಕನ್ ಜೊತೆ ಹಾಲು ಸೇವಿಸುತ್ತಾ ಬಂದರೆ ಪಿತ್ತಕರ ವ್ಯಾಧಿಗಳೆಲ್ಲಾ ಗುಣವಾಗುತ್ತವೆ.

ಈ ರೀತಿ ಬಹು ಉಪಯೋಗಿ, ಹೂವುಗಳ ರಾಣಿ ಗುಲಾಬಿಯನ್ನು ಧರಿಸಲು ನಾವೆಲ್ಲ ಹೆಮ್ಮೆ ಪಡಬೇಕು.

ವರ್ಣಚಿತ್ರ : ಹರೀಶ್

## ವನಿತಾ

### ಒದುಗರ ಗಮನಕ್ಕೆ

ಬಹುಕಾಲದಿಂದ "ವನಿತಾ"ದಲ್ಲಿ ದಾರಾವಾಹಿಯಾಗಿ ಬರುತ್ತಿರುವ ಡಾ। ಉಷಾ ರಾವ್ ಅವರ "ಸಂಮೋಹಿನಿ ಚಿಕಿತ್ಸೆ" ವಿಶೇಷ ಜನಾದರಣ ಪಡೆದಿದ್ದು ಈ ದಿಸೆಯಲ್ಲಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಬಯಸುವವರೂ ಇರಬಹುದು. ಕಾರಣ ಅಂತಹವರ ಅನುಕೂಲಕ್ಕಾಗಿ "ಸಂಮೋಹಿನಿ ಪ್ರಶ್ನೋತ್ತರ ವೇದಿಕೆ" ಯನ್ನು ಬಹುಬೇಗ ಆರಂಭಿಸಲಿದ್ದೇವೆ. ಕಾರಣ ಸಮಸ್ಯೆಗಳಿಗೆ ಪರಿಹಾರ ಬಯಸುವವರು ಪ್ರಶ್ನೆಯನ್ನು ಚಿಕ್ಕದಾಗಿ ಚೊಕ್ಕವಾಗಿ ಅಂಚೆ-ಕಾರ್ಡ್‌ನಲ್ಲಿ ಬರೆದು "ವನಿತಾ"ದ ಮದರಾಸು ಕಾರ್ಯಾಲಯಕ್ಕೆ ಕಳಿಸಬೇಕು.

ಹಾಸ್ಯಲೇಖನ:

# ಗಂಗಾವನ

ಲೇ : ಶೈಲಾ ಛಬ್ಬಿ



ಗಂಗಾಳಿಗೆ ಉದ್ದ ಜಡೆಯೆಂದರೆ ತುಂಬ ಪ್ರೀತಿ. ಆದರೆ ಅವಳದೋ ಗುಂಗುರು ಕೂದಲಿನ ಮೋಟು ಜಡೆ. ಅವಳಿಗೆ ಆಕರ್ಷಕವಾದ ಕಣ್ಣು, ಬಣ್ಣ, ನಿಲುವು, ಯೌವ್ವನ, ಎಲ್ಲ ಇದ್ದರೂ ಈ ಮೋಟು ಜಡೆಗಾಗಿ ತನ್ನನ್ನು ತಾನೇ ಶಪಿಸಿಕೊಳ್ಳುತ್ತಿದ್ದಳು. ಉದ್ದ ಜಡೆಯ ಹುಡುಗಿಯರನ್ನು ಕಂಡು ಏನೋ ನಿಧಿ ಸಿಕ್ಕಂತೆ ಅದನ್ನು ಕೈಗೆತ್ತಿ ಮುಖಕ್ಕೆ ಒತ್ತಿಕೊಂಡು ಅನಿರ್ವಚನೀಯ ಆನಂದವನ್ನು ಅನುಭವಿಸುತ್ತಿದ್ದಳು. ಛೇ ಇದೆಂಥಾ ಹುಚ್ಚು ಎನ್ನುವಿರಾ? ಇಂದಿನ ಫ್ಯಾಷನ್‌ಯುಗದಲ್ಲಿ ನಾಗವೇಣಿಯರು ತಮ್ಮ ಉದ್ದ ಕೂದಲ ಬಗ್ಗೆ ಅಸಹ್ಯ ಪಟ್ಟುಕೊಂಡು ಕೇಶಕರ್ತನಾಲಯಕ್ಕೆ ಅಲ್ಲ ತುಸು ಸ್ಟೈಲಿಶ್ ಆಗಿ ಹೇಳಬೇಕೆಂದರೆ ರೂಪಾಲಯಕ್ಕೆ ಹೋಗಿ 'U' ಕಟ್, ಶೋಲ್ಡರ್ ಕಟ್, ಬಾಬ್ ಕಟ್, ಬಾಯ್ ಕಟ್ (ಸದ್ಯ ಚಾಣಕ್ಯ ಕಟ್, ಗಾಂಧಿ ಕಟ್‌ವರೆಗೂ ಹೋಗಿಲ್ಲ) ಎಂದು ಕೇಶ ಕತ್ತರಿಸಿಕೊಂಡು ಬರುತ್ತಿರುವಾಗ ಈ ಗಂಗಾಳಿಗೆ ನೀಳಜಡೆಯ ಹುಚ್ಚು ಏಕೆ ಎಂದು ಆಶ್ಚರ್ಯಪಡಬೇಡಿ. ನಾನು ಈಗ ಹೇಳಹೊರಟಿರುವ ವಿಷಯ ನಾಲವತ್ತೈದು ವರ್ಷಗಳ ಹಿಂದಿನದು.

ಆಗ ಗಂಗಾ ಇನ್ನೂ ಹದಿಹರೆಯದ ಯುವತಿ. ಅಂದಿನ ದಿನದ ಸಂಪ್ರದಾಯ ಅಥವಾ ಫ್ಯಾಷನ್ನಿನಂತೆ ಗಂಗಾಳಿಗೂ ನಿಡಿದಾದ ಜಡೆ, ಮುಡಿ ತುಂಬ ಮಲ್ಲಿಗೆಯೆಂದರೆ ಪಂಚಪ್ರಾಣ. ತನ್ನ ಉತ್ಕಟವಾದ ಅಭಿಲಾಷೆಯನ್ನು ತೀರಿಸಿಕೊಳ್ಳಲು ಸಹಜವಾಗಿ ಅವಳು ಗಂಗಾವನದ ಮೊರೆ ಹೋಗಬೇಕಾಯಿತು. ಕೃತಕ ಕೂದಲಿನಿಂದ ತಯಾರಿಸಿದ ಗಂಗಾವನವನ್ನು ಖರೀದಿಸಿ ತನ್ನ ಇಚ್ಛೆಯನ್ನು ತಕ್ಕಮಟ್ಟಿಗೆ ಪೂರೈಸಿಕೊಂಡಳು. ಕನ್ಯಾ ಪರೀಕ್ಷೆಯಂದು ಅವಳು ತನ್ನ ಜಡೆಯ ಬಗ್ಗೆ ವಿಶೇಷ ನಿಗಾ ವಹಿಸಿದ್ದಳು. ಅವಳ ಉದ್ದ ಕೂದಲಿಗೆ ಮರುಳಾಗದಿದ್ದರೂ ಅವಳ ಸೌಂದರ್ಯಕ್ಕೆ ಗಂಗಾಧರ ರಾಯರು ಸೋತದ್ದಂತೂ ನಿಜ. ಕಂಕಣ ಬಲ ಕೂಡಿ ಬಂದಿತು. ಮದುವೆಯಾಗಿ ಪತಿಯ ಮನೆಗೆ ಬರುವಾಗ ಅವಳು ತವರಿನಿಂದ ಗಂಗಾವನ, ಗೊಂಡೆ (ಕುಚ್ಚು)ಗಳನ್ನು ಮರೆಯದೆ ತಂದಿದ್ದಳು. ಅವಳಿಗಿರುವ ಕೂದಲಿನ ವ್ಯಾಮೋಹವನ್ನರಿತ ಪತಿರಾಯ ತಾವು ಪುಣೆಗೆ ಹೋದಾಗ ನೈಸರ್ಗಿಕ ಕೂದಲುಗಳಿಂದ ತಯಾರಿಸಿದ ಉತ್ತಮವಾದ ಗಂಗಾವನವನ್ನೇ ತಂದುಕೊಟ್ಟಿದ್ದರು. ಅದನ್ನು ಹೆಣೆದುಕೊಂಡು, ತಲೆತುಂಬ ಮಲ್ಲಿಗೆ ಮುಡಿದಾಗ ಗಂಗಾ ದಕ್ಷಿಣ ಭಾರತದ ಸಿನಿಮಾ ತಾರೆಯರ ನೆನಪು ತಂದುಕೊಡುತ್ತಿದ್ದಳೆಂದರೆ ತಪ್ಪಿಲ್ಲ. ಎಷ್ಟೋ ಜನ ಅದು ಅವಳದೇ ಜಡೆ ಎಂದು ಭ್ರಮಿಸಿ "ಗಂಗಾ ನಿಮಗೆ ದೇವ್ರು ಅದೇನು ಚಂದಾ ಕೂದಲು ಕೊಟ್ಟಾನ್ರೀ. ಉದ್ದ, ಕಪ್ಪು, ಗುಂಗುರ ಎಲ್ಲಾನೂ ಅವ. ಥೇಟ ಮೀನಾಕುಮಾರಿ ಹಂಗ ಕಾಣಿಸ್ತೀರಿ ನೋಡ್ರಿ" ಎಂದು ಅದರ ಅಂದವನ್ನು ಪ್ರಶಂಸಿಸುತ್ತಿದ್ದುದುಂಟು. ಗಂಗಾ ಒಳಗೊಳಗೇ ನಕ್ಕರೂ ಹೆಮ್ಮೆಪಡುತ್ತಿದ್ದುದೇನೂ ಸುಳ್ಳಲ್ಲ. ನಾಲ್ಕು ಜನರೆದುರು ಅವಳೆಂದೂ ತನ್ನ ಜಡೆ ಹೆಣೆದುಕೊಳ್ಳುವ ಹುಚ್ಚು ಹವ್ಯಾಸ ತೋರುತ್ತಿರಲಿಲ್ಲ. ತನ್ನ ಗುಟ್ಟು ರಟ್ಟಾದರೆ ಅವಮಾನ ತಾನೇ? ಸದಾ ಅವಳ ಕೂದಲಿಗೇ ಅಂಟಿಕೊಂಡಿರುತ್ತಿದ್ದ ಆ ಗಂಗಾವನ ಅವಳ ಕೇಶದ ಅವಿಭಾಜ್ಯ ಅಂಗವೇ ಆಗಿತ್ತು.

ದಿನವೂ ತನ್ನ ಪತಿ ಕಾಲೇಜಿನಿಂದ ಹಿಂದಿರುಗುವ ವೇಳೆಗೆ ಜಡೆ ಹೆಣೆದು, ಹೂಮುಡಿದು ರೆಡಿಯಾಗಿ ತನ್ನ ನೀಳಕೇಶವನ್ನು ಬೆರಳಿಗೆ ಸುತ್ತುತ್ತಲೋ ಅಥವಾ ಅದರ ಮೇಲೆ ಕೈಯಾಡಿಸುತ್ತಲೋ ಬಾಗಿಲಿಗೆ ಒರಗಿ ನಿಲ್ಲುವುದು ಅವಳ ಅಭ್ಯಾಸ. "ನನಗಿಂತ ನಿನಗ ಈ ಚೌರಿ ಮ್ಯಾಲ ಭಾಳ ಪ್ರೀತಿ ಅಲ್ಲ? ನಾ ಇಲ್ಲದ ಬೇಕಾದ್ದಂಗ ತಿಂಗಳ ದಿವಸ ತವರಾಗ ಇರ್ತಿ. ಆದ್ರ ಈ ಚೌರಿ ಇಲ್ಲದ ಒಂದು ಮಿನಿಟು ಇರೋದಿಲ್ಲಾ" ಎಂದು ಪತಿರಾಯರು ಕಾಡುತ್ತಿದ್ದರು. ಒಂದು ಸಾ- ಅವರಿಂದ ತಪ್ಪಿಸಿಕೊಂಡು ಓಡುವಾಗ ಗಂಗಾಧರ ರಾಯರು ಅವಳ ಜಡೆಯನ್ನೇ ಹಿಡಿದು ಎಳೆದಿದ್ದರು. ಪಾಪ ಅವರ ಕೈಯಲ್ಲಿ ಉಳಿದದ್ದು ಕೇವಲ ಗಂಗಾವನ! ಗಂಗಾ ಪಾರಾಗಿ ಓಡಿದ್ದಳು. ಈ ಸನ್ನಿವೇಶದಿಂದ ರಾಯರಿಗೆ ನಗೆಯುಕ್ಕಿ ಬಂದಿದ್ದರೆ, ಅವಳಿಗೆ ಅವಮಾನದಿಂದ ಕಣ್ಣೀರುಕ್ಕಿ ಬಂದಿತ್ತು. ಅಂದಿನಿಂದ ತನ್ನ ಜಡೆಯ ಹಾಗೂ ಗಂಗಾವನದ ಬಂಧನವನ್ನು ಇನ್ನಷ್ಟು ಭದ್ರಪಡಿಸಿಕೊಂಡಿದ್ದಳು. ಹೀಗಿತ್ತು ಗಂಗಾ ಹಾಗೂ ಗಂಗಾವನದ ಬಾಂಧವ್ಯ!





ಗಂಗಾಧರರಾಯರು ಹೆಸರಾಂತ ಕಾಲೇಜೊಂದರಲ್ಲಿ ಇಂಗ್ಲೀಷ ಪ್ರಾಧ್ಯಾಪಕರು. ಆ ಕಾಲದ ಫ್ಯಾಷನ್ನಿನಂತೆ ಪ್ಯಾಂಟು, ಕೋಟು, ಟೈ ಧರಿಸಿ ಸೊಗಸಾಗಿ ಅಡ್ಡಾಡುವ ಸುಂದರ ಯುವಕ. ಅವರ ಪಾಠಪ್ರವಚನಗಳೆಂದರೆ ವಿದ್ಯಾರ್ಥಿಗಳಿಗೆ ಬಲು ಇಷ್ಟ. ಅವರ ನಗು ಮೊಗ, ಹಾಸ್ಯಪ್ರಜ್ಞೆ, ಇಂಗ್ಲೀಷ ಮಾತನಾಡುವ ಶೈಲಿ ಎಲ್ಲವೂ ವಿದ್ಯಾರ್ಥಿಗಳನ್ನು (ವಿಶೇಷತಃ ವಿದ್ಯಾರ್ಥಿನಿಯರನ್ನು) ಆಕರ್ಷಿಸುವಲ್ಲಿ ಯಶಸ್ವಿಯಾಗಿತ್ತು.

ಎಂದಿನಂತೆ ಅಂದು ಕ್ಲಾಸು ಕಿಕ್ಕಿರಿದು ತುಂಬಿತ್ತು. ರಾಯರು ಪಾಠ ಮಾಡುವುದರಲ್ಲಿ ತಲ್ಲೀನರಾಗಿದ್ದರು. ಎಲ್ಲರ ಲಕ್ಷ್ಯ ಅವರತ್ತಲೇ ಕೇಂದ್ರೀಕೃತವಾಗಿತ್ತು.



ಅದು ಕಾಲೇಜಿನ ಮೊದಲ ಅವಧಿ. ಆಗಲೇ ಸಾಕಷ್ಟು ವೇಳೆ ಕಳೆದಿತ್ತು. ಅವಧಿ ಮುಗಿಯಲು ಹದಿನೈದು ನಿಮಿಷ ಬಾಕಿ ಇತ್ತು. ಬೋರ್ಡ್ ಮೇಲೆ ಕೆಲ ಸ್ಪೆಲಿಂಗುಗಳನ್ನು ಬರೆದು ಕೈ ಒರೆಸಿಕೊಳ್ಳುವುದಕ್ಕಾಗಿ ಕೋಟಿನ ಜೇಬಿಗೆ ಕೈ ಹಾಕಿದಾಗ ಗಾಬರಿಗೊಂಡು ತತ್ತರಿಸಿದರು ರಾಯರು. ಜೇಬಿನಲ್ಲಿ ಕರವಸ್ತ್ರದ ಬದಲು ಹಾವಿನ ಸ್ಪರ್ಶವಾಗಿತ್ತು. ಮುಖ ಒಮ್ಮೆಲೆ ವಿವರ್ಣವಾಯಿತು. ಶಿಷ್ಯವರ್ಗದೆದುರು ತಮ್ಮ ಗಾಬರಿಯನ್ನು ತೋರಿಸಿಕೊಳ್ಳಲೂ ಆಗದೆ, ಬಿಡಲೂ ಬಾರದೆ ಅಸಹಾಯಕರಾದರು. ಕುತ್ತಿಗೆಯಲ್ಲಿ ಹಾವಿನ ಹಾರವನ್ನೇ ಧರಿಸಿಕೊಂಡೂ ನಗುತ್ತಿರುವ ದೇವ ಗಂಗಾಧರ ಇವರಲ್ಲ ತಾನೆ? ಹಾವಿನ ಭಯದಿಂದ ಗಂಟಲ ಪಸೆ ಒಣಗಿತು. ಬಾಯಿಂದ ಶಬ್ದಗಳೇ ಹೊರಡದಾದವು. ಉಡಿಯಲ್ಲಿ ಹಾವನ್ನೇ ಕಟ್ಟಿಕೊಂಡರೂ, ಶಿಷ್ಯ ಸಮೂಹದೆದುರು ಕೋಟೆಸೆದು ತನ್ನ ಪುಕ್ಕಲು

ಸ್ವಭಾವವನ್ನು ಪ್ರದರ್ಶಿಸುವ ಮೂರ್ಖತನ ಮಾಡಲಾರರು. ಆದರೂ ಏನಾದರೊಂದು ಕ್ರಮವನ್ನು ಕೈಕೊಳ್ಳಲೇ ಬೇಕಾಗಿತ್ತು. "ಕ್ಷಮಿಸ್ರಿ, ನನಗ ಆರಾಮ ಇಲ್ಲಾ. ಈವತ್ತಿನ ಕ್ಲಾಸು ಇಲ್ಲಿಗೇ ಮುಗಿಸೋಣ'' ಎಂದು ಹೇಳುವಷ್ಟರಲ್ಲಿ ರಾಯರ ಮೈಯೆಲ್ಲ ಬೆವರು ನೀರುನೀರಾಗಿತ್ತು. ಇಲ್ಲಿಯವರೆಗೆ ಒಳ್ಳೇ ಉತ್ಸಾಹದಿಂದ ವೇದಿಕೆಯ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಚುರುಕಾಗಿ ಓಡಾಡಿಕೊಂಡಿದ್ದ ಪ್ರಾಧ್ಯಾಪಕರು ಒಮ್ಮೆಲೆ ಅಸ್ವಾಸ್ಥರಾದದ್ದು ವಿದ್ಯಾರ್ಥಿಗಳಿಗೆ ಒಗಟಾಗಿತ್ತು. ಆದರೂ ಗುರುಗಳ ಅಸ್ವಾಸ್ಥ್ಯಕ್ಕೆ ಅವರ ಕಳೆಗುಂದಿದ ಮುಖ, ಹಾಗೂ ಉದುರುತ್ತಿರುವ ಬೆವರ ಹನಿಗಳು ಸಾಕ್ಷಿ ಹೇಳಿದವು. ರಾಯರು "ಸತ್ತೆನೋ, ಕೆಟ್ಟೆನೋ'' ಎನ್ನುತ್ತ ಸ್ಟಾಫ್‌ರೂಮಿನತ್ತ



### ಲೋಕಜ್ಞಾನ – ಉತ್ತರಗಳು

1) ಮದರ್ ಥೆರೆಸಾ
2) ಕಮಲ್‌ಜಿತ್ ಸಾಂಧು
3) ಇವರು ಜಗತ್ತಿನಲ್ಲೇ ದೇಶವೊಂದರ (ಶ್ರೀಲಂಕಾ) ಪ್ರಧಾನಿಯಾಗಿ ಮೊಟ್ಟ ಮೊದಲು ಆಯ್ಕೆಯಾದ ಮಹಿಳೆ
4) ಅಹಲ್ಯಾಬಾಯಿ ಹೋಳ್ಕರ್
5) ನಿರ್ಮಲ ಹೃದಯ
6) ಇಸ್ರೇಲ್
7) ಲತಾ ಮಂಗೇಶ್ಕರ್
8) ಮದರಾಸಿನ ಕಲಾಕ್ಷೇತ್ರ
9) ವಿಜಯಲಕ್ಷ್ಮಿ ಪಂಡಿತ್
10) ಮರಾಠಾ ರಾಣಿ ತಾರಾಬಾಯಿ
11) ಕಂತಿ
12) ಮೆಡೆಲಿನ್ ಸ್ಲೇಡ್



ದಾಪುಗಾಲು ಹಾಕಿದರು. ಅಲ್ಲಿಗೆ ಹೋದವರೇ ತಮ್ಮ ಕೋಟನ್ನು ಕಳೆದು ನೆಲಕ್ಕೆಸೆದು ಟೈಯನ್ನು ಸಡಿಲಿಸಿಕೊಂಡರು. ಸದ್ಯ ರೂಂನಲ್ಲಿ ಯಾರೂ ಇರಲಿಲ್ಲ. ಕಾಲೇಜಿನ ಜವಾನ ಎಲ್ಲಪ್ಪನನ್ನು ಕರೆದು "ಎಲ್ಲಪ್ಪಾ, ನನ್ನ ಕೋಟಿನ ಕಿಸೆದಾಗ ಹಾವು ಹೊಕ್ಕ ಹಂಗ ಕಾಣ್ತದ. ಲಗು ಒಂದು ಕೋಲು ತಗೊಂಡು ಬಾ'' ಎಂದು ಅವಸರಿಸಿದಾಗ ಎಲ್ಲಪ್ಪ ಒಂದು ಉದ್ದನೆಯ ಕೋಲು, ಆರೆಂಟು ದಪ್ಪ ಕಲ್ಲುಗಳನ್ನು ತಂದು, "ಎಲ್ರೀ ಸಾಹೇಬ್ರ?'' ಎಂದ. "ಅಲ್ಲೇ ಬಲಗಡೆ ಕಿಸೆದಾಗ ನೋಡು. ಆ ಕೋಲಿನಿಂದ ಬಡಿ. ತಾನೇ ಹೊರಗೆ ಬರ್ತದ'' ರಾಯರು ಗಾಬರಿಯಿಂದ ದೂರ ನಿಂತೇ ಉತ್ತರಿಸಿದರು. ಜವಾನ ಕೋಲಿನಿಂದ ಜೇಬಿನ ಮೇಲೆ ಹೊಡೆದ. ಹಾವು ಒಳಗೆ ಬೆಚ್ಚಗೆ ಮಲಗಿತ್ತು. ಎಲ್ಲಪ್ಪ ಮತ್ತೆ ಬಡಿದ. ಊಹುಂ ಅದು ಅಲುಗಾಡಲೊಲ್ಲದು. "ಆ ಕೋಲು ಒಳಗ ತುರುಕಿ ಹಾವು ತಗಿಯೋ'' ಪ್ರಾಧ್ಯಾಪಕರು ಸೂಚಿಸಿದರು. ಎಲ್ಲಪ್ಪ ನಿಧಾನವಾಗಿ ದೂರದಿಂದಲೇ ಕೋಲನ್ನು ಒಳತೂರಿದ. ಆದರೂ ಆ ಮೊಂಡ ಹಾವು ಹೊರ ಬರಲೊಲ್ಲದು. "ಹಾವಿಗೆ ಪೂರಿ ಬಂದಿರಬೇಕ್ರೀ. ಅದಕ ಸುಮ್ಮ ಕುಂತೈತಿ. ಕೋಟಿನಾಗಿಂದ ಈ ಸಲ ಎಬಸೇ ಬಿಡ್ತೀನ್ರಿ. ನೀವು ಆ ಕಲ್ಲು ತಗೊಂಡು ಸಜ್ಜಾಗ್ರಿ'' ಎಂದಾಗ ರಾಯರು ದಪ್ಪ ಕಲ್ಲುಗಳನ್ನು ಎತ್ತಿ ಅಂಜುತ್ತ ಅಂಜುತ್ತ ಹತ್ತಿರ ಬಂದು ನಿಂತರು. ಎಲ್ಲಪ್ಪ ನಿಧಾನವಾಗಿ ಕೋಲಿನಿಂದ ಹಾವನ್ನು ಎತ್ತಿ ತೆಗೆದ. ಆ ಕರಿಕಾಳಿಂಗ ನಿರ್ಜೀವವಾಗಿ ಬಿದ್ದಿತ್ತು. ಎಲ್ಲಪ್ಪ ಅದನ್ನು ಎಸೆದು ಬಿದ್ದು ಬಿದ್ದು ನಗತೊಡಗಿದ. ಈ ಅವಾಂತರ ಘಟಿಸುತ್ತಿರುವಾಗಲೇ ಇನ್ನಿಬ್ಬರು ಪ್ರಾಧ್ಯಾಪಕರು ಹೊಸ್ತಿಲೊಳಗೆ ಅಡಿ ಇರಿಸಿದ್ದರು. ಮೊದಲು ಆತಂಕಗೊಂಡವರಂತೆ ಕಂಡರೂ ನಂತರ ಅವರೂ ಜವಾನನ ನಗೆಯಲ್ಲಿ ಶಾಮೀಲಾದರು. ಕಾರಣ ಅದು ಕಾಳಿಂಗವಾಗಿರದೆ ಗಂಗಾಳ ಗಂಗಾವನವಾಗಿತ್ತು. ಕ್ಲಾಸು ಮುಗಿದದ್ದರಿಂದ ಪ್ರಾಧ್ಯಾಪಕರೆಲ್ಲ ಸ್ಟಾಫ್ ರೂಮಿನಲ್ಲಿ ಒಬ್ಬೊಬ್ಬರಾಗಿ ಸೇರಿಕೊಳ್ಳುತ್ತಿದ್ದರು. ಎಲ್ಲರಿಗೂ ಇದೊಂದು ಮೋಜಿನ ವಿಷಯವಾಗಿತ್ತು. ಇಂಥ ವಿಷಯಗಳು ಕಾಲೇಜಿನ ಆವರಣದಲ್ಲಿ ವ್ಯಾಪಿಸಲು ಎಷ್ಟು ವೇಳೆ ತಾನೇ ಬೇಕು? ಸಹೋದ್ಯೋಗಿಯೊಬ್ಬ, ಗಂಗಾಧರರಾಯರ ಹೆಗಲ ಮೇಲೆ ಕೈಯಿರಿಸಿ "ಇದೆಲ್ಲ ಏನು'' ಎನ್ನುವಂತೆ ಕೈಸನ್ನೆ ಮಾಡಿ ತುಂಟ ನಗೆ ನಕ್ಕಾಗ ರಾಯರಿಗೆ ಭೂಮಿ ಈ ಕ್ಷಣ



ಬಾಯ್ದೆರೆಯಬಾರದೇ ಎನ್ನುವಂತಾಗಿತ್ತು. ಸಿಟ್ಟು, ಅವಮಾನ ಎಲ್ಲವನ್ನೂ ಹಾಗೂ ಹೀಗೂ ಅದುಮಿಕೊಂಡು ಕೆಲ ಕಾಲ ಕಳೆಯುವಷ್ಟರಲ್ಲಿ ಅವರಿಗೆ ಸಾಕು ಸಾಕಾಗಿತ್ತು.

ಎಂದಿಗಿಂತ ಎರಡು ತಾಸು ಮುಂಚಿತವಾಗಿ ಪತಿ ಮನೆಗೆ ಮರಳಿದಾಗ ಗಂಗಾಳಿಗೆ ಅನಂದಾಶ್ಚರ್ಯವಾಯ್ತು. ಆದರೆ ಆ ಅನಂದ ಬಹುಕಾಲ ಉಳಿಯಲಿಲ್ಲ. ಸದಾ ಹಸನ್ಮುಖಿಯಾಗಿ ಮನೆ ಸೇರುತ್ತಿದ್ದ ಪತಿರಾಯ ಇಂದು ಉರಿಮೋರೆ ಮಾಡಿಕೊಂಡು "ತಗೊ ನಿನ್ನ ಸುಡಗಾಡು ಗಂಗಾವನ. ಸುಡು ಅದನ್ನ ಮೊದಲು'' ಎಂದು ಮುಖಕ್ಕೆರಚಿದಾಗ ಗಂಗಾಳ ಜಂಘಾಬಲವೇ ಉಡುಗಿಹೋಯಿತು. ಅಂದು ತಲೆಸ್ನಾನ ಮಾಡಲು ಹೋಗುವ ಮುನ್ನ ಗಂಗಾವನವನ್ನು ಗೂಟಕ್ಕೆ ತೂಗು ಹಾಕುವ ಬದಲು ಅವಸರದಲ್ಲಿ ಅಲ್ಲೇ ತೂಗುಹಾಕಿದ್ದ ಗಂಡನ ಕೋಟಿನ ಕಿಸೆಯಲ್ಲಿ ತುರುಕಿದ್ದಳು. ರಾಯರು ಮನೆಗೆ ಹಿಂತಿರುಗಿದಾಗ ತಲೆಸ್ನಾನ ಮಾಡಿದ ಕೂದಲನ್ನು ಇನ್ನೂ ಬಾಚಿಕೊಂಡಿರದ್ದರಿಂದ ಪಾಪ ಅವಳಿಗೆ ಗಂಗಾವನದ ನೆನಪಾಗಲೀ, ಅದರ ಆವಶ್ಯಕತೆಯಾಗಲೀ ಬಿದ್ದಿರಲಿಲ್ಲ. ಶಾಂತ ಸ್ವಭಾವದ ಪತಿ ಈ ರೀತಿ ರುದ್ರಾವತಾರ ತಾಳಿದಾಗ ಏನೋ ಅವಘಡ ನಡೆದಿರಲೇಬೇಕೆಂದು ಊಹಿಸಿದಳು. ಗಂಗಾಧರರಾಯರ ಮಾನಾಪಮಾನದ ಪ್ರಶ್ನೆಯಿದ್ದಾಗ ಅವರು ಬಯ್ಯದೆ ಹೇಗೆ ಇದ್ದಾರು? ಗಂಡನ ಬೈಗಳ ಸುರಿಮಳೆ ನಿಂತರೂ ಗಂಗೆಯ ಕಣ್ಣಿಂದ ಗಂಗಾ–ಭಾಗೀರಥೀ ಸುರಿಯುತ್ತಲೇ ಇದ್ದರು. ಅವಳು ಆಗಲೇ ದೃಢ ನಿಶ್ಚಯ ಮಾಡಿದಳು.

ಅಂದಿನಿಂದ ಗಂಗಾ ಮತ್ತೆ ಗಂಗಾವನವನ್ನು ಮುಟ್ಟಲಿಲ್ಲ. ಹೃದಯವನ್ನು ಕಲ್ಲಾಗಿಸಿ ಚೌರಿಯನ್ನು ಸುಟ್ಟು ಹಾಕಿದಳು. ಅವಳ ಉದ್ದ ಜಡೆ ಒಮ್ಮೆಲೆ ಚೋಟುದ್ದ ಆದದ್ದನ್ನು ಕಂಡು ಜನ ಏನೆಲ್ಲ ಆಡಿಕೊಂಡರೂ ಸಹಿಸಿಕೊಂಡಳು. ಕಾಲಕ್ರಮೇಣ ಉದ್ದ ಜಡೆಯ ಸಂಪ್ರದಾಯ ಹೋಗಿ, ಪೋನಿಟೇಲ್ ಫ್ಯಾಷನ್ ಬಂದದ್ದು ಅವಳಿಗೆ ವರದಾನವೇ ಆಯಿತು. ಕಳೆದ ಇಪ್ಪತ್ತು ವರ್ಷಗಳಿಂದ ತಾನೂ ಅನಿವಾರ್ಯವಾಗಿ ಪೋನಿಟೇಲ್ ಕಟ್ಟುತ್ತಿದ್ದಾಳೆ. ಈಗ ತನ್ನ ಮೊಮ್ಮಕ್ಕಳ ನೀಳ ಜಡೆ ಹೆಣೆದು ತೃಪ್ತಿ ಪಡುವ ಅವಳನ್ನು ಮೊಮ್ಮಕ್ಕಳು "ಅಜ್ಜಿ ನಿನ್ನ ತಲಿ ಹಂಜಿಬುಟ್ಟೆಯಾದ್ರೂ ಪೋನಿಟೇಲ್ ಕಟಗೊಂಡು ಫ್ಯಾಶನ್ ಮಾಡ್ತಿ. ನಮಗ ಮಾತ್ರ ಕೂದಲಾ ಕತ್ತರಿಸಿಗೋಬ್ಯಾಡ್ರಿ. ಜಡಿ ಹಾಕ್ಕೊಳ್ರಿ, ಅಂತಿ'' ಎಂದು ಮೂದಲಿಸಿದಾಗ ಗಂಗಜ್ಜಿಗೆ ಗಂಗಾವನದ ಕಥೆ ನೆನಪಾಗದೆ ಇದ್ದೀತೆ?

ಬಹುವೇ ವರುಷಗಳಿಂದ ಬನಾರಸ ಸೀರೆಗಳು ಜಗತ್ತಿನಾದ್ಯಂತ ಗಳಿಸಿದ ತನ್ನ ಖ್ಯಾತಿಯನ್ನು ಸ್ಥಿರವಾಗುಳಿಸಿಕೊಂಡು ಬಂದಿದೆ. ಬಡಿವಾರ (Fashion)ದ ಎಷ್ಟೋ ಯುಗಗಳು ಬಂದು ಹೋದವು. ಆದರೆ ಬನಾರಸ ಸೀರೆಗಳ ಅಸ್ತಿತ್ವ ಹೇಗೋ ಹಾಗೆಯೋ ಇದೆ. ಕಾರಣವಿಷ್ಟೇ ಅವು ಸಮಯಾನುಸಾರ ತಮ್ಮ ರೂಪ, ಡಿಸೈನ್‌ಗಳನ್ನು ಬದಲಿಸುತ್ತಾ ಇರುತ್ತವೆ.



# ಬನಾರಸ ಜರತಾರಿ ಸೀರೆಗಳು

ಲತಾ ಸುರೇಂದ್ರ

ಪಾಕಿಸ್ತಾನ ಬೇರೆಯಾದ ನಂತರ ಢಾಕಾದಿಂದ ಸೀರೆಗಳು ಬರುವುದು ಕಡಿಮೆಯಾದವು. ಪಂಜಾಬದ ಭಟಿಂಡಾದಿಂದ ಇಂತಹ ಸೀರೆಗಳು ಬರಲಾರಂಭಿಸಿದುವು. ಆದರೆ ಬನಾರಸದಲ್ಲಿ ಢಾಕಾ ಸೀರೆಗಳ 'ಹುಬೇಹುಬ' ನಕಲು ಪ್ರಾರಂಭವಾಯಿತು. ಅಂಚಿನ ಸೀರೆಗಳ ಪ್ರಚಾರ ಹೆಚ್ಚಾಗಿದ್ದರೂ 'ಬನಾರಸ ಅಂಚಿನ' ಸೀರೆಗಳು ಹೇರಳವಾಗಿ ಪೇಟೆಯಲ್ಲಿ ಕಾಣಲಾರಂಭಿಸಿದವು. ಬನಾರಸಿ ಎಳೆಗಳು ಗ್ವಾಲಿಯರ್ ಎಳೆಗಳ ಸೀರೆಗಳ ಜತೆ ಮಾರುಕಟ್ಟೆಯಲ್ಲಿ ಸ್ಪರ್ಧಿಗಳಾದವು. ಬನಾರಸ (ವಾರಣಾಸಿ)ದ ನೇಕಾರರು ತಮ್ಮ ಕಲೆಯಲ್ಲಿ ತುಂಬ ನಿಷ್ಣಾತರು ಎಂಬುದನ್ನು ಮಾತ್ರ ಒಪ್ಪಲೇಬೇಕು. ಯಾವುದೇ ಒಂದು ಮಾದರಿಯನ್ನು ಅವರ ಇದಿರಿಟ್ಟರೆ,



(ಸೀರೆಗಳು : ಸಂಪತ್ ಸಿಲ್ಕ್ಸ್, ತಿರುಚ್ಚಿ ಅವರ ಸೌಜನ್ಯದಿಂದ)

[illegible]

ಪರಂಪರಾಗತ ಸೀರೆಗಳಲ್ಲಿ ಚನಿಯಾಪೋತ, ಜಂಗಲಾ, ಕತಿಯಾಲ, ಬೂಟಿದಾರ, ಬಾಲೂಚರ ಮುಂತಾದವು ಬಹುವೇ ಪ್ರಸಿದ್ಧ. ಮೊಟ್ಟಮೊದಲು ಬಂಗಾಲದಲ್ಲಿ ನೇಯಲ್ಪಡುತ್ತಿದ್ದ "ಬಾಲೂಚರ" ಸೀರೆಗಳು ಈಗ ಬಹುವರುಷಗಳಿಂದ ಬನಾರಸ್ ನೇಕಾರರು ನೇಯುತ್ತಿದ್ದಾರೆ. ಇದರಲ್ಲಿ ವಿಶೇಷವಾಗಿ ಸಣ್ಣ ಸಣ್ಣ ಎಲೆ, ಬಳ್ಳಿ–ಎಲೆಗಳ ಸೂಕ್ಷ್ಮ ನೇಯ್ಗೆ ಇರುತ್ತವೆ. ಸೀರೆಯ ಸೆರಗುಗಳಲ್ಲಿ ಈ ಎಲ್ಲ ಆಕೃತಿಗಳನ್ನು ಕೈಯಿಂದಲೇ ಮಾಡಬೇಕಾಗುತ್ತದೆ. ಕಾರಣ ಇದನ್ನು ನಿಷ್ಣಾತ ನೇಕಾರರೇ ಮಾಡುತ್ತಾರೆ. 'ಬಾಲೂಚರ' ಈ ಒಂದು ಸೀರೆಯ ನೇಯ್ಗೆಗೆ ಸುಮಾರು 40 ದಿನಗಳೇ ಬೇಕಾಗುತ್ತದೆ. ಕುಶಲ ನೇಕಾರ ತನ್ನ ಸಂಪೂರ್ಣ ಬುದ್ಧಿಮತ್ತೆಯನ್ನು ಈ ಸೀರೆಯ ನೇಯ್ಗೆಯಲ್ಲಿ ತೊಡಗಿಸುತ್ತಾನೆ. ಅವನ ಸಂಪೂರ್ಣ ಕಲಾಕೌಶಲ್ಯ ಈ ಸೀರೆಯ ಸೆರಗಿನಲ್ಲೇ ಹುದುಗಿಕೊಂಡಿರುತ್ತದೆ. ಭಾರತೀಯ ರೀತಿಯಲ್ಲಿ ಈ ಸೀರೆಯನ್ನುಟ್ಟುಕೊಂಡಾಗ ಅದರ ಕಲಾಕೃತಿ ಮುಂದೆ ಕಾಣುತ್ತದೆ. ಕೆಂಪು, ಹಸಿರು, ನೀಲಿ ಹಾಗೂ ಸೋನೇರಿ ರೇಶಿಮೆ (ಎಳೆ)ಯದ್ದೇ ಆಗಿರುತ್ತದೆ. ಮತ್ತು ರೇಶಿಮೆಯಿಂದಲೇ ನೇಯಲ್ಪಟ್ಟಿರುತ್ತದೆ. ನೇಕಾರರು ಮೊದಲು ನಕ್ಷೆಯನ್ನು ಮಾಡಿಕೊಳ್ಳುತ್ತಾರೆ. ನಂತರ ಅಂಚು, ನಂತರ ಮಗ್ಗದ ಮೇಲೆ ಎಳೆದು ಸೀರೆಯ ಅಂಚಿನಲ್ಲಿ ಸೂಜಿಯಿಂದ ಆಕೃತಿಯನ್ನು ಹೆಣೆಯುತ್ತಾರೆ. ಈ ಪುರಾತನ ಸೀರೆಯಲ್ಲಿ ಬಣ್ಣಗಳ, ಆಕೃತಿಗಳ ಸರಿಯಾದ ಹೊಂದಾಣಿಕೆಯಾಗುತ್ತದೆ. ತುಂಬಾ ಚಿತ್ತಾಕರ್ಷಕವಾಗಿರುವ ಈ ಸೀರೆಗಳ ರಚನೆಯಲ್ಲಿ, ನೇಯ್ಗೆಯಲ್ಲಿ ಅತೀ ಅಚ್ಚಾದ (Dark) ಅತೀ ಮಸುಕಾದ (Fade) ಬಣ್ಣದ ರೇಶಿಮೆಯನ್ನು ಉಪಯೋಗಿಸುವದಿಲ್ಲ.

ಬನಾರಸದಲ್ಲಿ 'ಬಾಲೂಚರ' ಸೀರೆಯ ನೇಕಾರರು ಅತೀ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇವರಲ್ಲಿ ಶ್ರೀ ಕಲ್ಲೂ ಹಾಫೀಜ ಹಾಗೂ ಅವರ ಮಗ ಜಾಫರ ಆಲಿ ಬಹಳೇ ಪ್ರಸಿದ್ಧ ಹಾಗೂ ಕುಶಲ ಕೆಲಸಗಾರರು. ಈ ಕುಶಲ ಕಾರ್ಮಿಕರು ಸಮಯಾನುಸಾರ 'ಬಾಲೂಚರ' ಸೀರೆಗಳ ಸೆರಗಿನ ಆಕೃತಿಯಲ್ಲಿ ಅಗಣಿತ ಬದಲಾವಣೆಯನ್ನು ಮಾಡಿದರು. ನವಾಬರ ರಾಜ್ಯಗಳಲ್ಲಿ ಮುಸ್ಲೀಮರ ಆಕೃತಿಗಳನ್ನು ಸೆರಗಿನಲ್ಲಿ ಮಾಡತೊಡಗಿದರು. ಈಸ್ಟ್ ಇಂಡಿಯಾ ಕಂಪೆನಿಯ ಕಾಲದಲ್ಲಿ ಸೀರೆಯ ಸೆರಗಿನಲ್ಲಿನ ಆಕೃತಿಗಳು ವಿದೇಶೀರೂಪವನ್ನು ಹೊಂದಿದ್ದುವು. ತಲೆಯ ಮೇಲೆ ಹ್ಯಾಟ್ ಮತ್ತು ಬೊನೆಟ್ ಕಾಣತೊಡಗಿದವು. ಆಗಾಗ ಇವರು ಕುದುರೆಯ ಮೇಲೆ ಕುಳಿತ ಆಕೃತಿಗಳೂ ಕಾಣತೊಡಗಿದುವು. ಹಿಂದೂರಾಜರ ಪ್ರಭಾವದಿಂದ ಮತ್ತೆ ಪುನಃ ಮುಂಡಾಸು ಸುತ್ತಿದ, ಹುಕ್ಕಾ ಸೇದುವ ರಾಜರ ಆಕೃತಿಗಳು 'ಬಾಲೂಚರ' ಸೀರೆಗಳ ಸೆರಗಿನ ಮೇಲೆ ಅಲಂಕರಿಸತೊಡಗಿದವು.

### ಇತಿಹಾಸದ ಪುಟಗಳಲ್ಲಿ ಬನಾರಸ ಸೀರೆಗಳ ವಸಂತ

ಇಂದಿಗೂ ಕೂಡ ಸೀರೆ ಎಂದರೆ ಸಾಕು ಬನಾರಸ ಸೀರೆಗಳದ್ದೇ ಮಾತು. ಬಡಿವಾರ–ಫ್ಯಾಶನ್ ಒಂದು ವರ್ತುಲ. ಅದರ ಪುನರಾವರ್ತನೆಯಾಗುತ್ತಲೇ ಇರುತ್ತದೆ. ಇಂದಿನ ರೀತಿ ನಾಳೆ ಇರದು, ನಾಳೆ ಮತ್ತೆ ಹೊಸ ಮಾದರಿ, ಹೊಸ ಪೋಷಾಕು ಮತ್ತೆ ಹಳೆಯದೇ ಹೊಸದಾಗಿ ಆವಿರ್ಭವಿಸುತ್ತದೆ. ಆದರೆ ಬನಾರಸ ಸೀರೆಗಳ ವಿಷಯಕ್ಕೆ ಬಂದಾಗ ಅದೆಂದೂ ಜನತೆಯ ಕಂಗಳಲ್ಲಿ ಮಾಸಿಲ್ಲ – ಹಳಸಿಲ್ಲ ಅದೆಂದಿಗೂ ಹೊಚ್ಚ ಹೊಸದು ಹಚ್ಚ ಹಸಿರು Evergreen ಅನ್ನುತ್ತಾರಲ್ಲಾ ಹಾಗೆ. ನಾವು ಬನಾರಸ ಸೀರೆಗಳ ಇತಿಹಾಸದತ್ತ ಗಮನ ಹರಿಸೋಣ. ಇಂದಿನಿಂದ ಸುಮಾರು 2500 ವರುಷಗಳಿಗಿಂತಲೂ ಪೂರ್ವ ಅಂದರೆ ಬೌದ್ಧ ಕಾಲದಲ್ಲಿಯೂ ಕೂಡ ನಾಜೂಕಾದ ರೇಶಿಮೆ ವಸ್ತ್ರ ಸೀರೆಗಳನ್ನು ನೇಯುತ್ತಿದ್ದರು. ಅದರ ಮೇಲೆ ತರತರದ ಎಲೆ ಬಳ್ಳಿಗಳನ್ನು ಬಿಡಿಸುತ್ತಿದ್ದರು. ಆಗ ಬನಾರಸ ರೇಶಿಮೆಯಷ್ಟೇ ಅಲ್ಲ ಉಣ್ಣೆ ಬಟ್ಟೆಗಳ ಪ್ರಧಾನ ಕೇಂದ್ರವಾಗಿತ್ತು. ಬನಾರಸದಲ್ಲಿ ತಯಾರಾದ ಸೀರೆಗಳು ದೇಶದ ನಾನಾ ಭಾಗಗಳಲ್ಲಿಯೂ ಆ ಕಾಲದಲ್ಲೇ ಪ್ರಸಿದ್ಧಿಯನ್ನು ಹೊಂದಿದ್ದವು. ಪಾಲಿ ಸಾಹಿತ್ಯದಲ್ಲಿನ ಒಂದು ಉಲ್ಲೇಖದಲ್ಲಿ ಬನಾರಸದ ನಾಜೂಕಿನ ತೆಳುವಾದ ಸೀರೆಗಳಿಗೆ 'ಅರ್ಧಕಾಸೀಯ" ಎನ್ನುತ್ತಿದ್ದರು. ಮತ್ತು ಇದರ ಬೆಲೆ ಐದುನೂರು ಕಾರ್ಷಾಪಣ (ಆ ಕಾಲದ ನಾಣ್ಯ) ಎಂದಿದೆ. ಇದನ್ನು ಉದಾಹರಿಸುವ ತಾತ್ಪರ್ಯವಿಷ್ಟೇ, ಪುರಾತನ ಕಾಲದಲ್ಲೂ ಇಂದಿನಂತೆ ಬನಾರಸ ಸೀರೆಗಳು ಬೆಲೆಯುಳ್ಳವಾಗಿದ್ದವು. ಪ್ರಸಿದ್ಧಿ, ಜನಮೆಚ್ಚುಗೆಯನ್ನು ಹೊಂದಿದ್ದುವು. ಗುಪ್ತರ ಕಾಲದಲ್ಲಿಯೂ ಕೂಡ ಬನಾರಸ ಸೀರೆಗಳು ಬಹಳೇ ಖ್ಯಾತಿ ಹೊಂದಿದ್ದುವು. ಅಜಂತಾದ ಒಂದು ಭಿತ್ತಿ ಚಿತ್ರದಲ್ಲಿ 'ಹಂಸ ಜಾತಕ' ಬಿಡಿಸಿದೆ. ಚಿತ್ರದ ಗೋಡೆಗಳ ಮೇಲೆ ಬನಾರಸದ ನೇಯ್ಗೆಯ ಮೂರು ಸೀರೆಗಳು ಜೋತುಕೊಂಡಿವೆ. ಅವುಗಳ ಕಲೆ ಆ ಕಾಲದ ಬನಾರಸಿ ಕಾರ್ಮಿಕರ ಬಣ್ಣಗಳ ಹಾಗೂ ನಕ್ಷೆಗಳ ಪ್ರಾವೀಣ್ಯತೆಯನ್ನು ಎತ್ತಿ ಸಾರುತ್ತಿವೆ.

ಬನಾರಸಿ ಸೀರೆ ಅತಿ ಪುರಾತನವಾದ್ದಾದರೂ, ಇಂದಿಗೂ ತನ್ನತನವನ್ನು, ನಾವೀನ್ಯತೆಯನ್ನು ಅತೀ ಚಾಕಚಕ್ಯತೆಯಿಂದ ಉಳಿಸಿಕೊಂಡು ಬಂದ ಸೀರೆ. ನೀರೆ ಜಾರಿದರೂ ಕೂಡ ಈ ಬನಾರಸ ಸೀರೆ ತನ್ನ ಸೆರಗಿನಂಚಿನಲ್ಲಿ ಭಾರತೀಯ ಸಂಸ್ಕೃತಿಯ ಇತಿಹಾಸವನ್ನು ಹುದುಗಿಸಿಟ್ಟುಕೊಂಡ ಏಕಮೇವ ಸೀರೆ. ಬನಾರಸ ಜರತಾರಿಯಂಥ ಸೀರೆ "ನ ಭೂತೋ ನ ಭವಿಷ್ಯತಿ". ಈ ಹಿಂದೂ ಇದ್ದಿಲ್ಲ. ಮುಂದಿಗೂ ಇಂಥದ್ದು ಬರುವಂತಿಲ್ಲ. ಫ್ಯಾಶನ್‌ಗಳೆಷ್ಟೋ ಬದಲಾಗಲಿ, ಮಾದರಿಗಳೆಷ್ಟೋ ಬರಲಿ ಆದರೆ ಬನಾರಸ್ ಸೀರೆಗಳಿಗೆ ಇಂದಿಗೂ ಸರಿಸಾಟಿ ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಏನಲ್ಲ.




## ಕಥೆಗೊಂದು ಚಿತ್ರ

ಆಯ್ಕೆಯಾದ ಕಥೆಗಳಿಗೆ ಚಿತ್ರ ಹಾಕಿ ಪ್ರಕಟಿಸುವುದು ವಾಡಿಕೆ. ಈಗ ಲೇಖಕಿಯರಿಗೆ ಇಲ್ಲಿ ಚಿತ್ರವೊಂದನ್ನು ಕೊಟ್ಟಿದ್ದೇವೆ. ಈ ಚಿತ್ರಕ್ಕೆ ಸೂಕ್ತ ಕಥೆಯನ್ನು ಬರೆದು ಕಳಿಸಲು ಈ ಮೂಲಕ ಕೋರುತ್ತಿದ್ದೇವೆ. ಕಥೆ ಎರಡು ಫುಲ್‌ಸ್ಕೇಪ್ ಹಾಳೆಯ ಒಳಗಿರಬೇಕಾದುದು ಅಗತ್ಯ. ಆಯ್ಕೆ ಮೂರು ಕಥೆಗಳನ್ನು ಪ್ರಕಟಿಸಲಾಗುವುದು. ಪ್ರಕಟಿತ ಪ್ರತಿಯೊಂದು ಕಥೆಗೂ 50/– ರೂ. ಸಂಭಾವನೆ ಇದೆ. ಕಥೆಗಳನ್ನು ಹಿಂದಿರುಗಿಸಲಾಗುವುದಿಲ್ಲವಾದುದರಿಂದ ಅಂಚೆ ಚೀಟಿಗಳನ್ನು ಅಂಟಿಸಿ ಕಳಿಸಬಾರದಾಗಿ ಕೋರಲಾಗಿದೆ.

ಕಥೆಗಳು ಬಂದು ತಲುಪುವ ಕೊನೆಯ ದಿನಾಂಕ : 20–11–1992.

# ಪ್ರಪಂಚ ಪ್ರದಕ್ಷಿಣೆ

## ಭಾರತ — ಫ್ರಾನ್ಸ್ ಸಂಬಂಧ

ಭಾರತ ಮತ್ತು ಫ್ರಾನ್ಸ್ ಸಂಬಂಧಗಳು ಶತಮಾನಗಳಷ್ಟು ಹಳೆಯವು ಹಾಗೂ ಸೌಹಾರ್ದಯುತವಾದುವು. ಅಧ್ಯಕ್ಷ ಮಿತೆರಾ ಅಧಿಕಾರಕ್ಕೆ ಬಂದ ನಂತರ ಈ ಸಂಬಂಧಗಳು ಮತ್ತಷ್ಟು ಸುಧಾರಿಸಿದವು. ಆದರೆ ಕಳೆದ ಎರಡು ವರ್ಷಗಳಲ್ಲಿ ಈ ಸಂಬಂಧಗಳಲ್ಲಿ ಸ್ವಲ್ಪ ಹಿನ್ನಡೆ ಉಂಟಾಗಿದೆ. ಅದಕ್ಕೆ ಮುಖ್ಯ ಕಾರಣ ಎಂದಿನಿಂದಲೂ ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದವನ್ನು ವಿರೋಧಿಸುತ್ತ ಬಂದಿದ್ದ ಫ್ರಾನ್ಸ್ ಅದಕ್ಕೆ ಸಹಿ ಹಾಕಿರುವುದು. ಈ ಒಪ್ಪಂದ ತಾರತಮ್ಯ ಸ್ವರೂಪದ್ದಾಗಿರುವುದರಿಂದ ಈಗಿರುವಂತೆ ಒಪ್ಪಂದಕ್ಕೆ ಸಹಿ ಹಾಕಲು ಸಾಧ್ಯವಿಲ್ಲವೆಂಬುದು ಭಾರತದ ನಿಲುವು. ಹೀಗಾಗಿ ತನ್ನ ರಾಕೆಟ್ ತಂತ್ರಜ್ಞಾನವನ್ನು ಭಾರತಕ್ಕೆ ಒದಗಿಸಲು ಈ ಮುಂಚೆ ಸಮ್ಮತಿಸಿದ್ದ ಫ್ರಾನ್ಸ್ ಈಗ ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದದ ನೆಪವನ್ನು ಒಡ್ಡುತ್ತಿರುವುದಲ್ಲದೆ ಭಾರತಕ್ಕೆ ಪರಿಷ್ಕೃತ ಯುರೇನಿಯಂ ಪೂರೈಸುವ ಒಪ್ಪಂದ ಮುಂದಿನ ವರ್ಷ ಕೊನೆಗೊಳ್ಳುವುದರಿಂದ ಮುಂದೆ ಸರಬರಾಜು ಮಾಡಲು ಹೊಸ ಪರಿಸ್ಥಿತಿಯ ಮೇರೆಗೆ ಮಾತುಕತೆ ನಡೆಸಬೇಕೆಂದು ಷರತ್ತು ಹಾಕಿರುವುದೇ ಉಭಯ ರಾಷ್ಟ್ರಗಳ ನಡುವಣ ಸ್ನೇಹ ಸಂಬಂಧಗಳಿಗೆ ಅಡ್ಡಿಯಾಗಿದೆ.

ಇಂಥ ಇಕ್ಕಟ್ಟಿನ ಪರಿಸ್ಥಿತಿಯ ನಡುವೆಯೂ ಭಾರತದ ಪ್ರಧಾನಿ ಇತ್ತೀಚೆಗೆ ಫ್ರಾನ್ಸ್‌ಗೆ ಭೇಟಿ ನೀಡಿ ರಾಜಧಾನಿ ಪ್ಯಾರಿಸ್‌ನಲ್ಲಿ ಅಧ್ಯಕ್ಷ ಮಿತೆರಾ ಅವರೊಂದಿಗೆ ನಡೆಸಿದ ಮಾತುಕತೆಗಳು ದ್ವಿಪಕ್ಷೀಯ ಸಂಬಂಧಗಳ ಸುಧಾರಣೆಗೆ ಈ ಹೊಸ ಪರಿಸ್ಥಿತಿ ಅಡ್ಡಿಯಾಗದು ಎಂಬ ಆಶಾವಾದವನ್ನು ಉಂಟು ಮಾಡಿವೆ. ಭಾರತ ಕೈಗೊಂಡಿರುವ ದಿಟ್ಟ ಆರ್ಥಿಕ ಮಾರ್ಪಾಡುಗಳನ್ನು ಫ್ರಾನ್ಸ್ ಅಧ್ಯಕ್ಷ ಮಿತೆರಾ ಮುಕ್ತ ಕಂಠದಿಂದ ಪ್ರಶಂಸಿರುವುದಲ್ಲದೆ ಒಂದು ಬಿಲಿಯನ್ ಫ್ರಾಂಕ್‌ಗಳ ಸಾಲದ ನೆರವನ್ನು ನೀಡಲು ಸಮ್ಮತಿಸಿದ್ದಾರೆ. ಅಣ್ವಸ್ತ್ರ ಪ್ರಸರಣ ನೀತಿಗೆ ಸಂಬಂಧಿಸಿದಂತೆ ಫ್ರಾನ್ಸ್ ಭಾರತದ ವಾಸ್ತವಿಕ ನಿಲುವನ್ನು ಅರ್ಥ ಮಾಡಿಕೊಂಡು ವ್ಯವಹರಿಸಿದರೆ ಈ ಸಮಸ್ಯೆಯೂ ಅಪರಿಹಾರ್ಯವೇನಲ್ಲ.

## ಭಾರತ ಶ್ರೀಲಂಕಾ ಸಂಬಂಧ :

ಪ್ರಧಾನಿ ನರಸಿಂಹರಾಯರು ಅಧಿಕಾರಕ್ಕೆ ಬಂದ ನಂತರ ಭಾರತದೊಡನೆ ಶ್ರೀಲಂಕಾ ಸಂಬಂಧಗಳು ಗಮನಾರ್ಹವಾಗಿ ಸುಧಾರಿಸಿವೆ ಎಂದು ಶ್ರೀಲಂಕಾ ಅಧ್ಯಕ್ಷ ಪ್ರೇಮದಾಸ ತಮ್ಮ ಇತ್ತೀಚಿಗಿನ ದೆಹಲಿ ಭೇಟಿಯ ಸಮಯದಲ್ಲಿ ಹೇಳಿರುವುದು ಗಮನಾರ್ಹ. ತಾವು ಪ್ರಧಾನಿಯಾಗಿದ್ದಾಗ ಭಾರತ–ಶ್ರೀಲಂಕಾ ಶಾಂತಿ ಒಪ್ಪಂದವನ್ನು ಬಹಿರಂಗವಾಗಿ ವಿರೋಧಿಸಿದ್ದ ಪ್ರೇಮದಾಸ ಅವರ ಹಿಂದಿನ ಧೋರಣೆ ಬದಲಾಗಿದೆಯೇ ಎಂದರೆ ಹಾಗೇನೂ ಕಾಣುವುದಿಲ್ಲ. ರಾಷ್ಟ್ರಪತಿ ಶಂಕರ್ ದಯಾಳ್ ಶರ್ಮ ಅವರು ನೀಡಿದ ಸತ್ಕಾರ ಕೂಟದಲ್ಲಿ ಮಾತನಾಡುತ್ತ ರಾಷ್ಟ್ರಪತಿಯವರು ಭಾರತ – ಶ್ರೀಲಂಕಾ ಒಪ್ಪಂದವನ್ನು ಶ್ರೀಲಂಕಾದ ಜನಾಂಗೀಯ ಸಮಸ್ಯೆಯನ್ನು ಪರಿಹರಿಸಲು ಒಂದು ಪ್ರಾಮಾಣಿಕ ಪ್ರಯತ್ನ ಎಂದು ವರ್ಣಿಸಿದಾಗಲೂ ಪ್ರೇಮದಾಸ ಯಾವುದೇ ಪ್ರತಿಕ್ರಿಯೆ ವ್ಯಕ್ತ ಪಡಿಸಲಿಲ್ಲ. ಅಂದರೆ ಈ ಒಪ್ಪಂದದ ಬಗೆಗೆ ಅವರ ನಿಲುವು ಬದಲಾಗಿಲ್ಲ. ಆದರೂ ಉಭಯ ರಾಷ್ಟ್ರಗಳಲ್ಲಿ ಈಗಿರುವ ಹೊಸ ಆಡಳಿತಗಳು ವಾಸ್ತವತೆಯ ನೆಲಗಟ್ಟಿನಲ್ಲಿ ಪರಸ್ಪರ ಸಂಬಂಧಗಳನ್ನು ಸುಧಾರಿಸಬಹುದು ಎಂಬ ಅಭಿಪ್ರಾಯವನ್ನು ಪ್ರೇಮದಾಸ ವ್ಯಕ್ತಪಡಿಸಿದ್ದಾರೆ. ಸಾರ್ಕ್ ಅಧ್ಯಕ್ಷರಾಗಿ ಪ್ರಥಮ ಬಾರಿಗೆ ಭಾರತಕ್ಕೆ ಭೇಟಿ ನೀಡಿದ ಪ್ರೇಮದಾಸ ತಾನು ಮತ್ತು ಪ್ರಧಾನಿ ನರಸಿಂಹರಾವ್ ಜತೆಗೂಡಿ ಕೆಲಸ ಮಾಡಲು ಒಂದು ಅಲಿಖಿತ ಒಪ್ಪಂದ ಮಾಡಿಕೊಂಡಿರುವುದಾಗಿ ಹೇಳಿದ್ದಾರೆ. ಆದರೆ ಎರಡೂ ರಾಷ್ಟ್ರಗಳ ನಡುವೆ ಉಳಿದಿರುವ ಜ್ವಲಂತ ಸಮಸ್ಯೆಯೆಂದರೆ ಭಾರತಕ್ಕೆ ಬಂದಿರುವ ಶ್ರೀಲಂಕಾ ನಿರಾಶ್ರಿತರ ವಾಪಸಾತಿ ಸಮಸ್ಯೆ.ಮತ್ತೊಂದು ರಾಜೀವ್‌ಗಾಂಧಿ ಹತ್ಯೆಯ ಪ್ರಮುಖ ಯೋಜಕರಾದ ಎಲ್.ಟಿ.ಟಿ.ಯ ನಾಯಕ ಪ್ರಭಾಕರ್ ಅವರನ್ನು ಭಾರತಕ್ಕೆ ಒಪ್ಪಿಸುವ ವಿಚಾರ. ಈ ಎರಡೂ ವಿಷಯಗಳ ಬಗೆಗೆ ಪ್ರೇಮದಾಸ ಯಾವುದೇ ನಿಶ್ಚಿತ ಅಭಿಪ್ರಾಯ ವ್ಯಕ್ತಪಡಿಸಿಲ್ಲ. ಜತೆಗೆ ಶ್ರೀಲಂಕಾದಲ್ಲಿರುವ ಇತರ ತಮಿಳರ ಭವಿಷ್ಯದ ಪ್ರಶ್ನೆಯೂ ಇತ್ಯರ್ಥವಾಗಬೇಕಾಗಿದೆ.

## ವನಿತಾ ಪದಸಂಪದ 49ರ ಫಲಿತಾಂಶಗಳು

ಈ ಬಾರಿ ನೂರಾರು ಅಭ್ಯರ್ಥಿಗಳು ಸರಿಯುತ್ತರ ಬರೆದಿದ್ದರಿಂದ ಲಾಟರಿ ಪದ್ಧತಿಯಲ್ಲಿ ಹತ್ತು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ಬಹುಮಾನದ ಮೊತ್ತವನ್ನು ಅವರಿಗೆ ಸಮನಾಗಿ ಹಂಚಲಾಗುವುದು. ಹೀಗೆ ಆಯ್ಕೆಯಾಗಿ ಬಹುಮಾನ ಪಡೆಯಲಿರುವ ಹತ್ತು ಅಭ್ಯರ್ಥಿಗಳ ಹೆಸರುಗಳನ್ನು ಕೆಳಗೆ ನೀಡಲಾಗಿದೆ.

1. ಮೀರ ರಾವ್, ಹೈದರಾಬಾದ್
2. ಕುಮಾರಿ ಚಂದ್ರಕಲಾ ಮಾರನಾಡ, ಗದಗ
3. ಕೆ.ಎನ್. ಗಾಯತ್ರಿ, ಕೊಳ್ಳೇಗಾಲ
4. ಮಂಜುಳಾ ಕುಮಾರಸ್ವಾಮಿ, ಬೆಳಗಾವಿ.
5. ಶ್ರೀಮತಿ ರಮಾಮಣಿ ಜಿ. ಬೆಂಗಳೂರು
6. ಸರಸ್ವತಿ ಪರಮೇಶ್ವರ ಭಟ್ಟ ಯಾಲಕ್ಕೆ, ಕಡತೋಕ
7. ಬಿ.ಎನ್. ಗಾಯತ್ರಿ, ದಾವಣಗೆರೆ
8. ಶ್ರೀಮತಿ ಶಾಂತಲಾ ವಿ. ಹೆಗಡೆ, ಮಂಗಳೂರು
9. ಬಿ.ಎನ್. ಉಮಾ, ಮೈಸೂರು
10. ಜಿ.ಕೆ. ಭಾರತಿ, ಉಪ್ಪಳ್ಳಿ

## ರುಮೇನಿಯಾದಲ್ಲಿ...

ದೀರ್ಘಕಾಲ ಕಮ್ಯೂನಿಸ್ಟ್ ಆಡಳಿತವನ್ನು ಅಪ್ಪಿಕೊಂಡಿದ್ದ ರುಮೇನಿಯಾದಲ್ಲಿ ಇತ್ತೀಚೆಗೆ ನಡೆದ ಚುನಾವಣೆಗಳಲ್ಲಿ ಡೆಮಾಕ್ರಟಿಕ್ ನ್ಯಾಷನಲ್ ಸಾಲ್ವೇಷನ್ ಪಕ್ಷ ಗೆದ್ದಿದ್ದು ರಾಷ್ಟ್ರಪತಿ ಐಯಾನ್ ಲಿಯೆಸ್ಕು ಅಧಿಕಾರದಲ್ಲಿ ಮುಂದುವರಿಯಲಿದ್ದಾರೆ. ಈ ಲಿಯೆಸ್ಕು ಕೇವಲ ಮೂರು ವರ್ಷಗಳ ಹಿಂದೆ ಕಮ್ಯೂನಿಸ್ಟ್ ಪಕ್ಷದ ನಾಯಕರಾಗಿದ್ದು ಸರ್ವಾಧಿಕಾರಿ ನಿಕೋಲಾಯ್ ಚೆಸೆಸ್ಕು ಅವರ ನಿಕಟವರ್ತಿಯಾಗಿದ್ದರು. 1989ರಲ್ಲಿ ನಡೆದ ರಕ್ತಕ್ರಾಂತಿಯಲ್ಲಿ ಚೆಸೆಸ್ಕು ಹತರಾದರು. ಆದರೂ ಲಿಯೆಸ್ಕು ಹೇಗೋ ರಾಷ್ಟ್ರಪತಿಯಾಗಿ ಮುಂದುವರಿದರು. ಇನ್ನು ಮುಂದೆಯೂ ಮುಂದುವರೆಯಲಿದ್ದಾರೆ.

ಆದರೆ ಪಕ್ಷ ಬದಲಾದ ಮಾತ್ರಕ್ಕೆ ಅವರ ಆಡಳಿತವೇನೂ ಸುಲಭವಾಗದು. ರಾಷ್ಟ್ರದ ಆರ್ಥಿಕ ಸಮಸ್ಯೆ ಅವರಿಗೆ ದೊಡ್ಡ ಆತಂಕವಾಗಿ ಪರಿಣಮಿಸಿದೆ. ಸಾಧಾರಣ ಜನರಿಗೆ ಆಹಾರ ಮತ್ತಿತರ ಅಗತ್ಯ ವಸ್ತುಗಳು ದೊರೆಯುತ್ತಿಲ್ಲ. ಎಷ್ಟೋ ಮಂದಿ ಕಮ್ಯೂನಿಸ್ಟ್ ಚೆಸೆಸ್ಕು ಆಡಳಿತದಲ್ಲಿ ತಮಗೆ ಹೊಟ್ಟೆಗೆ ಅನ್ನವಾದರೂ ದೊರೆಯುತ್ತಿತ್ತು ಎಂದು ಹೇಳುತ್ತಿದ್ದಾರೆ. ಹಾಗೆಂದು ರುಮೇನಿಯಾದಲ್ಲಿ ಹಣ ಇಲ್ಲ ಎಂದಲ್ಲ – ಅದು ಕೆಲವೇ ಮಂದಿಯ ಬಳಿ ಸುಗ್ರಹಿತವಾಗಿದೆ. ಜತೆಗೆ ಇಲ್ಲಿ ಅಗ್ಗದಲ್ಲಿ ದೊರೆಯುವ ವಸ್ತುಗಳನ್ನು ಕೊಳ್ಳಲೂ ಆ ಜನರಲ್ಲಿ ದುಡ್ಡಿಲ್ಲ. ಈ ಅಸಮತೆ ನಿವಾರಣೆಯಾಗುವವರೆಗೆ ರುಮೇನಿಯಾದಲ್ಲಿ ಶಾಂತಿ, ನೆಮ್ಮದಿ ಸಾಧ್ಯವಿಲ್ಲ.

## ವಿಮಾನ ನಿರ್ಮಿಸಿದ ಅತ್ಯಂತ ಕಿರಿಯರು



*ರಘುವೀರ ಖನ್ನಾ (15) ಹಾಗೂ ಮನಿಷಾ ಜೋಷಿ (14) ದೆಹಲಿಯ ಡೂನ್ ಶಾಲೆಯ ವಿದ್ಯಾರ್ಥಿಗಳು. ಇವರಿಬ್ಬರೂ ಸೇರಿ 1985 ಏಪ್ರಿಲ್‌ನಲ್ಲಿ ಮೈಕ್ರೋಲೈಟ್ ವಿಮಾನವೊಂದನ್ನು ವಿನ್ಯಾಸಗೊಳಿಸಿ ರೂಪಿಸಿದರು. ಈ ವಿಮಾನವನ್ನು ಲೈಸೆನ್ಸ್ ಪಡೆದ ಪೈಲಟ್ ಒಬ್ಬರು 1988ರಲ್ಲಿ ಯಶಸ್ವಿಯಾಗಿ ಹಾರಿಸಿದರು.*



ಶ್ರುತಿ ಹೆಗಡೆ : 18–11–1991
ತಾಯಿ : ಸ್ಮಿತಾ ಹೆಗಡೆ, ತೀರ್ಥಹಳ್ಳಿ



ಶೃತಿ : 6–11–1991
ತಾಯಿ : ಶುಭಾ ಸಿದ್ದೇಶ್ವರ, ಸೋಲಾಪುರ



ಮೇಘನಾ : 27–11–1991
ತಾಯಿ : ಕಲ್ಪನಾ ನಾಗರಾಜ್, ಸಂತೆಕಟ್ಟೆ



ಸಚಿನ್ : 20–11–1991
ತಾಯಿ : ಆಶಾ ನರಸಿಂಹ ನಾಯಕ್, ಉಡುಪಿ



ಕೆ. ವೆಂಕಟೇಶ್ : 23–11–1991
ತಾಯಿ : ಶ್ರೀಮತಿ ಕೆ.ಎನ್. ಚಂದ್ರಪ್ರಸಾದ್, ಬೆಂಗಳೂರು



ಶೇಷಗಿರಿ ನಾಯಕ್ : 16–11–1991
ತಾಯಿ : ಸಿ. ಉಮಾ ನಾಗೇಶ ನಾಯಕ್, ಸಾಲಿಗ್ರಾಮ

# ಹುಟ್ಟಿದ ಹಬ್ಬ





ಅಪೂರ್ವ ಶ್ರೀನಿವಾಸ್ : 2–11–1991
ತಾಯಿ : ಮಂಜುಳಾ ಶ್ರೀನಿವಾಸ್, ಬೆಂಗಳೂರು

# ವಾರ್ತಾ ವನಿತಾ

ದಿನಾಂಕ 16–9–92ರಂದು ಬೆಂಗಳೂರಿನ ರಾಜಾಜಿ ನಗರ ಯುವತಿ ಮತ್ತು ಮಹಿಳಾ ಮಂಡಳಿಯಲ್ಲಿ ಸದಸ್ಯೆಯರಿಗೆ ಕೇಶಾಲಂಕಾರ ಹಾಗೂ ಶೃಂಗಾರ ಸಾಮಗ್ರಿಗಳ ತಯಾರಿಕಾ ತರಗತಿಯನ್ನು ಉಚಿತವಾಗಿ ನಡೆಸಲಾಯಿತು.



ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಮೇ 1992ರಲ್ಲಿ ನಡೆಸಿರುವ ವಾಣಿಜ್ಯ ಪರೀಕ್ಷೆಯಲ್ಲಿ ಕನ್ನಡ ಟೈಪ್‌ರೈಟಿಂಗ್ ಜ್ಯೂನಿಯರ್ ಗ್ರೇಡ್‌ನಲ್ಲಿ ಕೊಡಾಜೆಯ ಪ್ರಭ ವಾಣಿಜ್ಯ ಶಾಲೆಯ ವಿದ್ಯಾರ್ಥಿನಿ ಸ್ವರ್ಣಲತಾ ಎನ್. ಎಸ್. ನಾಲ್ಕನೆಯ ರ್‍ಯಾಂಕ್ ಪಡೆದು ಉತ್ತೀರ್ಣರಾದರು.



ಚನ್ನಪಟ್ಟಣದ ರೋಟರಿ ಸಂಘದವರು ಆಗಸ್ಟ್ ತಿಂಗಳಿನಲ್ಲಿ ಚಿಕ್ಕ ಮಕ್ಕಳ ಕೃಷ್ಣವೇಷ ಸ್ಪರ್ಧೆಯನ್ನು ಏರ್ಪಡಿಸಿದರು.





ಬೆಂಗಳೂರಿನ ಸರಸ್ವತಿ ಶಿಶುಮಂದಿರದಲ್ಲಿ 20–8–1992ರಂದು ಗೋಕುಲಾಷ್ಟಮಿಯ ಪ್ರಯುಕ್ತ ಕೃಷ್ಣವೇಷ ಸ್ಪರ್ಧೆಯನ್ನು ಏರ್ಪಡಿಸಲಾಯಿತು.




ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯಲ್ಲಿ ಹೊನ್ನಾಳಿ ಜ್ಯೂನಿಯರ್ ಚೇಂಬರ್ ವತಿಯಿಂದ ಜೇಸಿ ಸಪ್ತಾಹದ ಅಂಗವಾಗಿ ದಿ–10–9–92ರಂದು ಮಹಿಳೆಯರಿಗಾಗಿ "ಮಹಿಳೆಯ ಅವನತಿಗೆ ಮಹಿಳೆಯೇ ಕಾರಣ" ಎಂಬ ಚರ್ಚೆಯನ್ನು ಏರ್ಪಡಿಸಲಾಯಿತು.



ದ.ಕ. ಜಿಲ್ಲೆಯ ಕಾರ್ಕಳ ತಾಲೂಕಿನ ಮೂಡಬಿದರೆಯಲ್ಲಿ ನೂತನವಾಗಿ ಸ್ಥಾಪಿಸಲ್ಪಟ್ಟ "ಇನ್ನರ್ ವ್ಹೀಲ್ ಕ್ಲಬ್"ನ 1992–93ನೇ ಸಾಲಿನ ಅಧ್ಯಕ್ಷಿಣಿಯಾಗಿ ಶ್ರೀಮತಿ ಶಾಲಿನಿ ಹುಲೇಶ ನಾಯಕ್ ಇತ್ತೀಚೆಗೆ ಅಧಿಕಾರ ಸ್ವೀಕರಿಸಿದರು.



ರಾಯಚೂರಿನ ಶ್ರೀ ಲಕ್ಷ್ಮೀ ಮಹಿಳಾ ಮಂಡಳಿಯವರು ದಿ. 1–9–92ರಂದು ನಿಜಲಿಂಗಪ್ಪ ನಗರದ ಪಿ ಅಂಡ್ ಟಿ ಕ್ವಾರ್ಟರ್ಸ್‌ನ ಆವರಣದಲ್ಲಿ ವಿವಿಧ ಮನರಂಜನಾ ಕಾರ್ಯಕ್ರಮಗಳನ್ನು ನೆರವೇರಿಸಿದರು.



ಬೆಂಗಳೂರಿನ ಜಯನಗರ ಬಡಾವಣೆಯ ನಾಲ್ಕನೆಯ 'ಟಿ' ವಿಭಾಗದ ಬಿ.ಎನ್.ಎಂ. ಮೆಮೋರಿಯಲ್ ಸಂಗೀತ ಕಾಲೇಜಿನ ಆಶ್ರಯದಲ್ಲಿ ಶ್ರೀ ವಿದ್ಯಾಗಣಪತಿಯ ಮಹಾಮಂಗಳಾರತಿಯನ್ನು ವಿಜೃಂಭಣೆಯಿಂದ ಆಚರಿಸಲಾಯಿತು.



ಉಡುಪಿ ತಾಲೂಕು ಮಹಿಳಾ ಒಕ್ಕೂಟದ ಅಧ್ಯಕ್ಷಿಣಿ
ಶ್ರೀಮತಿ ವಸಂತಿ ಪೈ ಅವರು ದಿ. 9–9–92ರಂದು ಮಹಿಳಾ
ಹಾಲು ಉತ್ಪಾದಕರ ಸಂಘದ ಉದ್ಘಾಟನ ಮಾಡಿದರು.



ಹುಬ್ಬಳ್ಳಿಯ ನೆಹರೂ ನಗರ ಮಹಿಳಾ ಮಂಡಲವು ದಿ 16–8–92ರಂದು ತನ್ನ ವಾರ್ಷಿಕೋತ್ಸವವನ್ನು
ಆಚರಿಸಿತು.



1991–92ನೇ ಸಾಲಿನಲ್ಲಿ ಕರ್ನಾಟಕ ಸಂಗೀತ ಪರೀಕ್ಷಾ ಮಂಡಳಿಯವರು
ನಡೆಸಿದ ಹಾಡುಗಾರಿಕೆ ಜ್ಯೂನಿಯರ್ ಪರೀಕ್ಷೆಯಲ್ಲಿ ಆರ್. ಅರವಿಂದ,
ಜಿ. ಪ್ರತಿಮಾ ಭಾರ್ಗವ, ಆರ್. ಕಾರ್ತಿಕ್ ಪ್ರಥಮ
ದರ್ಜೆಯಲ್ಲಿ ಉತ್ತೀರ್ಣರಾದರು.



ಬೆಂಗಳೂರಿನಲ್ಲಿ ಮಹಿಳೆಯರಿಂದಲೇ ಸ್ಥಾಪಿಸಲ್ಪಟ್ಟ "ಕುಸುಮಾಂಜಲಿ ಹಾಬಿ ಸೆಂಟರ್" ಸಂಸ್ಥೆಯನ್ನು
ದಿ. 15– 8–92ರಂದು ಸಾಂಪ್ರದಾಯಿಕವಾಗಿ ಪ್ರಾರಂಭಿಸಲಾಯಿತು.



ಮೂಡಿಗೆರೆಯ ಎಸ್.ಬಿ.ಐ.ನಲ್ಲಿ [illegible] ಆಚರಣೆಯ ಅಂಗವಾಗಿ
ಏರ್ಪಡಿಸಲಾಗಿದ್ದ ವಿವಿಧ ಸ್ಪರ್ಧೆಯಲ್ಲಿ ಗೆದ್ದ ಶ್ರೀಮತಿ ಶೀಲಾ ಫರ್ನಾಂಡೀಸ್
ಅವರಿಗೆ ಬ್ಯಾಂಕಿನ ಶಾಖಾಧಿಕಾರಿ ಕೆ. [illegible] ನೀಡಿದರು.




ಮೂಡಿಗೆರೆ ಮಹಿಳಾ ಲಯನ್ಸ್ ಸಂಸ್ಥೆಯ ಆಶ್ರಯದಲ್ಲಿ ಶಿಕ್ಷಕರ ದಿನಾಚರಣೆ ನಡೆಸಲಾಯಿತು.

# ರಕ್ಷಣೆ



–ಎ.ಪಿ.ಮಾಲತಿ

ಅನಿರೀಕ್ಷಿತವಾಗಿ ಹಳ್ಳಿಯಿಂದ ಆಗಮಿಸಿದ ಗೋಪಾಲ ಭಾವ ಮತ್ತು ಅವರ ಕಿರಿಮಗ ಆನಂದನನ್ನು ಕಂಡು ವಾಣಿಗೆ ಅಚ್ಚರಿಯಾದರೂ ಅವರು ಹೀಗೆ ಬಂದಿರುವ ಹಿನ್ನೆಲೆಯಲ್ಲಿ ಏನೋ ಪ್ರಬಲ ಕಾರಣ ಇದ್ದೇ ಇದೆಯೆಂಬ ಗುಮಾನಿ ಸುಳಿದು ಪ್ರಶ್ನಾರ್ಥಕ ದೃಷ್ಟಿ ಎಸೆದು ನಗುಮೊಗ ಬಿಗಿದು ಸ್ವಾಗತಿಸಿದಳು ಇಬ್ಬರನ್ನೂ. ಗೋಪಾಲಭಾವನನ್ನು ನೋಡದೆ ನಾಲ್ಕಾರು ವರ್ಷಗಳಾದವು. ಅವರನ್ನು ನೋಡಬೇಕೆಂದರೆ ಹಳ್ಳಿ ಮನೆಗೆ ಹೋಗಬೇಕಲ್ಲದೆ ಹಾಗೆಲ್ಲ ಅವರು ಇತ್ತಕಡೆ ಬರುವವರಲ್ಲ. ಅವರಲ್ಲಿ ಏನಾದರೂ ವಿಶೇಷ ಕಾರ್ಯಗಳಿದ್ದರೆ ಕಾಗದ ಬರೆಯುವುದು ವಾಡಿಕೆ. ಕಾಗದ ಬರೆಯದೆ ದಿಢೀರನೆ ಬರಬೇಕಾದರೆ....?

ಆ ಹೊತ್ತಿನಲ್ಲಿ ಚಂದ್ರು ಮನೆಯಲ್ಲಿರಲಿಲ್ಲ. ತನ್ನ ಲಾರಿಯಲ್ಲಿ ಯಾರದೋ ಕೋಳಿಗೊಬ್ಬರ ತರಲೆಂದು ನಿನ್ನೆಯೇ ಮೈಸೂರಿಗೆ ಹೊರಟುಹೋಗಿದ್ದ. ಭಾವ ಬರುವುದು ಮೊದಲೇ ತಿಳಿದಿದ್ದರೆ ಲಾರಿ ನಾಳೆ ಹೊರಡುತ್ತಿತ್ತು. ಅಣ್ಣ–ತಮ್ಮನಿಗೆ ಮಾತಿಗೂ ಅನುಕೂಲವಾಗುತ್ತಿತ್ತು. ವಾಣಿ ಅಧೀರೆಯಾದಳು. ಇನ್ನೂ ಇಳಿಯದ ತನ್ನ ಸಿಟ್ಟು–ಅಸಮಾಧಾನ; ಚಂದ್ರುವಿನ ನೋವು–ಬೇಸರ ನೆನಪಾದರೆ ಇದಕ್ಕೆಲ್ಲ ಕಾರಣರಾದ ಶತ್ರುವಿನ ಮೇಲೆ ಮುನಿಸುಗೊಳ್ಳುತ್ತದೆ ಮನಸ್ಸು. ಆದರೆ ಹಿಂದಿನಿಂದಲೇ ವಿಧಿ ನಡೆಸಿದ ಈ ಸಂಚಿನಲ್ಲಿ ತಾವು ಕೇವಲ ಪಾತ್ರಧಾರಿಗಳು ಎಂಬ ಸತ್ಯದ ಅನ್ವೇಷಣೆ ಮಾಡುತ್ತ ಮನಸ್ಸನ್ನು ಮೃದು ಮಾಡಿಕೊಳ್ಳುವುದು ಎಷ್ಟನೇ ಬಾರಿಯೋ. ಈಗಲೂ ಅವರನ್ನು ಕಂಡಾಗ ವಿಮನಸ್ಕಳಾದರೂ ಅವರು ಕುಟುಂಬದ ಹಿರಿಯ, ಉಪಚರಿಸುವುದು ತನ್ನ ಕರ್ತವ್ಯ ಎನಿಸಿ ನಗು ಮುಖವಾಡ ಧರಿಸಿ ನಿರ್ವಿಕಾರದಿಂದ ಅವರಿಬ್ಬರಿಗೂ ಊಟ ಬಡಿಸುತ್ತ ಪ್ರಶ್ನಿಸುತ್ತಾಳೆ, “ಹಳ್ಳಿಯಲ್ಲಿ ಎಲ್ಲರೂ ಹೇಗಿದ್ದಾರೆ? ಸುಶೀಲಕ್ಕ, ಅಲೋಕ ಚೆನ್ನಾಗಿದ್ದಾರೆಯೇ?''

ಅವರ ಮನೆಯಲ್ಲಿ ಯಾರು ಹೇಗಿದ್ದರೂ ಇವಳಿಗೇನೂ ಲಾಭವಿಲ್ಲ. ಸುಶೀಲಕ್ಕನಿಗೆ ಕೆಲವು ವರ್ಷಗಳಿಂದ ಉಬ್ಬುಸ ರೋಗ ಹೆಚ್ಚಿ ಆರೋಗ್ಯ ಚೆನ್ನಾಗಿಲ್ಲ. ಹಳ್ಳಿ ಕೆಲಸ ತೂಗಿಸಿಕೊಂಡು ಹೋಗುವುದೇ ಕಷ್ಟಕರ. ಉಬ್ಬುಸದ ಜೊತೆಗೆ ಇತ್ತೀಚೆಗೆ ಬೆನ್ನು ನೋವಿನ ಕಾಟ. ಔಷಧಿ ನಡೀತಾ ಇದೆ. ಕೆಲಸದವರೂ ಸರಿಯಾಗಿ ಸಿಗದಿರುವ ತಾಪತ್ರಯ. ಗೋಪಾಲಭಾವ ಹತ್ತು ಎಕರೆ ಅಡಿಕೆ ತೋಟ, ನಾಲ್ಕು ಎಕರೆ ಗದ್ದೆಯಿರುವ ಶ್ರೀಮಂತ ಕುಳ. ಎರಡು ಗಂಡು ಮಕ್ಕಳ ತಂದೆ. ಹಿರಿಯವ ಅಲೋಕ ದ್ವಿತೀಯ

### ಪ್ರಪ್ರಥಮ ಇಂಡೋ– ಯುರೋಪಿಯನ್ ಒಪ್ಪಂದ

*ಪೋರಸ್ ರಾಜನನ್ನು ಸೋಲಿಸಿ ಪಂಜಾಬನ್ನು ವಶಪಡಿಸಿಕೊಂಡ ಅಲೆಕ್ಸಾಂಡರ್ ನಂತರ ಕ್ರಿಸ್ತ ಪೂರ್ವ 327ರಲ್ಲಿ ಚಂದ್ರಗುಪ್ತ ಮೌರ್ಯನನ್ನು ಭೇಟಿಯಾದ. ಇವರಿಬ್ಬರೂ ಒಪ್ಪಂದ ಮಾಡಿಕೊಂಡು ಮಗಧವನ್ನು ವಶಪಡಿಸಿಕೊಂಡರು. ಇದೇ ಭಾರತ ಹಾಗೂ ಯೂರೋಪ್ ನಡುವೆ ನಡೆದ ಪ್ರಪ್ರಥಮ ಒಪ್ಪಂದವಾಗಿದೆ.*

ಬಿ.ಎಸ್.ಸಿ., ವಿದ್ಯಾರ್ಥಿ. ಕಲಿಯುವುದರಲ್ಲಿ ಸಾಮಾನ್ಯ. ಆದರೆ ವ್ಯವಹಾರ ಜ್ಞಾನ ಇರುವವ. ಗೋಪಾಲ ಭಾವನ ಕೊಂಡಾಟದ ಮಗ. ಎರಡನೆಯವ ಆನಂದ. ಈ ಸಲ ಹತ್ತನೇ ಕ್ಲಾಸು ಮುಗಿಯಿತು. ಕಾಲೇಜಿಗೆ ಸೇರಬೇಕಷ್ಟೇ. ಗೋಪಾಲ ಭಾವನಿಗೆ ಹೆಚ್ಚೆಂದರೆ ಐವತ್ತರ ಪ್ರಾಯ. ಸ್ವಲ್ಪ ಸ್ಥೂಲ ಶರೀರ. ಮುಖದಲ್ಲಿ ಶ್ರೀಮಂತ ಕಳೆ. ಕೂಡು ಹುಬ್ಬಿನ ಕೆಳಗೆ ಗರ್ವ ತುಂಬಿದ ಕಣ್ಣುಗಳು. ವಾಣಿಗೆ ಅವರನ್ನು ಕಂಡರೆ ಏನೋ ಹೆದರಿಕೆ, ಮಾತಿಗೂ ಅಳುಕು. ನೇರವಾಗಿ ನೋಡುವುದಕ್ಕೂ ಹಿಂಜರಿಕೆ. ಅವರಂತೆ ತಮಗೂ ಸ್ಥಿತಿಗತಿ ಇಲ್ಲದ ಸಂಕೋಚವೂ ಕಾಡುತ್ತಿತ್ತು. ಅವಳ ಪತಿ ಚಂದ್ರುವಿಗೆ ಜೀವನೋಪಾಯಕ್ಕೆ ಇದ್ದುದು ಲಾರಿ ಒಂದೇ. ಜನರ ಆವಶ್ಯಕತೆಗಳನ್ನು ಪೂರೈಸಲು ಸಿದ್ಧವಾದ, ಬೈಹುಲ್ಲು, ಗೊಬ್ಬರ, ಮರಮಟ್ಟು ಇತ್ಯಾದಿ ಸಾಮಾನುಗಳನ್ನು ಸಾಗಿಸುವ ಬಾಡಿಗೆ ಲಾರಿ ಅದು. ಅವನೇ ಅದರ ಯಜಮಾನ. ಅದರಲ್ಲೇ ಅವನ ತಿರುಗಾಟ. ಬಾಡಿಗೆ ಇಲ್ಲದ ದಿನಗಳೇ ಅಪರೂಪ. ಒಂದು ಗಂಡು, ಒಂದು ಹೆಣ್ಣು ಮಗುವಿನ ತಂದೆ. ಇರುವುದರಲ್ಲೇ ತೃಪ್ತಿ ಕಾಣುವ ಜೀವ. ವಾಣಿಗೆ ಬೇಕಾದದ್ದು ತೃಪ್ತಿ ಒಂದೇ. ಗೋಪಾಲ ಭಾವನೆದುರು ತಮ್ಮನ್ನು ಹೋಲಿಸಿದವಳೂ ಅಲ್ಲ.

ಗೋಪಾಲಭಾವ ಯಾವಾಗಲೂ ತಮ್ಮ ಮಕ್ಕಳನ್ನು ಚಂದ್ರುವಿನ ಮಕ್ಕಳೊಡನೆ ಹೋಲಿಸುವುದು ವಾಣಿಗೆ ಇಷ್ಟವಾಗುತ್ತಿರಲಿಲ್ಲ. ಅವರಿಗೆ ಅಲೋಕನ ಗುಣಗಾನ ಮಾಡಿದಷ್ಟೂ ಕಡಿಮೆ. ಆನಂದನ ಆಟ ಪಾಠಗಳ ಬಗ್ಗೆ ಹೇಳಿಕೊಂಡಷ್ಟು ಸಾಲದು. ಅವರ ಬಳಿ ಯಾರೇ ಮಾತನಾಡಲಿ, ತಮ್ಮ ಮಕ್ಕಳದೇ ಸುದ್ದಿ. ಆದರೆ ಈ ದಿನ ಅವರು ಮಕ್ಕಳ ಬಗ್ಗೆ ಏನನ್ನು ಹೇಳದೆ ವಾಣಿ ಕೇಳಿದಷ್ಟು ಪ್ರಶ್ನೆಗೆ ಉತ್ತರಿಸಿ ಊಟ ಮುಗಿಸಿ ಹೊರ ಕೋಣೆಯ ಆರಾಮ ಖುರ್ಚಿಯನ್ನೊರಗಿದರು.

ಅಚ್ಚರಿಯಾಯಿತು ವಾಣಿಗೆ. ಯಾವಾಗಲೂ ತೀರದ ಉತ್ಸಾಹ ಗೋಪಾಲ ಭಾವನದು. ಹೀಗೆ ಮಾತಿಲ್ಲದ ಕುಳಿತವರೇ ಅಲ್ಲ. ಇದೇನು ಆಯಾಸವೇ? ಬೇರೆ ನೋವು–ಬೇಸರ ಕಾಡುತ್ತಿದೆಯೇ? ಆನಂದನೂ ಎಂದಿನ ಲವಲವಿಕೆಯಲ್ಲಿಲ್ಲ. ಕಿಶೋರ ವಯಸ್ಸಿನ ಸಹಜ ತುಂಟಾಟದ ಕಣ್ಣುಗಳು ಬಹಳ ಗಂಭೀರವಾಗಿವೆ. ಅವನಿಗೆ ಈ ಮನೆಯಲ್ಲಿ ಸಲಿಗೆ ಕಡಿಮೆ. ವಾಣಿ ಅವನ ಪಾಲಿಗೆ ತೀರಾ ಅಪರಿಚಿತೆ. ಯಾಕೆಂದರೆ ವಾಣಿ ಹಳ್ಳಿಗೆ ಹೋಗದೆ ನಾಲ್ಕಾರು ವರ್ಷಗಳು ಕಳೆದಿವೆ. ಆನಂದನೂ ಇತ್ತೀಚಿನ ವರ್ಷಗಳಲ್ಲಿ, ಇತ್ತ ಬಂದಿಲ್ಲ. ಚಿಕ್ಕಪ್ಪ ಚಂದ್ರುವಿನ ಜೊತೆಯೂ ಸಲಿಗೆ ಅಷ್ಟಕ್ಕಷ್ಟೇ. ಸಂತೋಷ ಮತ್ತು ಸುಪ್ರಿಯಾರೊಡನೆ ವಿಶೇಷ ಒಡನಾಟವಿಲ್ಲ. ತಾವು ಒಂದೇ ಕುಟುಂಬದವರಾದರೂ ಎಷ್ಟು ದೂರವಾಗಿದ್ದೇವೆ ಎಂದು ಎಷ್ಟೋ ಬಾರಿ ಅನಿಸಿದೆ ವಾಣಿಗೆ. ಹಾಗೆಂದು ಹತ್ತಿರ ಮಾಡಿಕೊಳ್ಳುವ ತುಡಿತವೂ ಅವಳಿಗಿಲ್ಲ. ಆದರೂ ಆನಂದ ಬಂದಾಗ ತನ್ನ ಮಕ್ಕಳು ಮನೆಯಲ್ಲಿ ಇಲ್ಲದಿರುವುದು ಅವಳಿಗೆ ಖೇದ ತಂದಿತ್ತು.

ಸಂತೋಷನಿಗೆ ಈ ಸಲ ಪಿ.ಯು.ಸಿ. ಮುಗಿಯಿತಷ್ಟೇ. ಮೆಡಿಕಲ್‌ಗೆ ಸೇರುವ ಇಚ್ಛೆ. ಎಂಟರೆನ್ಸ್ ಟೆಸ್ಟ್‌ಗಾಗಿ ಬೆಂಗಳೂರಿಗೆ ಹೋಗಿದ್ದಾನೆ. ಸುಪ್ರಿಯಾ










ದೀಪಾವಳಿ ವಿನೋದಾವಳಿ!

ನವೋದಯ ಶಾಲೆಯಲ್ಲಿ ಓದುವವಳು. ಮೊನ್ನೆ ಶಾಲೆ ಪ್ರಾರಂಭವಾದ ಕಾರಣ ಹೊರಟುಹೋಗಿದ್ದಾಳೆ. ಅವರಿಲ್ಲದೆ ಆನಂದನಿಗೆ ಬೇಸರ ಆಗದಿರಲೆಂದು ಪಕ್ಕದ ಕೋಣೆಗೆ ಕರೆದೊಯ್ದು ಸಂತೋಷನ ಕಥೆ ಪುಸ್ತಕಗಳನ್ನು ಕೊಟ್ಟು ವಾಣಿ ಹೊರಗೆ ಬಂದಾಗ ಗೋಪಾಲಭಾವ ಕೇಳಿದರು.

"ನಿನ್ನ ಮಕ್ಕಳಿಬ್ಬರೂ ಕಲಿಯುವುದರಲ್ಲಿ ಹೇಗಿದ್ದಾರೆ?"

ಅಭಿಮಾನದಿಂದ ಬೀಗಿತು ಅವಳ ತಾಯಿ ಹೃದಯ. ಮಕ್ಕಳಿಬ್ಬರೂ ಕಲಿಯುವುದರಲ್ಲಿ ಮುಂದೆ. ಕ್ಲಾಸಿನಲ್ಲಿ ಪ್ರಥಮ ಸ್ಥಾನ ಬಿಟ್ಟುಕೊಟ್ಟವರಲ್ಲ. ಯಾರ ವಶೀಲಿ–ಪ್ರಭಾವವಿಲ್ಲದೆ ತನ್ನ ಪ್ರತಿಭೆಯಿಂದ ನವೋದಯ ಶಾಲೆಯಲ್ಲಿ ಸೀಟು ಗಿಟ್ಟಿಸಿಕೊಂಡವಳು ಸುಪ್ರಿಯಾ. ಶಿಸ್ತಿನ ನಡವಳಿಕೆ, ಶಾಲಾ ಪಾಠಗಳಲ್ಲಿ ಅತೀವ ಶ್ರದ್ಧೆ. ಮುಂದೆ ಡಾಕ್ಟರಳಾಗಬೇಕೆಂಬ ಗುರಿ. ಸಂತೋಷನಿಗೂ ಅದೇ ಗುರಿ. "ಲಕ್ಷಗಟ್ಟಲೆ ಡೊನೇಶನ್ ಕೊಡುವ ತಾಕತ್ತು ನನಗಿಲ್ಲ. ಮೆರಿಟ್ ಸೀಟ್ ಸಿಕ್ಕಿದರೆ ಸೇರಿಕೋ" ಎಂದಿದ್ದಾನೆ ಚಂದ್ರು. ಈ ಸಲ ಪರೀಕ್ಷೆಗೆ ನಿದ್ದೆಗೆಟ್ಟು ಓದಿದ್ದಕ್ಕೆ ಲೆಕ್ಕವಿದೆಯೇ? ರಿಸಲ್ಟ್ ಬಗ್ಗೆ ಅನುಮಾನವೇ ಇಲ್ಲ. ಎಂಟರೆನ್ಸ್ ಚೆನ್ನಾಗಿ ಮಾಡಿದರೆ ಮೆಡಿಕಲ್‌ಗೆ ಸೀಟು ಸಿಕ್ಕೀತೆಂಬ ಭರವಸೆ ಅವನಿಗೆ.

"ಮೆಡಿಕಲ್‌ಗೆ ಸೇರಿದರೆ ಯಾವುದೋ ದೂರದ ಹಾಸ್ಟೆಲ್‌ಗೆ ಅವನನ್ನು ಕಳುಹಿಸಬೇಕಲ್ಲವೇ?"

ಅನುಮಾನದಿಂದ ಕೇಳಿದರು ಗೋಪಾಲಭಾವ. "ಈಗಿನ ಹಾಸ್ಟೆಲು, ಹೊಸಪೀಳಿಗೆ ತರುಣರ ನಡತೆ ಬಗ್ಗೆ ಹೆದರಿಕೆ ಆಗೋದಿಲ್ವೆ?"

ವಾಣಿಗೆ ಅರ್ಥವಾಗಲಿಲ್ಲ ಅವರ ಪ್ರಶ್ನೆ. ಸಂತೋಷ ಮೆಡಿಕಲ್‌ಗೆ ಸೇರಿದರೆ ತಾವು ಅವರ ಬಳಿ ಹಣಕ್ಕಾಗಿ ಹಲ್ಲುಗಿಂಜುತ್ತೇವೆಂಬ ಹೆದರಿಕೆಯೇ? ಸಾಲ ಕೇಳುತ್ತೇವೆಂಬ ಅನುಮಾನವೇ? ಹಿಂದೊಮ್ಮೆ ವಾಣಿಗಿನ್ನೂ ಚೆನ್ನಾಗಿ ನೆನಪಿದೆ. ಚಂದ್ರುವಿಗೆ ಹೊಸ ಲಾರಿ ಖರೀದಿಸಲು ಕೆಲವು ಸಾವಿರ ರೂಪಾಯಿಗಳು ಕಡಿಮೆ ಯಾಗಿದ್ದವು. ಅಣ್ಣನ ಬಳಿ ಸಾಲ ಕೇಳಿ ತರುತ್ತೇನೆಂದು ಹೊರಟಾಗ ಎಚ್ಚರಿಸಿದ್ದಳು ವಾಣಿ. "ಅವರದು ಯಾವಾಗಲೂ ಖಾಲಿ ಕೈ. ನೀವು ಹೋಗಿ ಕೇಳಿ ಮಂಗಳಾರತಿ ಮಾಡಿಸಿಕೊಂಡು ಬನ್ನೀ!"

"ಅಷ್ಟು ದೊಡ್ಡ ಆಸ್ತಿಗೆ ಅಣ್ಣ ಒಬ್ಬನೇ ಹಕ್ಕುದಾರ. ಬ್ಯಾಂಕ್‌ನಲ್ಲಿ ಕೂಡಿಟ್ಟದ್ದು ಬೇರೆ, ಚಿನ್ನ ಬೆಳ್ಳಿ ಬೇರೆ ಬೇಕಾದಷ್ಟಿದೆ."

"ಅದು ಅವರ ಸ್ವಾರ್ಥಕ್ಕೆ, ನಿಮ್ಮ ಸಹಾಯಕ್ಕೆ ಅಲ್ಲ!"

ಹಾಗೇ ಆಯಿತು. ಚಂದ್ರು ಜೋಲು ಮೋರೆ ಹಾಕಿಕೊಂಡು ಹಿಂದಿರುಗಿ ಬಂದಾಗ 'ಅಯ್ಯೋ' ಎನಿಸಿತು. ಒಂದೇ ತಾಯಿಯ ರಕ್ತ ಹಂಚಿಕೊಂಡು ಹುಟ್ಟಿದ ಮಕ್ಕಳು ಗೋಪಾಲಭಾವ ಮತ್ತು ಚಂದ್ರು. ಆದರೆ ಹಗಲು, ರಾತ್ರೆಯಷ್ಟು ವ್ಯತ್ಯಾಸ ಅವರ ಸ್ವಭಾವದಲ್ಲಿ, ಜೀವನಕ್ರಮದಲ್ಲಿ. ಚಂದ್ರುವಿಗೆ ಅಣ್ಣನಲ್ಲಿ ಅಪಾರ ನಂಬಿಕೆ. ಆದರೆ ಈ ನಂಬಿಕೆಗೆ ಕೊಡಲಿ ಏಟು ಬಿದ್ದಿತ್ತು ಆಸ್ತಿಯಲ್ಲಿ ಆದ ಅನ್ಯಾಯದಿಂದ. ಆಸ್ತಿ ಪಿತ್ರಾರ್ಜಿತವಾಗಿದ್ದರೆ ಚಂದ್ರು ಕೋರ್ಟಿನಲ್ಲಿ ವ್ಯಾಜ್ಯ ಹೂಡಿ ತನ್ನ ಪಾಲನ್ನು ಗಿಟ್ಟಿಸಿಕೊಳ್ಳುತ್ತಿದ್ದ. ಆದರೆ ಅದು ತಾಯಿಯ ಆಸ್ತಿ. ತಾಯಿಯ ತಂದೆಗೆ ಗಂಡುಮಕ್ಕಳಿರಲಿಲ್ಲ. ತಮ್ಮ ಇಬ್ಬರು ಹೆಣ್ಣುಮಕ್ಕಳಿಗೆ ಸಮಪಾಲು ಮಾಡಿದ್ದರು ತಮ್ಮ ಆಸ್ತಿ–ಪಾಸ್ತಿಯನ್ನು. ತಾಯಿಯ ತಂಗಿ ಗಂಡ ಅಮೇರಿಕದಲ್ಲಿ ಎಂಜಿನೀಯರು. ಅಲ್ಲಿ ಗ್ರೀನ್‌ಕಾರ್ಡ್ ಹೊಂದಿದವ. ಅವನ ಗಳಿಕೆಯ

## ಲೋಕಸಭೆ ಪ್ರವೇಶಿಸಿದ ಪ್ರಪ್ರಥಮ ದಂಪತಿಗಳು

*ಜೋಕಿಂ ಆಳ್ವ ಹಾಗೂ ವಯೋಲೆಟ್ ಆಳ್ವ ಕರ್ನಾಟಕದಿಂದ ಲೋಕಸಭೆಗೆ ಆರಿಸಿ ಹೋದ (1952–57) ಪ್ರಪ್ರಥಮ ದಂಪತಿಗಳಾಗಿದ್ದಾರೆ. ಇದರಲ್ಲಿ ಇನ್ನೊಂದು ವಿಶೇಷವೆಂದರೆ ಇದು ಸ್ವತಂತ್ರ ಭಾರತದಲ್ಲಿ ಲೋಕಸಭೆಗೆ ನಡೆದ ಪ್ರಪ್ರಥಮ ಚುನಾವಣೆಯೂ ಕೂಡ.*

ಮುಂದೆ ಹೆಂಡತಿಯ ಆಸ್ತಿ ಕವಡೆಗೆ ಸಮ. ಹೀಗಾಗಿ ಆ ತಂಗಿ ಒಮ್ಮೆ ಭಾರತಕ್ಕೆ ಬಂದಾಗ ತನ್ನ ಪಾಲಿನ ಆಸ್ತಿಯನ್ನು ಅಕ್ಕನ ಹೆಸರಿಗೆ ಬರೆದು ಹಾಕಿ ನಿಶ್ಚಿಂತೆಯಿಂದ ಹೊರಟುಹೋಗಿದ್ದಾಳೆ. ಹೀಗಾಗಿ ಚಂದ್ರುವಿನ ತಾಯಿಯೇ ಸಮಸ್ತ ಆಸ್ತಿಗೂ ಹಕ್ಕುದಾರಿಣಿ. ಮೊದಲಿನಿಂದಲೂ ಗೋಪಾಲಭಾವ ಕೆಲಸಗಾರ. ಆಸ್ತಿಯಲ್ಲಿ ಮೈಮುರಿದು ದುಡಿಯುವವರು. ಸಹಜವಾಗಿ ತಾಯಿಗೆ ಚಂದ್ರುವಿಗಿಂತಲೂ ಗೋಪಾಲನಲ್ಲಿ ಅಕ್ಕರೆ ಜಾಸ್ತಿ. ಗೋಪಾಲಭಾವ ಈ ಲಾಭ ಪಡೆದು ಆಸ್ತಿಯನ್ನು ತಮ್ಮ ಹೆಸರಿಗೆ ಮಾಡಿಕೊಳ್ಳುವ ಕುತಂತ್ರ ನಡೆಸಿದ್ದು. ಇದು ತಿಳಿದದ್ದು ತೀರಾ ತಡವಾಗಿ. ಆ ಹೊತ್ತಿಗೆ ಚಂದ್ರುವಿನ ಯಾವ ಸುಖ–ದುಃಖಗಳಿಗೂ ಸ್ಪಂದಿಸಲಿಲ್ಲ ಈ ಅಣ್ಣ. ಅಷ್ಟೇಕೆ ಆರ್ಥಿಕ ಸಹಾಯ ಮಾಡುವ ಔದಾರ್ಯವನ್ನೂ ತೋರಿಸಲಿಲ್ಲ. ತಮ್ಮನ ರಕ್ಷಣೆ ಭಾರ ಅವರಿಗೇಕೆ? ಚಂದ್ರು ಜೀವನೋಪಾಯಕ್ಕೆ ಹಳ್ಳಿ ಬಿಡುವಾಗ ಅವನನ್ನು ಖಾಲಿ ಕೈಯಲ್ಲಿ ಕಳುಹಿಸಿದ್ದರು, ತಮ್ಮ ಖಾಲಿ ಕೈ ತೋರಿಸಿ!

ಈಗಲೂ ಅವರಿಗೆ ತಾವು ಹಣ ಕೇಳಿದರೆ? ಎಂಬ ಹೆದರಿಕೆ ಇದ್ದೀತು. ಅವಳಿಗೆ ನಗು ಬಂದಿತು. "ಹೆದರಿಕೆ ಎನ್ನುತ್ತ ಮನೆಯಲ್ಲೇ ಮಕ್ಕಳನ್ನಿಟ್ಟು ಅವರ ಭವಿಷ್ಯ ಹಾಳುಮಾಡಬೇಕೇ?''

ಗೋಪಾಲಭಾವ ಕಣ್ಣೆತ್ತಿ ನೋಡಿದರು ಅವಳನ್ನು. ಅವರ ಕಣ್ಣುಗಳಲ್ಲಿ ನೀರು ತುಂಬಿದ್ದು ಕಂಡು ಆಶ್ಚರ್ಯವಾದರೂ ಪಕ್ಕನೆ ದೃಷ್ಟಿ ಹೊರಳಿತು ಆನಂದನಿದ್ದ ಕೋಣೆಯತ್ತ. ಅವನನ್ನೂ ಜೊತೆಗೆ ಕರೆತಂದ ಉದ್ದೇಶ ಬೇರೆ ಇದ್ದೀತಲ್ಲವೇ. ಅವಳು ಮಾತು ಬದಲಿಸಿ ಆನಂದನ ಮಾತು ತೆಗೆದಳು.

ಆನಂದ ಈ ಸಲ ಪ್ರಥಮ ಪಿ.ಯು.ಸಿ. ಹಳ್ಳಿಯಿಂದ ಎರಡು ಮೈಲುಗಳ ಅಂತರದಲ್ಲಿ ಎರಡು ಕಾಲೇಜುಗಳಿದ್ದರೂ ಈ ಊರಿನ ಕಾಲೇಜಿಗೆ ಸೇರಿಸಲು ಬಂದಿದ್ದಾರೆ. ಒಂದು ಕಾಲೇಜಿನಲ್ಲಿ ಸೀಟು ಸಿಕ್ಕಿದೆ. ಹಾಸ್ಟೆಲ್ ವ್ಯವಸ್ಥೆ ಆಗಬೇಕಷ್ಟೇ.

"ಆನಂದ ಹತ್ತನೇ ಕ್ಲಾಸಿನಲ್ಲಿ ಕ್ಲಾಸಿಗೆ ಫಸ್ಟ್ ಬಂದಿದ್ದಾನೆ. ಬುದ್ಧಿವಂತ ಹುಡುಗ. ಹಳ್ಳಿಯಲ್ಲಿದ್ದು ಹಾಳಾಗುವುದು ಬೇಡವೆಂದು ಈ ಊರಿನ ಕಾಲೇಜಿಗೆ ಸೇರಿಸುವ ಇಚ್ಛೆ ನನಗೆ. ಆದರೆ ಹಾಸ್ಟೆಲ್‌ಗೆ ಸೇರಿ ನಮ್ಮ ರಾಯರ ಕುದುರೆ ಕತ್ತೆ ಆದರೇನು ಗತಿ ಅಂತ ನನ್ನ ಚಿಂತೆ. ನಿನಗೆ ಗೊತ್ತು ಆನಂದನ ಪ್ರಕೃತಿ ತುಂಬಾ ನಾಜೂಕು. ಹಾಸ್ಟೆಲ್ ಊಟ ಹಿಡಿಸಲಿಕ್ಕಿಲ್ಲ. ಇನ್ನು ಹೊಸ ಹೊಸ ಸ್ನೇಹಿತರ ಸಂಗ ಹೇಗೋ ನಾನರಿಯೆ'' ಗೋಪಾಲಭಾವ ಗದ್ಗದಿತರಾದರು.

ವಾಣಿ ನೇರವಾಗಿ ನೋಡಿದಳು ಅವರನ್ನು. "ಬಳಸಿ ಮಾತನಾಡಬೇಡಿ ಭಾವಾ, ಊರ ಕಾಲೇಜು ಬಿಟ್ಟು ಇಲ್ಲಿಗೆ ಬರುವ ಉದ್ದೇಶ ಖಂಡಿತ ಬೇರೆ ಇದ್ದೀತು. ಅದೇನು ಸ್ಪಷ್ಟ ಹೇಳಿ''

ನಿಟ್ಟುಸಿರು ತೆಗೆದರು ಗೋಪಾಲಭಾವ. "ಮಕ್ಕಳ ಬಗ್ಗೆ ಚಿಂತಿಸಬಾರದು ನಿಜ, ಆದರೆ ಎಷ್ಟೋ ಬಾರಿ ಭವಿಷ್ಯವೇ ಶೂನ್ಯವಾದ ಮಕ್ಕಳನ್ನು ಕಂಡಾಗ ಇದಕ್ಕೆ ಕಾರಣ ಯಾರು? ನಾವೇ? ಸಮಾಜವೇ? ಈಗಿನ ಪರಿಸರವೇ? ನನಗೊಂದೂ ಅರ್ಥವಾಗುತ್ತಿಲ್ಲ. ನನಗೀಗ ಆನಂದನನ್ನು ಉಳಿಸಿಕೊಳ್ಳಬೇಕು ವಾಣೀ, ಅವನನ್ನು ನೀನೇ ಉಳಿಸಬೇಕು, ರಕ್ಷಿಸಬೇಕು!''

### ಪ್ರೀತಿ ಅರಿತ ಮೇಲೆ

–1–

*'ಪ್ರೀತಿ ಹೇಗಿರುತ್ತೆ ಗೊತ್ತೆ ನಿನಗೆ?'*
*ಅವರು ಕೇಳಿದರು,*
*ಹೇಳಿದರು;*
*–ಮೇಲೆ*
*ನೀಲಾಕಾಶ ನೋಡು; ಹೊಳೆಯುತ್ತೆ ತಾರೆ*
*ಇರುಳೆಲ್ಲ ಮಿನುಮಿನುಗಿ*
*ಮೂಡಣ ಕೆಂಪಾಗುತ್ತಲೆ*
*ಕಣ್ಮರೆಯಾಗುತ್ತೆ*
*–ಸುತ್ತ*
*ಮುತ್ತೆಲ್ಲ ನೋಡು; ಹರಡುತ್ತೆ ಗಾಳಿ*
*ತನುಮನಕೆ ತಂಪನುಣಿಸಿ*
*ಸದ್ದಿಲ್ಲದೆ ಸುಳಿದಾಡುತ್ತಲೆ*
*ಕರಗಿ ಹೋಗುತ್ತೆ.*
*–ಹರಿವ*
*ನೀರನ್ನ ನೋಡು; ಈಜಾಡುತ್ತೆ ಮೀನು*
*ತಾ ನಡೆವ ಜಾಡಲ್ಲಿ*
*ಹೆಜ್ಜೆ ಗುರುತುಗಳ ಮೂಡಿಸದೆ*
*ಸರಿದು ಹೋಗುತ್ತೆ*
*ಹೀಗೆ....*
*ಇನ್ನೂ ಏನೇನೋ..*

–2–

*ನನ್ನ ಕವಿ ಮನಸು*
*ಕಲ್ಪನೆಯ ಜಾಡಲ್ಲಿ ಅಲೆಯುತ್ತ*
*ಸಾಗಿದೆ ಬಯಲಿನಾಚೆ.*
*ಬಾನಗಲ ಬಾಗಿರುವ*
*ಕಾಮನಬಿಲ್ಲಿನ ಕಮಾನಿನ*
*ತುಂಬ ವರ್ಣಛಾಯೆ ಕಾಣುತ್ತ*
*ಮೈಮರೆತು ಉದ್ಗರಿಸುತ್ತೆ*
*"ಓ ಪ್ರೀತಿಯೇ*
*ನೀ ಎಷ್ಟೊಂದು ಸುಂದರ!''*

–3–

*ಮತ್ತೆ*
*ವಾಸ್ತವದೆಚ್ಚರದಲ್ಲಿ*
*ದೂರ ದಿಗಂತ ದಿಟ್ಟಿಸುತ್ತೇನೆ;*
*ಸುತ್ತ–*
*ಧೂಳು ಎರಚಿದೆ; ಗಾಳಿಯಲ್ಲಿ*
*ನೀರಾಗಿ ಕರಗಿದೆ; ಮುಗಿಲೆಲ್ಲ*
*ಕವಿದ ಕತ್ತಲಿದೆ; ತಾರೆಗಳಿಲ್ಲ*
*ಶೂನ್ಯ!*

**–ಮಾಲತಿ ಶೈ, ಮುಂಬೈ**

ಹೇಳುತ್ತ ಗೋಪಾಲಭಾವ ವಾಣಿಯೆದುರು ಹೊಸತೊಂದು ಲೋಕ ತೆರೆದಿಟ್ಟರು. ಕೇಳುತ್ತ ಯಾರೋ ನೆತ್ತಿ ಮೇಲೆ ಹೊಡೆದಂತೆ ವಿಸ್ಮಯ, ಹೆದರಿಕೆ, ಅಪನಂಬಿಕೆಯಲ್ಲಿ ಅವಳ ಮನಸ್ಸು ಅವರ ಹಿರಿಮಗ ಅಲೋಕನ ಬಗ್ಗೆ ಮೃದುವಾಗುತ್ತ ಹೋಯಿತು. ಕನಿಕರ ಸೂಚಿಸುವ ಪದಗಳೂ ಮರೆತುಹೋದವು. ಅಲೋಕ ಇನ್ನೂ ಇಪ್ಪತ್ತೊಂದು ಮೀರದ ಪೋರ. ಭವಿಷ್ಯದ ಹೊಂಗನಸನ್ನು ತನ್ನ ಮಡಿಲಲ್ಲಿಟ್ಟು ಜಗತ್ತನ್ನೇ ಜೈಸಬೇಕಾದವನ ಮೇಲೆ ವಿಧಿ ಎಷ್ಟೊಂದು ನಿರ್ದಯವಾಗಿ ಖಡ್ಗ ಬೀಸಿದೆ! ಇದನ್ನು ವಿಧಿ ಎನ್ನಬೇಕೇ? ಅಥವ ಅವನ ದುರ್ವಿಧಿಯೇ? ಎದುರಿನಲ್ಲಿ ಪ್ರಪಾತದ ಅರಿವಿದ್ದರೂ ಅದರಲ್ಲೇ ಧುಮುಕಿದವನು. ಕೈಗಳಲ್ಲಿ ಹಾಲು–ಜೇನಿನ ಬದಲು ವಿಷದ ಬಟ್ಟಲು ಹಿಡಿದವನು. ಸಿಗರೇಟು, ಗಾಂಜಾ, ಹಶೀಶ್ ಬೇಕು,ಸುಖದ ಅಮಲಿನಲ್ಲಿ ತೇಲಲು. ಆದರೆ ಕ್ಷಣಿಕ ಸುಖದ ಅಮಲು ಅವನ ಸಾಚಾ ವ್ಯಕ್ತಿತ್ವವನ್ನೇ ಬದಲಿಸುತ್ತಿದೆ.

### ಫಿಂಗರ್‌ಪ್ರಿಂಟ್ ಬ್ಯೂರೋದ ಪ್ರಪ್ರಥಮ ಮಹಿಳೆ

*ಬೃಹದಾಂಬಾಳ್ 1955ರಲ್ಲಿ ಮದರಾಸಿನ ಫಿಂಗರ್ ಪ್ರಿಂಟ್ ಬ್ಯೂರೋದಲ್ಲಿ ನಿರ್ದೇಶಕರಾಗಿ ನಿಯಮನಗೊಂಡರು. ಇವರು ಭಾರತದ ಪ್ರಪ್ರಥಮ ಮಹಿಳಾ ಫಿಂಗರ್ ಪ್ರಿಂಟ್ ತಜ್ಞರೆಂಬ ಕೀರ್ತಿಗೆ ಪಾತ್ರರಾದರು.*

ಗೋಪಾಲಭಾವ ಹೇಳುತ್ತಿದ್ದಾರೆ ಅಲೋಕ ದಡ್ಡನಲ್ಲ. ಸ್ನೇಹಿತರ ಬಳಗ ಜಾಸ್ತಿ. ಶಾಲಾ–ಕಾಲೇಜುಗಳಲ್ಲಿ ಹೀರೋ. ಹಣವಿದ್ದರೆ ಕಲಿಯುವುದರಲ್ಲಿ ಜೀರೋ ಆದವರೂ ಹೀರೋ ಆಗಲು ಸಾಧ್ಯ.ಆ ಮಾತು ಬೇರೆ. ಅಲೋಕ ಹೀರೋ ಆದ ಕಾಲೇಜಿಗೆ, ಸ್ನೇಹಿತರಿಗೆ. ಹಣ ನೀರಿನಂತೆ ಖರ್ಚು ಮಾಡಿದ ತನಗಾಗಿ, ಸ್ನೇಹಿತರಿಗಾಗಿ, ಸಂತೋಷಕೂಟಕ್ಕಾಗಿ. ತಾಯಿಗೆ ಮಗನ ಮೇಲೆ ನಿಗಾ ಕಡಿಮೆ. ತಂದೆಗೆ ಅಧಿಕ ಪುತ್ರ ವ್ಯಾಮೋಹ. ಕೇಳಿದಷ್ಟು ಸುರಿದರು ಅವನ ಅಂಗೈ ಮೇಲೆ. ಖರ್ಚಿನ ಲೆಕ್ಕ ಪ್ರಶ್ನಿಸಲಿಲ್ಲ. ಆದರೆ ಅವನ ಮೋಜು–ಮಜಕ್ಕೆ ಖರ್ಚು–ವೆಚ್ಚ ಅಧಿಕವಾದಷ್ಟು ಹಣ ಕೊಟ್ಟಷ್ಟು ಕಡಿಮೆ ಎಂಬ ಗೊಣಗಾಟವೂ ಹೆಚ್ಚಿತು. ಈ ನಡುವೆ ಅವನ ಸ್ವಭಾವ–ನಡವಳಿಕೆಯಲ್ಲಿ ಮತ್ತಷ್ಟು ಬದಲಾವಣೆ ಕಾಣಿಸಿತು.

"ಅಲೋಕ ನಮ್ಮ ಕಣ್ಣಿಗಿನ್ನೂ ಮಗುವಾಗಿದ್ದ. ನಮ್ಮ ಕಣ್ಣಿನ ಪೊರೆ ಸರಿದದ್ದು ದೇವರ ಕುತ್ತಿಗೆಯಲ್ಲಿದ್ದ ಎಂಟು ಪವನಿನ ಸರ ಕಾಣೆಯಾದಾಗಲೇ''

"ಏನು? ಅಲೋಕ ಅತ್ತೆಯವರ ಸರ ಕದ್ದನೇ?''

"ಮೆಲ್ಲನೆ ಮಾತನಾಡು. ಆ ಕೋಣೆಯಲ್ಲಿದ್ದ [illegible]. ಸರ ಕದ್ದದ್ದು ನಾವ್ಯಾರೂ [illegible]. ಆಗಾಗ ಹಣ, ಬಟ್ಟೆ, ಪಾತ್ರೆಗಳು [illegible] ಸದವರ ಮೇಲೆ ಸಂಶಯ [illegible] ಯಾದಾಗ ಮೊದಲು ಅನುಮಾನ [illegible] ಮೇಲೆ. ಅವನನ್ನು ಹೊಡೆದು [illegible] ಜಾಲಾಡಿದಾಗ ಸಿಕ್ಕಿದ್ದು

ಸರದ ಒಂದೇ ಒಂದು ತುಂಡು. ಉಳಿದುದನ್ನು ಆಗಲೇ ಗಾಂಜಾ, ಹಶೀಶ್‌ಗಾಗಿ ಮಾರಿಬಿಟ್ಟಿದ್ದ.'' ಗೋಪಾಲಭಾವ ಮಕ್ಕಳಂತೆ ಅತ್ತರು, ''ನಮಗಾದ ಆಘಾತ ಸರ ಕದ್ದು ಮಾರಿದನಲ್ಲ ಎನ್ನುವುದಲ್ಲ. ಬೇರೆ ಬೇರೆ ದುರ್ವ್ಯಸನಗಳಲ್ಲಿ ಮುಳುಗಿ ಅಲೋಕನೇ ಕಳೆದುಹೋಗಿದ್ದಾನೆ''

ವಾಣಿ ತಟಸ್ಥಳಾಗಿ ಹೋದಳು. ಆ ಚಕ್ರಸರ ಅವಳ ಅತ್ತೆಯದು. ಅತ್ತೆ ತಮ್ಮ ಚಿನ್ನಾಭರಣಗಳನ್ನು ಎರಡು ಪಾಲು ಮಾಡಲು ಇಚ್ಛೆಸಿದ್ದು ನಿಜ, ಆದರೆ ಗೋಪಾಲಭಾವ ಇಲ್ಲಿಯೂ ತಮ್ಮ ಹೆಂಡತಿಗೆ ಬೇಕಾದುದನ್ನು ಮೊದಲು ಆರಿಸಿ ತೆಗೆದು ಉಳಿದುದನ್ನು ತೂಕ ಮಾಡದೆ ಚಂದ್ರುವಿಗೆ ಕೊಟ್ಟಾಗ ವಾಣಿ ಆಗಲೇ ಸಿಡಿದು ಕೇಳುವವಳು, ''ಆಭರಣಗಳನ್ನು ತೂಕಮಾಡಿ ಸರಿಪಾಲು ಮಾಡಿ'' ಎಂದು. ಆದರೆ ಎದುರಿಗೆ ಮಂಚದ ಮೇಲೆ ಜೀರ್ಣಶರೀರೆಯಾಗಿ ಮಲಗಿದ್ದ ಅತ್ತೆಯೆದುರು ಚಿನ್ನಕ್ಕಾಗಿ ಜಗಳ ಎತ್ತಿ ಅವರನ್ನು ನೋಯಿಸುವುದು ಬೇಡವೆಂದು ಮೌನ ತಳೆದಳು. ದೇವರ ಆಭರಣಗಳು, ಬೆಳ್ಳಿ ಪೂಜಾಪಾತ್ರೆಗಳಲ್ಲಿ ಚಂದ್ರುವಿಗೆ ಪಾಲು ಕೊಡಬೇಕೆಂದು ಅತ್ತೆ ಆಶಿಸಿದರೆ ಇಲ್ಲಿಯೂ ಭಾವನ ಗೊಣಗಾಟ.

''ಇಷ್ಟು ವರ್ಷಗಳಿಂದ ಪೂಜೆ ನಡೆಸಿದವನು ನಾನು, ನಂದಾದೀಪ ಹಚ್ಚುವವನು ನಾನು, ತ್ರಿಕಾಲ ಪೂಜೆ ಮಾಡಿಸುವವನೂ ನಾನು, ತಿಥಿ– ಶ್ರಾದ್ಧ ನಡೆಸುವವನೂ ನಾನು. ನ್ಯಾಯವಾಗಿ ದೇವರ ಸೊತ್ತು ಸೇರಬೇಕಾಗಿದ್ದು ನನಗೆ! ನನ್ನ ಬಾಯಿಯಿಂದ ಇನ್ನೂ ಸತ್ಯಸಂಗತಿ ಹೊರಡಿಸಬೇಡಮ್ಮಾ!''

ಗೊಣಗಾಟದಲ್ಲಿ ಬಂದ ಸತ್ಯವಾಕ್ಯದ ಎದುರು ಚಂದ್ರು ನೊಂದು ಬದಲು ಹೇಳದೆ ಕೊಟ್ಟಷ್ಟು ತೆಗೆದುಕೊಂಡ. ಆಗ ಸುಶೀಲಕ್ಕ ಏನೂ ಅರಿಯದವಳಂತೆ ವರ್ತಿಸಿದ್ದು, ಆ ಕಣ್ಣುಗಳಲ್ಲಿ ಯಜಮಾನಿಕೆಯ ದರ್ಪ ತುಂಬಿದ್ದು ವಾಣಿಗೆ ನೋವುಂಟು ಮಾಡಿತ್ತು. ಅತ್ತೆಗೆ ಅರ್ಥವಾಗಿತ್ತು. ಅದಕ್ಕೆಂದೇ ವಾಣಿಯ ಕೈ ಹಿಡಿದು ಬಹಳಷ್ಟು ಹೇಳಲಿಚ್ಛೆಸಿದ್ದರು. ಅವರ ಕಣ್ಣುಗಳಲ್ಲಿ ಹೆಪ್ಪುಗಟ್ಟಿದ ನೋವು, ವೇದನೆಯ ಆಚೆ ಇದ್ದದ್ದು ಕೇವಲ ಅಸಹಾಯಕ ಮೌನ.

ಈಗ ಅದೇ ಅಸಹಾಯಕತೆ ಗೋಪಾಲ ಭಾವನ ಮುಖದ ಮೇಲೆ ಕಂಡು ಸಣ್ಣಗೆ ನಡುಗಿಹೋದಳು ವಾಣಿ.

''ನೀನು ನೋಡಿದ್ದೀಯಲ್ಲ, ಅಲೋಕ ಮೈ ಕೈ ತುಂಬಿ ಹೇಗೆ ಆರೋಗ್ಯವಾಗಿದ್ದ. ಈಗಲೋ ಬಿದಿರುಕಡ್ಡಿ. ಕಣ್ಣ ಸುತ್ತಲೂ ಕಪ್ಪು ಗೆರೆ. ಎಲ್ಲೋ ಶೂನ್ಯದ ದೃಷ್ಟಿ. ಯಾವುದರಲ್ಲೂ ಆಸಕ್ತಿಯಿಲ್ಲ. ಊಟ–ನಿದ್ದೆಯೂ ಇಲ್ಲ. ಕಾಲೇಜಿಗೆ ಹೋಗುವುದನ್ನು ನಿಲ್ಲಿಸಿದ. ಪ್ರತಿದಿನ ಹಣಕ್ಕಾಗಿ ಗಲಾಟೆ. ಅವನಿಂದ ಮನೆ ಕುರುಕ್ಷೇತ್ರ. ಅವನ ಚಿಂತೆಯಲ್ಲಿ ಸುಶೀಲ ಹಾಸಿಗೆ ಹಿಡಿದಿದ್ದಾಳೆ. ನಮಗೀಗ ಅವನದೇ ಚಿಂತೆ'' ಕಣ್ಣೀರು ಹರಿಯಿತು ಧಾರೆಯಾಗಿ. ''ಆನಂದನಿಗೂ ಅಲೋಕನ ದುರಭ್ಯಾಸ ಅಂಟಿದರೆ ನಮ್ಮ ಸಂಪತ್ತು ಕರಗುವುದು ಒತ್ತಟ್ಟಿಗಿರಲಿ, ನಾವು ನಮ್ಮ ಎರಡೂ ಮಕ್ಕಳನ್ನು ಕಳೆದುಕೊಳ್ಳುವ ಸ್ಥಿತಿ ಬಂದೀತು. ನಮಗೀಗ ಆನಂದನನ್ನು ಅವನ ಭವಿಷ್ಯ ಶೂನ್ಯವಾಗದಂತೆ ರಕ್ಷಿಸಬೇಕಾಗಿದೆ. ಇದಕ್ಕಿರುವ ಒಂದೇ ದಾರಿ,

## ರಂಗೋಲಿ

ಮೊದಲು 23 ಚುಕ್ಕೆಗಳ 9 ಸಾಲುಗಳನ್ನಿಡಿ. ನಂತರ ಎರಡು ಬದಿಯಲ್ಲೂ 9 ಚುಕ್ಕೆಗಳ 7 ಸಾಲುಗಳನ್ನಿಡಿ. ಮಾದರಿ ಚಿತ್ರದಲ್ಲಿ ತೋರಿಸಿರುವಂತೆ ಜೋಡಿಸಿ.

–ಅತುಲ, ಶೃಂಗೇರಿ





ಅಲೋಕನಿಂದ ಅವನನ್ನು ದೂರವಿಡಬೇಕು. ಅದಕ್ಕಾಗಿ ಈ ಊರ ಕಾಲೇಜಿಗೆ ಸೇರಿಸಿ ನಿಮ್ಮ ಮನೆಯಲ್ಲಿ, ನಿಮ್ಮರಕ್ಷಣೆಯಲ್ಲಿ ಬಿಟ್ಟು ಹೋಗಲು ಬಂದಿದ್ದೇನೆ.''

ಅವರ ಹಿಂದಿನ ದರ್ಪ, ಅಹಂಕಾರ ಎತ್ತ ಹೋದವೋ. ಕಣ್ಣೀರು ಒರಸಿಕೊಳ್ಳುತ್ತ ಅಂದರು, "ಅಲೋಕನಿಗೆ ಡಾಕ್ಟರರ ಔಷಧಿ ಆಗ್ತಾ ಇದೆ. ಪರಿಣಾಮ ಹೇಗೋ ನಾನರಿಯೆ. ಅವನು ಮೊದಲಿನಂತೆ ಆಗುವ ತನಕ ಆನಂದ ನಿಮ್ಮಲ್ಲಿರಲಿ. ಖರ್ಚಿನ ಬಗ್ಗೆ ಎಲ್ಲ ವ್ಯವಸ್ಥೆ ಮಾಡುತ್ತೇನೆ. ನೀನು ಏನು ಹೇಳುತ್ತೀ?''

ವಾಣಿ ಏನೂ ಹೇಳಲಿಲ್ಲ. ಅವಳ ಮುಖದಲ್ಲಿ ಈ ವರೆಗೆ ಇದ್ದ ಅನುಕಂಪ, ಕರುಣೆಯ ಬದಲು ಇದೇನು ಇಷ್ಟು ಸಿಟ್ಟು? ಕಣ್ಣುಗಳೇಕೆ ಹೀಗೆ ಕಿಡಿ ಕಾರುತ್ತಿವೆ? ತುಟಿಯಲ್ಲೇಕೆ ಇಷ್ಟು ಅಪಹಾಸ್ಯ? ಗೋಪಾಲ ಭಾವ ಯಾಚನೆಯ ಧ್ವನಿಯಲ್ಲಿ ಇನ್ನೂ ಹೇಳಲೆಂದು ಬಾಯ್ದೆರೆದರು. ಅಷ್ಟರಲ್ಲಿ ಹೊರಗೆ ಲಾರಿ ಬಂದು ನಿಂತ ಶಬ್ದ. ವಾಣಿ ಗಡಬಡಿಸುತ್ತ "ಓ ಅವರು ಬಂದೇ ಬಿಟ್ಟರು'' ಎಂದವಳೇ ಹೊರಗೋಡಿದಳು.

****

ಚಂದ್ರು ಸ್ನಾನ ಮುಗಿಸಿ ಊಟಕ್ಕೆ ಕುಳಿತರೂ ಗೋಪಾಲಭಾವ ಒಳಗೆ ಬಾರದೆ ಇದ್ದದ್ದು, ತಮ್ಮನನ್ನು ಮಾತನಾಡಿಸದೆ ಇದ್ದದ್ದು ವಾಣಿಗೆ ಸ್ವಲ್ಪ ಅಸಮಾಧಾನ ಉಂಟು ಮಾಡಿತು. ತಮ್ಮನಲ್ಲಿ ಮಾತನಾಡಲು ಹಿಂಜರಿಕೆಯೇ? ಅಳುಕೇ? ಪರಕೀಯರಂತೆ ತಮ್ಮನನ್ನು ದೂರವಿರಿಸಿ ಈಗ ಪರಿಸ್ಥಿತಿಯ ಕೈಗೊಂಬೆಯಾಗಿ ಹತಾಶೆಯಿಂದ ರಕ್ಷಣೆ ಯಾಚಿಸಿ ಬಂದಿದ್ದಾರೆ. ಹಾಗೆಂದು ಹೇಳಲು ಆಲೋಚನೆಯೇ? ನಿಜ, ಅಣ್ಣ ತಮ್ಮನ ಮಧ್ಯೆ ಯಾವುದೋ ಅಡ್ಡಗೋಡೆಯಿದೆ. ಅದು ಭಾವನೇ ನಿರ್ಮಿಸಿದ ಅಡ್ಡಗೋಡೆ. ಈ ಗೋಡೆಯಾಚೆ ಎಂದೆಂದೂ ತಮ್ಮ ಬದುಕು ಇದೆ ಎಂದು ನಂಬಿದವರು. ಆದರೆ ಈಗ ಬಂದದ್ದು ಗೋಡೆ ಕೆಡವಿ ಹಾಕುವ ಉದ್ದೇಶದಿಂದ ಅಲ್ಲ, ತಮ್ಮ ಹಿರಿಮಗನ ಭವಿಷ್ಯ ಹಾಳಾದ ಮೇಲೆ ಕಿರಿ ಮಗನಾದೂ ತಮ್ಮನ ನೆಮ್ಮದಿಯ ಸಂಸಾರ ಸೇರಿ ಚೆನ್ನಾಗಿ ಬಾಳಲಿ ಎಂಬ ಉದ್ದೇಶದಿಂದ.

ನಗು ಬಂದಿತು. ನಗುತ್ತಲೇ ಅವರು ಬಂದ ಉದ್ದೇಶ ಹೇಳುತ್ತ, "ಆನಂದನನ್ನು ನಮ್ಮಲ್ಲಿ ಉಳಿಸಿಕೊಳ್ಳೋಣವೇ?'' ಕೇಳಿದಳು.

ಚಂದ್ರು ಹುಬ್ಬುಗಂಟಿಕ್ಕಿದ. ಅವನಲ್ಲಿ ಭ್ರಾತೃ ಪ್ರೇಮದ ಭಾವನೆಗಳೆಂದೋ ಬತ್ತಿ ಹೋಗಿದ್ದವು. ಅಲೋಕ ಹಾಳಾಗಿ ಹೋಗಲಿ, ಆನಂದ ಕೆಟ್ಟು ಹೋಗಲಿ, ಅವನಿಗೆ ಸಂಬಂಧಿಸಿದ್ದಲ್ಲ. ಅಲೋಕನ ಮೇಲೆ ಅನುಕಂಪ ಮೂಡುವ ಬದಲು ಪ್ರತೀಕಾರದಿಂದ ನಕ್ಕಿತು ಅವನ ಮನಸ್ಸು.

ಸ್ವಲ್ಪ ಹೊತ್ತು ಇದೇ ಮಾತು. ಚಂದ್ರುವಿಗೆ ಊಟವೂ ರುಚಿಸದೆ ಕೈ ತೊಳೆಯಲು ಎದ್ದು ಬಿಟ್ಟ. ವಾಣಿಯೂ ಅವಸರದಲ್ಲಿ ಮುಖ ತೊಳೆದು ಉಡುಪು ಬದಲಿಸಿ ಹೊರಗೆ ಬಂದಾಗ ಗೋಪಾಲಭಾವ ಇನ್ನೂ ಅದೇ ಆರಾಮ ಖುರ್ಚಿಯಲ್ಲಿ ಒರಗಿದ್ದಾರೆ. ಅವರ ಕಣ್ಣುಗಳಲ್ಲಿ ಏನಿಷ್ಟು ನಿರೀಕ್ಷೆ? ಬಾಡಿದ ಮುಖದಲ್ಲಿ ಏಕಿಷ್ಟು ಪ್ರಶ್ನೆಗಳು? ತಮ್ಮಿಬ್ಬರ ಮಾತುಗಳನ್ನು ಕೇಳಿಸಿಕೊಂಡರೆ? ವಾಣಿ ವಿಚಲಿತಳಾದಳು ಒಂದು ಕ್ಷಣ. ಮರುಗಳಿಗೆಯಲ್ಲಿ, "ನನಗೆ ಮಹಿಳಾ ಮೀಟಿಂಗ್ ಇದೆ. ಹೋಗ್ತಾ ಇದೇನೆ. ಬರುವಾಗ ಕತ್ತಲಾದೀತು'' ಎಂದವಳೇ ಭಾವನತ್ತ ಇನ್ನೊಮ್ಮೆ ನೋಡದೆ ಹೊರಟು ಹೋದಳು.

ಮರಳಿ ಮನೆ ಸೇರುವಾಗ ರಾತ್ರಿ ಎಂಟು ಗಂಟೆ. ಮಹಿಳಾ ಮೀಟಿಂಗ್' ಎಂದು ಸುಳ್ಳು ಹೇಳಿ ಹೋದದ್ದು ಸ್ನೇಹಿತೆಯ ಮನೆಗೆ. ಗೋಪಾಲಭಾವನಿಂದ ತಪ್ಪಿಸಿಕೊಳ್ಳಬೇಕಾಗಿತ್ತು. ಅಣ್ಣ–ತಮ್ಮ ಮಾತನಾಡುವಾಗ, ಆನಂದ ಮುಗ್ಧ ಪ್ರಶ್ನೆಗಳನ್ನು ಕೇಳುವಾಗ ಎಲ್ಲಿ ತನ್ನ ಹೆಣ್ಣು ಹೃದಯ ಕರಗುವುದೋ ಎಂದು ಹೆದರಿಕೆ. ಕರಗುವುದು ಕಷ್ಟವೇನಿಲ್ಲ. ಆದರೆ ಬತ್ತಿಹೋದ ಕುಟುಂಬ ಪ್ರೇಮದಲ್ಲಿ ಆನಂದನಿಗಾಗಿ ಪ್ರೀತಿ–ವಾತ್ಸಲ್ಯದ ಹೊನಲನ್ನು ಎಲ್ಲಿಂದ ಅಗೆದು ತರುವುದು? ಅವಳು ಹೋಗುವಾಗಲೇ ಚಂದ್ರುವನ್ನು ಎಚ್ಚರಿಸಿದ್ದಳು. "ಗೋಪಾಲಭಾವ ತುಂಬ ನೊಂದಿದ್ದಾರೆ. ನೀವೀಗ ಹಳೆ ಆಸ್ತಿ ತಗಾದೆ ಎತ್ತಿ ಅವರನ್ನು ಚುಚ್ಚಿ ಆಡಬೇಡಿ. ಒಳ್ಳೆಯ ಮಾತಿನಿಂದ ಇಬ್ಬರನ್ನೂ ಇವತ್ತೇ ಕಳುಹಿಸಿಬಿಡಿ!''

"ನಿನ್ನಲ್ಲಿ ಹೇಳಿದಂತೆ ಅಣ್ಣ ನನ್ನಲ್ಲಿ ಏನೂ ಹೇಳಲಿಲ್ಲ. ನಾನೂ ಏನೆಂದು ಪ್ರಶ್ನಿಸಲಿಲ್ಲ. ನೀನು ಹೋದ ಸ್ವಲ್ಪ ಹೊತ್ತಿನಲ್ಲಿ ಅಣ್ಣನೂ ಆನಂದನನ್ನು ಕರೆದುಕೊಂಡು ಹೊರಟುಹೋದರು'' ಎಂದ ಚಂದ್ರು ನಗುತ್ತ.

ಆ ನಗು ಹಿತವೆನಿಸಲಿಲ್ಲ. ಎಲ್ಲೋ ಹೃದಯಕ್ಕೆ ಚುಚ್ಚಿದಂತೆ ತಾವೇನೋ ತಪ್ಪು ಮಾಡಿದಂತೆ, ಮುಂದೆ ಎರಡು ದಿನಗಳೂ ಅವಳಿಗೆ ಆನಂದನ ಮುಗ್ಧ ಮುಖವೇ ಕಾಣಿಸುತ್ತಿದೆ ಕಣ್ಣೆದುರು. ಗೋಪಾಲಭಾವನ ಮಾತುಗಳೇ ಕೇಳಿಸುತ್ತಿವೆ ಕಿವಿಗಳಲ್ಲಿ. "ದುರ್ವ್ಯಸನಗಳಿಂದ ಅಲೋಕ ಕಳೆದುಹೋಗಿದ್ದಾನೆ. ನಾವೀಗ ಆನಂದನನ್ನು ಉಳಿಸಿಕೊಳ್ಳಬೇಕು'' ಅವರ ಮುಖದಲ್ಲಿ ಎಷ್ಟೊಂದು ದೈನ್ಯತೆ, ಅಸಹಾಯಕ ಭಾವ. ಈಗ ಅವರಿಗೆ ಭೂಮಿ–ಸಂಪತ್ತು ಒಂದೂ ಬೇಡ. ಬೇಕಾದದ್ದು ಆನಂದನ ರಕ್ಷಣೆ ಒಂದೇ. ಆ ರಕ್ಷಣೆ ತಮ್ಮಲ್ಲಿ ಸಿಕ್ಕೀತೆಂಬ ಭರವಸೆ. "ನನ್ನ ಮಗನನ್ನು ನೀನು ರಕ್ಷಿಸಬೇಕು ವಾಣೀ'' ಆದರೆ ತಾವು ಮಾಡಿದ್ದೇನು? ಗೋಪಾಲಭಾವನ ಮೇಲಿನ ಸಿಟ್ಟಿಗೆ ಆನಂದನನ್ನು ಉಳಿಸಿಕೊಳ್ಳಲು ಸಿದ್ಧರಿಲ್ಲ. ನಿಜ, ತಮಗೆ ಹಳೆವೈರ, ಹೊನ್ನು–ಮಣ್ಣಿಗಾಗಿ ವೈಮನಸ್ಸು. ಪ್ರತೀಕಾರದಲ್ಲಿ ತಮಗೆ ನಗುವೋ ನಗು. ಆದರೆ...

ಆದರೆ ಆನಂದ ಅವರ ಮಗನಾದರೂ ತಮ್ಮ ವಂಶದ ಕುಡಿ. ಕುಟುಂಬದ ಕುಡಿ. ಈ ಕುಡಿ ಯೌವ್ವನದಲ್ಲಿ ದುಶ್ಚಟಕ್ಕೆ ಬಲಿಯಾಗಿ ಕಮರಿಹೋಗದಂತೆ ಕಾಪಾಡಬೇಕಾದದ್ದು ಕುಟುಂಬದ ಸೊಸೆಯಾದ ತನ್ನ ಕರ್ತವ್ಯ. ಭವಿಷ್ಯದಲ್ಲಿ ಕರಿ ನೆರಳು ಬೀಳದಂತೆ ನೋಡಿಕೊಂಡರೆ ಇದಕ್ಕಿಂತ ದೊಡ್ಡ ಪುಣ್ಯದ ಕೆಲಸ ಇನ್ನೊಂದಿಲ್ಲ. ತಮ್ಮ ಪ್ರತೀಕಾರದ ಹೃದಯದಲ್ಲಿ ಅವನಿಗಾಗಿ ವಾತ್ಸಲ್ಯದ ಹೊನಲು ಸಿಗಲಾರದೇ? ತಮ್ಮ ನಗುವಿನಲ್ಲಿ ಕಪಟವಿಲ್ಲದೆ ಪ್ರೀತಿ ಚಿಮ್ಮಲಾರದೇ? ಗೋಪಾಲಭಾವನ ಸಣ್ಣತನದ ಮುಂದೆ ನಾವೂ ಅಲ್ಪರಾಗಬಾರದು.

ತಡವಾಗಿ ಬಂದ ಈ ಆಲೋಚನೆಯಲ್ಲಿ ಆನಂದನ ಬಗ್ಗೆ ಮೃದುವಾಗುತ್ತ ತನ್ನಲ್ಲೇ ಪುಳಕಿತಳಾಗಿ ಚಂದ್ರುವಿಗೆ ಹೇಳಬೇಕು ಎಂದುಕೊಳ್ಳುವಾಗಲೇ ಆ ಸಂಜೆ ಅನಿರೀಕ್ಷಿತವಾಗಿ ಚಂದ್ರು ಆನಂದನನ್ನು ಮನೆಗೆ ಕರೆತಂದ. ಜೊತೆಯಲ್ಲಿ ಆನಂದನ ಗಂಟು ಮೂಟೆಗಳು, ಪುಸ್ತಕದ ಕಟ್ಟುಗಳು.

"ತುಂಬ ಯೋಚಿಸಿ ನಿನಗೆ ಹೇಳದೆ ಆನಂದನನ್ನು ಕರೆ ತಂದಿದ್ದೇನೆ. ಇನ್ಮೇಲೆ ಅವನಿಲ್ಲಿ ಉಳಿದು ಕಾಲೇಜಿಗೆ ಹೋಗಿ ಬರ್‍ತಾನೆ. ನಮ್ಮ ಕುಟುಂಬದ ಕುಡಿಗೆ ಸಕಾಲದಲ್ಲಿ ರಕ್ಷಣೆ ಕೊಡಬೇಕಾದ್ದು ನಮ್ಮ ಕರ್ತವ್ಯ'' ಚಂದ್ರು ಅವಳಿಗೇ ಅಚ್ಚರಿಯಾಗುವಂತೆ ಹೇಳಿದ, "ನಿನಗೆ ಗೊತ್ತೇ? ಗೋಪಾಲಣ್ಣ ಇನ್ನೂ ಈ ಊರಿನ ಹೋಟೆಲ್‌ನಲ್ಲಿ ಉಳಿದುಕೊಂಡಿದ್ದಾರೆ. ಅವರ ಹತ್ತಿರ ಮಾತನಾಡಿ ಬಂದೆ. ಮಾತಿನ ಮಧ್ಯೆ ನಮ್ಮ ಪಾಲಿನ ಅರ್ಧ ಆಸ್ತಿ ನಮಗೇ ಬಿಟ್ಟುಕೊಡ್ತೇನೆ ಎಂದರು. "ನನಗೆ ಈಗ ಅದರ ಅಗತ್ಯವಿಲ್ಲ'' ಎಂದಿದ್ದೇನೆ ಸ್ಪಷ್ಟವಾಗಿ. ನಾನು ಹೇಳಿದ್ದು ಸರಿ ತಾನೇ?''

ವಾಣಿ ಮೆಚ್ಚುಗೆಯಿಂದ, ಅಭಿಮಾನದಿಂದ ನೋಡಿದಳು ಚಂದ್ರುವನ್ನು.



## ಹೀಗೊಂದು ರಾಜಕೀಯ ಸರ್ಜರಿ

ಮೆಡಿಕಲ್–ಎಂಜಿನಿಯರಿಂಗ್ ಕಾಲೇಜುಗಳ ವಿವಾದ ಯಾವುದೇ ಒಂದು ರಾಜ್ಯಕ್ಕೆ ಸೀಮಿತವಲ್ಲ, ಕರ್ನಾಟಕದಲ್ಲಿ ಮೊಯಿಲಿ–ಬಂಗಾರಪ್ಪ ಮಟ್ಟಕ್ಕೆ ಅದು ಸೀಮಿತವಾದರೆ ತಮಿಳುನಾಡಿನಲ್ಲಿ ರಾಮಚಂದ್ರ ಮೆಡಿಕಲ್ ಕಾಲೇಜಿನ ವ್ಯವಹಾರ ಆಡಳಿತ ಪಕ್ಷ ವಿರೋಧ ಪಕ್ಷಗಳಿಂದ ಹಿಡಿದು ವಿದ್ಯಾರ್ಥಿಗಳ ವರೆಗೆ ಬಗೆ ಬಗೆಯಾಗಿದೆ. ಆದರೆ ಆಂಧ್ರದ ಸ್ಟೈಲೇ ಬೇರೆ. ಅಲ್ಲಿ ಅದು ಆಡಳಿತ ಪಕ್ಷದ ಅನ್ನುವುದಕ್ಕಿಂತ, ಆಂಧ್ರದ ಮುಖ್ಯಮಂತ್ರಿ ಜನಾರ್ದನ ರೆಡ್ಡಿಯವರ ಕುರ್ಚಿಯನ್ನೇ ಅಲ್ಲಾಡಿಸಿದೆ. ಮುಖ್ಯಮಂತ್ರಿಯ ವಿರೋಧಿಗಳು ಕಾಣಿಕೆ–ಶುಲ್ಕದ ವಿರುದ್ಧ ಒಂದು ಭಾರೀ ಪ್ರದರ್ಶನವನ್ನೇ ಏರ್ಪಡಿಸಿದ್ದರು.

ಆದರೆ ಅದಕ್ಕೆ ಪ್ರತಿಯಾಗಿ ಮುಖ್ಯಮಂತ್ರಿ ಬೆಂಬಲಿಗರು ಕಾಣಿಕೆ–ಶುಲ್ಕದ ಕಾಲೇಜುಗಳು ಬೇಕೇ ಬೇಕು ಎಂದು ಘೋಷಿಸಿ ಹಿಂದಿನ ಪ್ರದರ್ಶನದ ಮುಖದ ಮೇಲೆ ನಿವಾಳಿಸುವಂತೆ ಪ್ರತಿ ಪ್ರದರ್ಶನವನ್ನು ಏರ್ಪಡಿಸಿದರು.

ಈ ಪ್ರದರ್ಶನದಲ್ಲಿ ಮೆಡಿಕಲ್ ಕಾಲೇಜ್, ಇಂಜಿನಿಯರಿಂಗ್ ಕಾಲೇಜ್ ವಿದ್ಯಾರ್ಥಿಗಳು ಭಾಗ ವಹಿಸಿದ್ದರ! ಎಂದು ಆಶ್ಚರ್ಯಪಡಬಹುದು. ಹಾಂ! ತಿಳಿದುಕೊಳ್ಳಿ. ಇದರಲ್ಲಿ ಭಾಗವಹಿಸಿದವರು ಮೆಡಿಕಲ್–ಇಂಜಿನಿಯರಿಂಗ್ ಕಾಲೇಜಿನ ಕುರಿತು ತಿಳುವಳಿಕೆ ಇರಲಿ, ತಮ್ಮ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ನೀಡಲೂ ಸಾಧ್ಯವಾಗದ ಕೊಳಚೆಗಲ್ಲಿಯಲ್ಲಿ ವಾಸಿಸುವ, ಅಂದಂದಿನ ಕೂಳಿಗೆ ಕೂಲಿ ನಾಲಿ ಮಾಡುವ ಬಡವರು. ಈ ಬಡಜನರೇ ಹೀಗೆ ಹೇಳಿದ (!) ಮೇಲೆ ಮಿಕ್ಕಿದವರು ಕಾಣಿಕೆ ವಿಷಯದಲ್ಲಿ ಬಾಯಿ ಹರಿಬಿಡಬಹುದೇ! ಆದರೆ ಏನು ಮಾಡುವುದು. ಈಗ ಕೋರ್ಟಿನ ತೀರ್ಪು ಕಾಣಿಕೆ ಶುಲ್ಕದ ವಸೂಲಿಗೆ ವಿರೋಧವಾಗಿ ಬಂದಿತು. ಜೊತೆಗೆ ಆಂಧ್ರ ಮಂತ್ರಿ ಮಂಡಲದಲ್ಲಿ ಒಂದು ರಾಜಕೀಯ ಸರ್ಜರಿಯೂ (ಜನಾರ್ದನ ರೆಡ್ಡಿಯವರ ರಾಜೀನಾಮೆ) ಆಯಿತು.

Edited & Published by B. Viswanatha Reddi for DOLTON PUBLICATIONS, MADRAS-600 026
& Printed by B. V. REDDI at Prasad Process Private Ltd., Madras-600 026